# ಜೇಡರ ದಾಸಿಮಯ್ಯ: ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು

ಆಶಿಕಾ ಹೆಚ್.ಸಿ.

ಸಹಾಯಕ ಪ್ರಾಧ್ಯಾಪಕರು

ಸರ್ಕಾರಿ ಪ್ರಥಮದರ್ಜೆ ಕಾಲೇಜು

ಕನಕಗಿರಿ





ಮಾರ್ಗದರ್ಶಕರು

ಡಾ. ಕೆ. ರವೀಂದ್ರನಾಥ

ಪ್ರಾಧ್ಯಾಪಕರು

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ








ಕನ್ನಡ ವಿಶ್ವವಿದ್ಯಾಲಯ, ಹಂಪಿ

ಹಸ್ತಪ್ರತಿಶಾಸ್ತ್ರ ವಿಭಾಗ

ಭಾಷಾ ನಿಕಾಯ

ವಿದ್ಯಾರಣ್ಯ ೫೮೩ ೨೭೬

೨೦೧೯

# ಜೇಡರ ದಾಸಿಮಯ್ಯ: ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
**ಆಶಿಕಾ ಹೆಚ್.ಸಿ.**
ಸಹಾಯಕ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮದರ್ಜೆ ಕಾಲೇಜು
ಕನಕಗಿರಿ

ಮಾರ್ಗದರ್ಶಕರು
**ಡಾ. ಕೆ. ರವೀಂದ್ರನಾಥ**
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ಹಸ್ತಪ್ರತಿಶಾಸ್ತ್ರ ವಿಭಾಗ**
**ಭಾಷಾ ನಿಕಾಯ**
ವಿದ್ಯಾರಣ್ಯ ೫೮೩ ೨೭೬
೨೦೧೯



**ಡಾ. ಕೆ. ರವೀಂದ್ರನಾಥ**
**ಪ್ರಾಧ್ಯಾಪಕರು**
**ಹಸ್ತಪ್ರತಿಶಾಸ್ತ್ರ ವಿಭಾಗ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ ೫೮೩ ೨೭೬**

# ಮಾರ್ಗದರ್ಶಕರ ದೃಢೀಕರಣ ಪತ್ರ

**ಜೇಡರದಾಸಿಮಯ್ಯ: ಒಂದು ಅಧ್ಯಯನ** ಎಂಬ ಈ ಶೀರ್ಷಿಕೆಯ ಮಹಾಪ್ರಬಂಧವನ್ನು **ಆಶಿಕಾ ಹೆಚ್**.ಸಿ. ಅವರು ನನ್ನ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸಲಾಗಿದೆ.

ಮಾರ್ಗದರ್ಶಕರು
**ಡಾ.ಕೆ.ರವೀಂದ್ರನಾಥ**
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**

**ಸ್ಥಳ:** ವಿದ್ಯಾರಣ್ಯ
**ದಿನಾಂಕ:** ೧೦/೨/೧೫

# ಸಂಶೋಧಕರ ಪ್ರಮಾಣ ಪತ್ರ

**ಚೇಡರದಾಸಿಮಯ್ಯ: ಒಂದು ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾದ **ಡಾ.ಕೆ.ರವೀಂದ್ರನಾಥ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ಆಶಿಕಾ ಹೆಚ್.ಸಿ.**
ಸಂಶೋಧನ ವಿದ್ಯಾರ್ಥಿನಿ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ: 10/7/2019

# ಪರಿವಿಡಿ

# ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ ಮತ್ತು ಮಹತ್ವ, ವಿಧಾನ ಹಾಗೂ ಸ್ವರೂಪ

೧.೧. ಅಧ್ಯಯನದ ಉದ್ದೇಶ-ಮಹತ್ವ

೧.೨. ಅಧ್ಯಯನದ ವಿಧಾನ ಹಾಗೂ ವ್ಯಾಪ್ತಿ

೧.೩. ಅಧ್ಯಯನದ ಸ್ವರೂಪ

## ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ ಮತ್ತು ಮಹತ್ವ, ವಿಧಾನ ಹಾಗೂ ಸ್ವರೂಪ

ಭಾರತವು ಹಲವಾರು ಮತ, ಧರ್ಮಗಳಿಂದ, ಜನಾಂಗಗಳಿಂದ ಕೂಡಿದ ಅಖಂಡ ದೇಶ. ಬಹು ಸಂಸ್ಕೃತಿಗಳ ನಾಡು. ಇಲ್ಲಿ ಹಲವು ಧರ್ಮಗಳು ಹುಟ್ಟಿ, ನೆಲೆಸಿ, ಪ್ರಕರ್ಷಸ್ಥಿತಿಯನ್ನು ತಲುಪಿ, ಮತ್ತೊಂದು ಧರ್ಮದ ಹೇರಿಕೆಯಿಂದಲೋ, ಅನುಯಾಯಿಗಳ ಕೊರತೆಯಿಂದಲೋ ತಮ್ಮ ಪ್ರಭಾವನ್ನು ಕಳೆದುಕೊಂಡಿರುವುದನ್ನು ಕಂಡಿದ್ದೇವೆ. ಅಂತಹ ಧರ್ಮಗಳ ಸಾಲಿನಲ್ಲಿ ವೀರಶೈವ ಧರ್ಮವೂ ನಿಲ್ಲುತ್ತದೆ. ಇದನ್ನು ಪೋಷಿಸಿದ ರಾಜರು ಒಂದೆಡೆ ಇದ್ದರೆ, ಇದನ್ನು ಔನ್ನತ್ಯಕ್ಕೇರಿಸಿದ ವಚನಕಾರರು, ಶರಣರು ಮತ್ತೊಂದೆಡೆ ಇದ್ದಾರೆ. ಹೀಗೆ ವೀರಶೈವಧರ್ಮ ತನ್ನಲ್ಲಿನ ತತ್ವಾಚಾರಗಳಿಂದ ಜನರನ್ನು ಸೂರೆಗೊಂಡದ್ದರ ಜೊತೆಜೊತೆಗೆ ಸಮಾಜಮುಖಿ ಕಾರ್ಯಗಳನ್ನು ಕೈಗೊಳ್ಳುವ ಶರಣರ ಒಂದು ಬೃಹತ್ ಪಂಥವನ್ನೇ ನಿರ್ಮಾಣ ಮಾಡಿದೆ.

ಅಮಾನವೀಯ ಆಚರಣೆಗಳನ್ನು ಬದಿಗೊತ್ತಿ, ಸಾಮಾಜಿಕ ಮೌಲ್ಯಗಳನ್ನು ಎತ್ತಿ ಹಿಡಿಯುವ ಒಂದು ಅಮೃತಧಾರೆಯಾಗಿ ಈ ಧರ್ಮ ತನ್ನ ಬೇರುಗಳನ್ನು ಕರ್ನಾಟಕದಾದ್ಯಂತ ಗಟ್ಟಿಗೊಳಿಸಿತು. ತಮಿಳುನಾಡಿನಾದ್ಯಂತ ತಮ್ಮ ಕಾರ್ಯಕ್ಷೇತ್ರವನ್ನು ಅಲ್ಲಿನ ಶೈವ ಶರಣರೆನಿಸಿದ ನಾಯನ್ಮಾರರು ನಿರ್ವಹಿಸಿದರೆ, ಬಸವ ಮೊದಲಾದ ಶರಣರ ಕಾರ್ಯಕ್ಷೇತ್ರವು ಕರ್ನಾಟಕವಾಗಿದ್ದಂತು ನಿಜ. ಹೀಗೆ ಬಸವನಿಗೂ ಮೊದಲು ಕರ್ನಾಟಕವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿಸಿಕೊಂಡ ಶರಣರು ಹಲವರಿದ್ದಾರೆ.

ಬಸವಪೂರ್ವದ ಶರಣ ಆಂದೋಲನದಲ್ಲಿ ಜೇಡರದಾಸಿಮಯ್ಯ ಹಾಗೂ ದೇವರ ದಾಸಿಮಯ್ಯ ಎಂಬ ಇಬ್ಬರು ಶರಣರು ತಮ್ಮದೇ ಆದ ಕೊಡುಗೆಯನ್ನು ನೀಡಿದ್ದು, ಅವರನ್ನು ಇತ್ತೀಚಿನ ಅಲಕ್ಷಿತ ಶರಣರ ಸಾಲಿನಲ್ಲಿಯೇ ಇಟ್ಟು ನೋಡಲಾಗುತ್ತಿದ್ದುದನ್ನು ಕಾಣುತ್ತೇವೆ. ಹರಿಹರನಿಂದ ಮಹಾಂತದೇಶಿಕನವರೆಗೆ ಮತ್ತು ತೀರಾ ಇತ್ತೀಚಿನವರೆಗೆ ಈ ಇಬ್ಬರು

ಶರಣರ ಬಗ್ಗೆ ಹಲವು ಕೃತಿಗಳು ರಚನೆಗೊಂಡಿರುವುದನ್ನು ಕಾಣಬಹುದು. ಆದರೆ ಆ ಕೃತಿಗಳ ರಚನೆ ಹಾಗೂ ಪ್ರಸರಣವು ಕನ್ನಡಸಾಹಿತ್ಯ ಚರಿತ್ರೆಯಲ್ಲಿ ಕಾಣಬಹುದಾದ ರಾಜಕಾರಣದ ಸ್ಥಿತ್ಯಂತರಗಳನ್ನು ಆಧರಿಸಿರುವುದಂತು ಸತ್ಯ. ಹಾಗಾಗಿ ಈ ಇಬ್ಬರು ಶರಣರ ಬಗೆಗಿನ ಅಧ್ಯಯನ ಇಲ್ಲಿ ಪ್ರಧಾನವೆನಿಸುತ್ತದೆ.

ಸುಮಾರು ಹನ್ನೆರಡನೆಯ ಶತಮಾನದಲ್ಲಿ ಆಗಿಹೋದ ಶರಣರ ಆಂದೋಲನಕ್ಕೆ, ಅವರ ಸಂದೇಶಗಳಿಗೆ ಇಂದಿನ ಇಪ್ಪತ್ತೊಂದನೆಯ ಶತಮಾನದ ಶೋಷಿತ ಜನ ಸಮುದಾಯಗಳು ಸ್ಪಂದಿಸುತ್ತಿರುವುದು ಗಮನಾರ್ಹ. ವರ್ತಮಾನದಲ್ಲಿಯೂ ವಚನಕಾರರ ವಿಚಾರಧಾರೆಗಳನ್ನು ಜನರು ಆಶ್ರಯಿಸುತ್ತಿದ್ದಾರೆ. ಇಂದು ಬದಲಾದ ಕಾಲದಲ್ಲಿ ಈ ಚಿಂತನೆಗಳು ಮರುಹುಟ್ಟು ಪಡೆದುಕೊಂಡು, ಇಂದಿನ ಸಾಮಾಜಿಕ ಸನ್ನಿವೇಶಗಳಿಗೆ ಸ್ಪಂದಿಸುತ್ತಿರುವುದು ಮಹತ್ವದ ಸಂಗತಿ. ಇಂತಹ ಹರವುಳ್ಳ ಸಾಹಿತ್ಯದ, ಚಿಂತನೆಗಳ ನಿರ್ಮಾತೃಗಳ ಚರಿತ್ರೆಯನ್ನು ಗಮನಿಸಿದಾಗ ಗೊಂದಲಗಳ ಬೀಡಾಗಿ ಕಂಡು ಬರುತ್ತದೆ. ಹೀಗೆ ಗೊಂದಲಗಳ ನಡುವೆಯೂ ತಮ್ಮದೇ ಪ್ರಭಾವವನ್ನು ಇಂದಿಗೂ ಉಳಿಸಿಕೊಂಡಿರುವ ವಚನಕಾರ ಜೇಡರದಾಸಿಮಯ್ಯ. ಮೂಲಭೂತ ವಾದ ಎಲ್ಲಾ ಆಚರಣೆಗಳಿಗೆ ಮೊದಲು ಧ್ವನಿ ಎತ್ತಿದ ಶರಣ ಎಂದು ಈತನನ್ನು ಚರಿತ್ರೆಯಲ್ಲಿ ಗುರುತಿಸಲಾಗುತ್ತಿದೆ. ಇಂತಹ ಶರಣನ ಜೀವನ ಸಾಧನೆಗಳ ಕುರಿತದ್ದು, ಪ್ರಸ್ತುತ ಪ್ರಬಂಧ 'ಜೇಡರ ದಾಸಿಮಯ್ಯ: ಒಂದು ಅಧ್ಯಯನ'.

## ೧.೧. ಅಧ್ಯಯನದ ಉದ್ದೇಶ ಮತ್ತು ಮಹತ್ವ

ಆದ್ಯ ವಚನಕಾರ ಎಂದು ಜನಮನ್ನಣೆಗೆ ಪಾತ್ರನಾದ ಜೇಡರದಾಸಿಮಯ್ಯ ಕೆಲವರ ಪ್ರಕಾರ ದೇವರದಾಸಿಮಯ್ಯ ಎಂದು ಪರಿಚಿತನಾದರೆ, ಜೇಡರದಾಸಿಮಯ್ಯ ವಚನಕಾರನಾಗಿಯೂ ದೇವರದಾಸಿಮಯ್ಯ ಸುಗ್ಗಲಾದೇವಿಯ ಗುರುವಾಗಿಯೂ ಪರಿಚಿತನಾಗಿದ್ದಾನೆ. ದೇವರದಾಸಿಮಯ್ಯ ಮತ್ತು ಜೇಡರದಾಸಿಮಯ್ಯ ಇಬ್ಬರು ಬೇರೆ ಬೇರೆ ಹಾಗೂ ಒಂದೇ ಎಂಬ ಚರ್ಚೆಗಳು ಸಾಹಿತ್ಯ ವಲಯದಲ್ಲಿ ನಡೆದಿವೆ. ಇದಕ್ಕೆ ಅಂತಿಮ ನಿರ್ಣಯವನ್ನು ನೀಡುವತ್ತ ಅಧ್ಯಯನಗಳೂ ನಡೆಯುತ್ತಿವೆ. ಆದರೂ ಸ್ಪಷ್ಟತೆ ದೊರೆಯದಿರುವುದು ಸಾಹಿತ್ಯ ವಲಯದ ಸವಾಲಾಗಿ ಕಂಡು ಬರುತ್ತಿದೆ. ಹೀಗಾಗಿ ಈ ಅಧ್ಯಯನ ಕುತೂಹಲಕರವಾದ ಜಿಜ್ಞಾಸೆಯನ್ನು ಒಳಗೊಂಡಿದೆ.

ಇದುವರೆಗೆ ಅನೇಕ ಸಂಶೋಧನಾ ಮಹಾ ಪ್ರಬಂಧಗಳು ಈ ವಿಷಯದ ಕುರಿತಾಗಿ ರಚನೆಯಾಗಿವೆ. 'ಸಗರನಾಡಿನ ಶಿವಶರಣರು' ಎಂಬ ಮಹಾಪ್ರಬಂಧವನ್ನು ಡಾ.ರಾಮರೆಡ್ಡಿ, ಎಸ್.ರೆಡ್ಡೇರ ಅವರು ರಚಿಸಿದ್ದಾರೆ. ಇಲ್ಲಿಯೂ ಕೂಡ ದೇವರದಾಸಿಮಯ್ಯ ಮತ್ತು ಜೇಡರದಾಸಿಮಯ್ಯ ಒಂದೇ ಎಂಬ ಅಭಿಪ್ರಾಯವನ್ನು ಅಧ್ಯಯನಕಾರರು ವ್ಯಕ್ತಪಡಿಸಿದ್ದಾರೆ.

ಗಂಗಮ್ಮ ಸತ್ಯಂಪೇಟೆ (ಗಂಗಮ್ಮ.ಎಚ್.ಎಸ್.) ಅವರ 'ಮುದನೂರ ದಾಸಿಮಯ್ಯ: ಒಂದು ಅಧ್ಯಯನ' ಎಂಬ ಮಹಾಪ್ರಬಂಧವು ದಾಸಿಮಯ್ಯನನ್ನು ಕುರಿತು ಅಧ್ಯಯನ ಮಾಡಿದ ಸ್ವತಂತ್ರ ಅಧ್ಯಯನವಾಗಿದೆ. ದಾಸಿಮಯ್ಯನ ಕುರಿತ ಸ್ವತಂತ್ರ ಅಧ್ಯಯನವಲ್ಲದಿದ್ದರೂ, ಅನ್ನಪೂರ್ಣ ಜಾಲವಾದಿಯವರ 'ಶಂಕರದಾಸಿಮಯ್ಯನ ಪುರಾಣ ಒಂದು ಅಧ್ಯಯನ'ವು ದಾಸಿಮಯ್ಯನ ಕುರಿತ ಮಹತ್ವದ ವಿಷಯಗಳನ್ನು ಒಳಗೊಂಡಿದೆ. ಈ ಮಹಾ ಪ್ರಬಂಧಗಳನ್ನು ಹೊರತು ಪಡಿಸಿದರೆ, ಕೆಲವು ಎಂ.ಫಿಲ್ ಕಿರು ಪ್ರಬಂಧಗಳು ಸಿದ್ಧಗೊಂಡಿವೆ. ಅಂತೆಯೇ ದಾಸಿಮಯ್ಯನ ಬಗೆಗೆ ಕೃತಿಗಳು ಮತ್ತು ಲೇಖನಗಳು ರಚನೆಯಾಗಿವೆ.

ದಾಸಿಮಯ್ಯನ ಕುರಿತು ಬಂದಿರುವ ಎಲ್ಲ ಕೃತಿಗಳು ಹಾಗೂ ಲೇಖನಗಳನ್ನು ಆಕರವಾಗಿಸಿ ಕೊಂಡು ಈವರೆಗಿನ ಚರ್ಚೆಗಳನ್ನು ಸಾಧನವಾಗಿಸಿಕೊಂಡು ದಾಸಿಮಯ್ಯನ ಕುರಿತ ಮೌಲ್ಯ ನಿರ್ಣಯವನ್ನು ಕೈಗೊಳ್ಳುವುದು ಈ ಅಧ್ಯಯನ ಉದ್ದೇಶಗಳಲ್ಲೊಂದು. ದಾಸಿಮಯ್ಯನ ಚರಿತ್ರೆಯನ್ನು ನಿರೂಪಿಸಲು ಸಹಕಾರಿಯಾಗುವ ಆಕರಗಳಲ್ಲಿ ವಚನಗಳು, ಕಾವ್ಯಪುರಾಣಗಳು, ಪುರಾತತ್ವ ಅವಶೇಷಗಳು ಪ್ರಮುಖ ಸಾಧನಗಳಾಗಿವೆ. ಈ ಎಲ್ಲ ಸಾಧನಗಳನ್ನು ಬಳಸಿಕೊಂಡು ಚಾರಿತ್ರಿಕ ಹಾಗೂ ಸಾಂಸ್ಕೃತಿಕವಾಗಿ ದಾಸಿಮಯ್ಯನ ಚರಿತ್ರೆಯನ್ನು ನಿರೂಪಿಸಿರುವುದು ಈ ಮಹಾಪ್ರಬಂಧದ ಪ್ರಮುಖ ಉದ್ದೇಶವಾಗಿದೆ.

ಇಂದಿನ ದಿನಮಾನಗಳಲ್ಲಿ ಸಮುದಾಯಗಳು ಸ್ವತಂತ್ರ ಅಸ್ಥಿತ್ವವನ್ನು ಬಯಸುತ್ತವೆ. ಈ ಕಾರಣವಾಗಿ ಆ ಸಮುದಾಯದ ಸಾಂಸ್ಕೃತಿಕ ನಾಯಕನ ಹುಡುಕಾಟವನ್ನೂ ಮಾಡುತ್ತಿವೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ನೇಕಾರರು ತಮ್ಮ ಸಾಂಸ್ಕೃತಿಕ, ನಾಯಕರನ್ನಾಗಿ ಜೇಡರದಾಸಿಮಯ್ಯ ನನ್ನು, ಆತನ ಇಷ್ಟದೈವವಾದ ರಾಮನಾಥನನ್ನು ಆರಾಧಿಸುವುದನ್ನು ಕಾಣುತ್ತೇವೆ. ಹೀಗಾಗಿ ನೇಕಾರ ಅಥವಾ ದೇವಾಂಗ ಹೆಸರಿನ ದೇವಾಂಗ ಪುರಾಣ ಮೊದಲಾದ ಗ್ರಂಥಗಳನ್ನು ಅಧ್ಯಯನಕ್ಕೆ ಒಳಪಡಿಸುವ ಉದ್ದೇಶವನ್ನು ಹೊಂದಿದೆ.

ಡಾ. ವಿಜಯಕುಮಾರ ಎಂ ಬೋರಟ್ಟಿ ಅವರು 'ಹಿರಿಯರ ಹಿರಿತನ ಹಿಂದೇನಾಯಿತು' ಎಂಬ ಕೃತಿಯಲ್ಲಿ ಹೇಳುವಂತೆ ವೀರಶೈವವು ಧಾರ್ಮಿಕವಾಗಿ ಅಷ್ಟೇ ಅಲ್ಲದೆ ಆರ್ಥಿಕ ವಿಷಯಗಳಲ್ಲಿ ಹೆಚ್ಚಿನ ಆಸಕ್ತಿ ತೋರಿತು. ಸುಮಾರು ವರ್ತಕರು, ನೇಕಾರರು, ಚರ್ಮ ಕಾಯಕದವರು, ಬಡಿಗರು, ಹಗ್ಗ ಮಾಡುವವರು, ಈಡಿಗರು, ಸಿಂಪಿಗರು ಸೇರಿದಂತೆ ಕೃಷಿಕರು ಹೆಚ್ಚಿನ ಮಟ್ಟದಲ್ಲಿ ವೀರಶೈವವನ್ನು ಅನುಸರಿಸಿದ್ದರು. ಧಾರವಾಡ, ಬಿಜಾಪುರ, ಬೆಳಗಾಂ ಜಿಲ್ಲೆಗಳಲ್ಲಿ ಹತ್ತಿ ಬೆಳೆ ಹೆಚ್ಚಾಗಿದ್ದು ನೇಕಾರರು ಹತ್ತಿ ಬೆಳೆಯ ಮೇಲೆ ಅವಲಂಬಿಯಾಗಿದ್ದರು. ಧರ್ಮ ಸಂಕರದ ಪ್ರಭಾವದಿಂದ ಅತಿಹೆಚ್ಚು ನೇಕಾರರು ವೀರಶೈವ ಮಾರ್ಗವನ್ನ ಅನುಸರಿಸಿದರು.

ಈಗಲೂ ಈ ಜಿಲ್ಲೆಗಳಲ್ಲಿ ಲಿಂಗಾಯತಧರ್ಮಿಗಳಲ್ಲಿ ನೇಕಾರರು ಮತ್ತು ಗಾಣಿಗರು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ ಎಂಬ ವಿಷಯವನ್ನು ಪ್ರಸ್ತುತ ಪಡಿಸುತ್ತಾರೆ. ಇದ್ದನ್ನಾಧರಿಸಿ ವೀರಶೈವ ಪ್ರಾರಂಭದ ಹಂತದಲ್ಲಿ ಹೆಚ್ಚು ಪ್ರಭಾವಿಯಾದವರು ಕೃಷಿಕರು ಹಾಗೂ ಕಸುಬುದಾರರು ಎಂದು ಹೇಳಬಹುದು. ನೇಕಾರ ಕಸುಬನ್ನು ಮತ್ತು ಕೃಷಿಯನ್ನು ಆಧರಿಸಿದ ಜೇಡರದಾಸಿಮಯ್ಯ ಹಾಗೂ ಅದೇ ವೃತ್ತಿಯ ಅಥವಾ ಜೀರ(ಜೀಯ, ಅರ್ಚಕ)ವೃತ್ತಿಯ ದೇವರದಾಸಿಮಯ್ಯ ಈ ಇಬ್ಬರ ಕುರಿತಾದ ವೃತ್ತಿ ಹಾಗೂ ಧರ್ಮ ಸಂಕರದ ಕಾಲದ ಅನಿವಾರ್ಯತೆಯನ್ನು ಚರ್ಚಿಸುವ ಉದ್ದೇಶವನ್ನು ಅಧ್ಯಯನ ಒಳಗೊಂಡಿದೆ.

ವಚನಕಾರರು ತಮ್ಮ ಜಾತಿ ಮತಗಳ ಸೂಚಕವಾಗಿ ತಮ್ಮನ್ನು ಗುರುತಿಸಿಕೊಳ್ಳುವುದಕ್ಕಿಂತ ಹೆಚ್ಚಾಗಿ ಅವರ ಹೆಸರುಗಳೊಂದಿಗೆ ಅವರ ವೃತ್ತಿಗಳ ಹೆಸರನ್ನು ಸೇರಿಸಿ ಕರೆಯುವ ಪರಿಪಾಟ ಚರಿತ್ರೆಯಲ್ಲಿ ಕಂಡುಬರುತ್ತದೆ. ಕುಂಬಾರ ಗುಂಡಯ್ಯ, ಮಡಿವಾಳ ಮಾಚಿದೇವ, ಅಂಬಿಗರ ಚೌಡಯ್ಯ ಹೀಗೆ. ಇದೇ ಕಾಲಾನುಕ್ರಮಣಿಕೆಯಲ್ಲಿ ಜಾತಿಸೂಚಕವಾಗಿ ಅವರುಗಳನ್ನು ಕರೆದು ಆರಾಧಿಸುವುದನ್ನು ಕಾಣುತ್ತೇವೆ. ಇಂತಹ ಭಿನ್ನ ಬದಲಾವಣೆಗೆ ಜೇಡರದಾಸಿಮಯ್ಯನೂ ಹೊರತಾಗಿಲ್ಲ ಎನ್ನಬಹುದು. ಜೇಡರದಾಸಿಮಯ್ಯನು ಮೊದಲು 'ಜೇಡರ' ವೃತ್ತಿಗೆ ಸೇರಿದ್ದು, ನಂತರದಲ್ಲಿ ಈತನನ್ನು 'ಜೇಡರ' ವಿಶೇಷಣದಿಂದ ಗುರುತಿಸದೆ ದೇವರದಾಸಿಮಯ್ಯ ಎಂದು ಕರೆಯಲು ಆರಂಭಿಸುತ್ತಾರೆ. ಅಲ್ಲಮನು ಪ್ರಭುದೇವರಾದಂತೆ ಜೇಡರದಾಸಿಮಯ್ಯನು ಗೌರವಾರ್ಥವಾಗಿ ದೇವರದಾಸಿಮಯ್ಯನಾದ ಎಂಬ ವಾದ ಒಂದೆಡೆ ಇದ್ದರೆ, ಮತ್ತೊಂದೆಡೆ ಈ ಇಬ್ಬರು ಶರಣರು ವ್ಯಕ್ತಿಗತವಾಗಿ ಬೇರೆ ಎನ್ನುವ ವಾದ ಇನ್ನೊಂದೆಡೆ ಇದೆ. ಈ ರೀತಿಯ ಚರ್ಚೆಗಳನ್ನು ಸಮಾಲೋಚಿಸುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ.

ಜೇಡರದಾಸಿಮಯ್ಯನ ಊರು ಮುದನೂರು. ಇದು ಒಂದು ಚಾರಿತ್ರಿಕ, ಪೌರಾಣಿಕ (ಪುರಾಣಗಳಲ್ಲಿ ಚಿತ್ರಿತಗೊಂಡಿದ್ದರಿಂದ) ಸ್ಥಳವಾಗಿದೆ. ಈ ಸ್ಥಳದ ಮಹಿಮೆ, ಇಲ್ಲಿನ ಚಾರಿತ್ರಿಕ ಸಂಗತಿಗಳು ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಅಭ್ಯಸಿಸುವ ಉದ್ದೇಶವನ್ನು ಈ ಮಹಾಪ್ರಬಂಧ ಹೊಂದಿದೆ.

ಈ ಎಲ್ಲ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಒಟ್ಟಾರೆಯಾಗಿ ಜೇಡರದಾಸಿಮಯ್ಯನ ಕುರಿತು ಚಾರಿತ್ರಿಕ, ಪೌರಾಣಿಕ, ಸಾಂಸ್ಕೃತಿಕ ಅಂಶಗಳನ್ನು ಅಧ್ಯಯನ ಮಾಡುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ. ಡಿ.ಎಲ್. ನರಸಿಂಹಚಾರ್ಯರು 'ದೇವರ ದಾಸಿಮಾರ್ಯ ಪ್ರಶಸ್ತಿಯಲ್ಲಿ ಹೇಳುವಂತೆ "ದೇವರದಾಸಿಮಯ್ಯನ ಕಥೆಗಳನ್ನು ತಿಳಿಸುವ ಎಲ್ಲ ಪುರಾಣಗಳನ್ನು ಹೋಲಿಸಿ ನೋಡಿ ಯಾವ ಯಾವುದು ಹೇಗೆ ಹೇಗೆ ಪ್ರವೃದ್ಧವಾಗಿ ಹಬ್ಬಿದೆ ಎಂಬುದನ್ನು

ಕಂಡು ಹಿಡಿಯುವ ಕೆಲಸ ಮುಂದಕ್ಕೆ ನಡೆಯಬೇಕಾದ ಅವಶ್ಯಕತೆ ಇದೆ" ಎಂಬ ಆಶಯವನ್ನು ಅಧ್ಯಯನಕ್ಕೊಳಪಡಿಸುವ ಮತ್ತೊಂದು ಪ್ರಯತ್ನ ಈ ಮಹಾ ಪ್ರಬಂಧದ್ದಾಗಿದೆ.

## ೧.೨. ಅಧ್ಯಯನದ ವಿಧಾನ ಹಾಗೂ ವ್ಯಾಪ್ತಿ

ಜೇಡರದಾಸಿಮಯ್ಯನು ತನ್ನ ವಚನಗಳ ಮೂಲಕ ಓದುಗರನ್ನು ತಲುಪಿದ್ದರೂ, ವ್ಯಕ್ತಿಗತವಾಗಿ ಇನ್ನೂ ಅಪರಿಚಿತನಾಗಿಯೇ ಇರುವುದು ಕಂಡು ಬರುತ್ತದೆ. ಅಂತಹ ಕೊರತೆಯನ್ನು ನೀಗಿಸುವ ಮತ್ತೊಂದು ಪ್ರಯತ್ನವನ್ನು ಪ್ರಸ್ತುತ ಅಧ್ಯಯನ ನಿರ್ವಹಿಸುತ್ತದೆ. ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ ಈ ಇಬ್ಬರನ್ನೂ ವ್ಯಕ್ತಿಗತವಾಗಿ ನೋಡುವ ಉದ್ದೇಶ ಹೊಂದಿದ್ದು, ಇದಕ್ಕೆ ಸಂಬಂಧಿಸಿದ ಆಕರಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಜೇಡರದಾಸಿಮಯ್ಯನಿಗೆ ಮತ್ತು ದೇವರದಾಸಿಮಯ್ಯನಿಗೆ ಸಂಬಂಧಿಸಿದ ಆಕರಗಳನ್ನು ತೌಲನಿಕವಾಗಿ ನೋಡಲು ಅಧ್ಯಯನ ಬಯಸುತ್ತದೆ. ಜೇಡರದಾಸಿಮಯ್ಯನ ಕುರಿತು ಎಲ್ಲ ಆಕರಗಳು ಹಾಗೂ ಅವುಗಳಿಗೆ ಒದಗಿದ ಪ್ರೇರಣೆಯನ್ನು ವಿಮರ್ಶಿಸುವ ಆಶಯವನ್ನು ಅಧ್ಯಯನ ಹೊಂದಿದೆ. ಸಾಂಸ್ಕೃತಿಕ ಹಾಗೂ ಚಾರಿತ್ರಿಕ ಅಂಶಗಳನ್ನು ಗುರುತಿಸುವಲ್ಲಿ ಅಧ್ಯಯನದಲ್ಲಿ ಆಕರಶೋಧದ ಮಾದರಿಯನ್ನು ಅನುಸರಿಸಲಾಗಿದೆ. ಅಷ್ಟೆ ಅಲ್ಲ. ಕರ್ನಾಟಕ ಚರಿತ್ರೆಯಲ್ಲಿ ಕಂಡು ಬರುವ ಹಲವು ಶಾಸನಗಳನ್ನು, ವಚನಗಳನ್ನು ಹಾಗೂ ಜೇಡರದಾಸಿಮಯ್ಯನ ಬಗೆಗೆ ದೊರೆಯುವ ಎಲ್ಲ ಆಕರಗಳನ್ನು ಪ್ರಾಸಂಗಿಕವಾಗಿ ಚರ್ಚಿಸುತ್ತಾ, ಆ ಚರ್ಚೆಗಳನ್ನು ಕನ್ನಡ ಸಾಹಿತ್ಯದಲ್ಲಾದ ಚರ್ಚೆಗಳೊಂದಿಗೆ ಮತ್ತು ವಿಶ್ಲೇಷಣೆಗಳಿಗೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

ಬೇರೆ ಬೇರೆ ಚಿಂತಕರು ದಾಸಿಮಯ್ಯ, ಆತನ ವೈಯಕ್ತಿಕ ವಿವರ, ವಚನಗಳು, ಆತನ ಕುರಿತ ಚರಿತ್ರೆಗಳನ್ನು ಚರ್ಚಿಸುವಾಗ ನಡೆದಿರುವ ಅನುಸಂಧಾನದ ನೆಲೆಗಳಲ್ಲಿ ಹಲವಾರು ವ್ಯತ್ಯಾಸಗಳು ಕಂಡು ಬರುತ್ತವೆ. ಅಂತಹ ವ್ಯತ್ಯಾಸಗಳನ್ನು ಪ್ರಬಂಧದಲ್ಲಿ ಗಮನಿಸಲಾಗುವುದು. ಚರಿತ್ರೆಯ ಒಂದು ಕಾಲಘಟ್ಟದಲ್ಲಿ ಹುಟ್ಟಿ, ತನ್ನದೇ ಆದ ಪ್ರಭಾವವನ್ನು ಬೇರೆ ಸಮಕಾಲೀನ ಸಂದರ್ಭದಲ್ಲಿಯೂ ಚರ್ಚೆಗೊಳ್ಳುತ್ತಿರುವ ಈ ವಸ್ತುವಿನ ಅಧ್ಯಯನದಲ್ಲಿ ವಿವರಣಾತ್ಮಕ ಸಂಶೋಧನಾ ವಿಧಾನವನ್ನು ಪ್ರಬಂಧದಲ್ಲಿ ಪ್ರಸ್ತುತಗೊಳಿಸಲಾಗಿದೆ.

ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯರು ಕರ್ನಾಟಕ ಮತ್ತು ತೆಲುಗು ಸಂಸ್ಕೃತಿಗಳ ಅನನ್ಯತೆಗೆ ಪೂರಕವಾದಂತಹ ಶರಣರು. ಇವರ ಕುರಿತ ತೌಲನಿಕ, ವಿಶ್ಲೇಷಣಾತ್ಮಕ, ವಿವರಣಾತ್ಮಕ ಚರ್ಚೆಗಳಂತೆ ಹಲವು ಆಕರಗಳ ಶೋಧಕಾರ್ಯಗಳೂ ಪ್ರೇರಣೆಯನ್ನೊದಗಿಸುತ್ತವೆ. ಅಂತೆಯೇ ಅಗತ್ಯವಿದ್ದಲ್ಲಿ ಕ್ಷೇತ್ರಕಾರ್ಯವನ್ನು ಈ ಅಧ್ಯಯನ ಬಯಸುತ್ತದೆ. ಅಂತಹದ್ದೇ

ನೆಲೆಯಲ್ಲಿ ಕಾರ್ಯವನ್ನೂ ನಿರ್ವಹಿಸಿದೆ. ದಾಸಿಮಯ್ಯನಿಗೆ ಸಂಬಂಧಿಸಿದಂತೆ ಅಧ್ಯಯನಕ್ಕೆ ಪೂರಕವಾಗುವಂತೆ ಆಕರಗಳನ್ನು ಬಳಸಿಕೊಳ್ಳುತ್ತಾ ಅದರ ವ್ಯಾಪ್ತಿಯನ್ನು ಹೀಗೆ ಗುರುತಿಸಿ ಕೊಳ್ಳಲಾಗಿದೆ.

ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯನನ್ನು ಕುರಿತ ಪ್ರಾಚೀನ ಸಾಹಿತ್ಯ ಪ್ರಕಾರಗಳಾದ ವಚನಗಳನ್ನು, ಕಾವ್ಯ-ಪುರಾಣಗಳಲ್ಲಿ ಕಂಡುಬರುವ ಉಲ್ಲೇಖಗಳನ್ನು ಅಧ್ಯಯನದ ಆಕರಗಳಾಗಿ ಬಳಸಿಕೊಳ್ಳಲಾಗಿದೆ. ಆಧುನಿಕ ಸಾಹಿತ್ಯ ಪ್ರಕಾರಗಳಾದ ಸಂಶೋಧನಾ ಗ್ರಂಥಗಳು, ವಿಮರ್ಶೆ ಕೃತಿಗಳು ಹಾಗೂ ಲೇಖನಗಳನ್ನು ಅಧ್ಯಯನದ ವ್ಯಾಪ್ತಿಗೆ ತಂದುಕೊಳ್ಳಲಾಗಿದೆ. ಜೇಡರದಾಸಿಮಯ್ಯನಿಗೆ ಸಂಬಂಧಿಸಿದ ಶಾಸನಗಳು, ಮುದನೂರು ದೇವಾಲಯ, ಅಲ್ಲಿನ ಶಿಲ್ಪ, ಇತರೆ ದೇವಾಲಯಗಳು, ಚಾರಿತ್ರಿಕ ಅವಶೇಷಗಳನ್ನು ಅಭ್ಯಸಿಸಲಾಗಿದೆ.

ಜೇಡರದಾಸಿಮಯ್ಯನ ಜೀವನದಲ್ಲಿ ನಡೆದಂತಹ ಘಟನೆಗಳನ್ನು ವೀರಶೈವ, ಪಾಶುಪತ, ಅಭಿವನಪಾಶುಪತದ ಚಾರಿತ್ರಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗುವುದು. ಇದಕ್ಕೆ ಸಂಬಂಧಿಸಿದ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಕೆಲವು ಚಿಂತಕರ ವೈಯಕ್ತಿಕ ಅನುಭವಗಳನ್ನು, ಕ್ಷೇತ್ರಕಾರ್ಯದಲ್ಲಿನ ಕೆಲವು ವಕ್ತೃಗಳ ಹೇಳಿಕೆಗಳನ್ನು, ಸಂದರ್ಶನಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಕ್ರಿಶ ಸುಮಾರು ೧೨ನೇ ಶತಮಾನದಿಂದೀಚೆಗಿನ ಜೇಡರದಾಸಿಮಯ್ಯ ಹಾಗೂ ಆತನಿಗೆ ಸಂಬಂಧಿಸಿದ ಎಲ್ಲಾ ಸಾಹಿತ್ಯವನ್ನು, ಆಕರಗಳನ್ನು ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ.

ಜೇಡರದಾಸಿಮಯ್ಯನ ವಚನಗಳನ್ನು ಈ ಅಧ್ಯಯನದಲ್ಲಿ ಪ್ರತ್ಯೇಕವಾಗಿ ವಿಶ್ಲೇಷಣೆಗೆ ಒಳಪಡಿಸದೆ, ಅವುಗಳನ್ನು ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ. ಜೇಡರದಾಸಿಮಯ್ಯನ ವೈಯಕ್ತಿಕ ಬದುಕನ್ನು ವಿವರಿಸುವಾಗ ಮತ್ತು ದೇವರದಾಸಿಮಯ್ಯನಿಗಿಂತಲೂ ಭಿನ್ನ ಎಂಬುದನ್ನು ವಿವರಿಸುವಾಗ ವಚನಗಳನ್ನು ಒಳಗೊಂಡಂತೆ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

### ೧.೩. ಅಧ್ಯಯನದ ಸ್ವರೂಪ

ಜೇಡರದಾಸಿಮಯ್ಯನ ಜೀವನ ವೃತ್ತಾಂತವನ್ನು ಕಥೆ, ಪುರಾಣಗಳ ಮೂಲಕ ತಿಳಿಯುವುದು; ಆ ಮೂಲಕ ದೇವರದಾಸಿಮಯ್ಯ ಮತ್ತು ಜೇಡರದಾಸಿಮಯ್ಯ ಬೇರೆ ಬೇರೆ ಎಂದು ನಿರೂಪಿಸುವುದು ಈ ಅಧ್ಯಯನದ ಪ್ರಮುಖ ಉದ್ದೇಶವಾಗಿರುವುದರಿಂದ ಮೊದಲನೇ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ಅದರ ವೈಧಾನಿಕತೆ, ಸ್ವರೂಪಗಳನ್ನು ಚರ್ಚಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಜೇಡರದಾಸಿಮಯ್ಯನ ಕುರಿತು ಈವರೆಗೆ ಬಂದಂತಹ ಸಾಹಿತ್ಯದ ಸಮೀಕ್ಷೆಯನ್ನು ಮಾಡಲಾಗಿದೆ. ಇಲ್ಲಿ ಇದುವರೆಗೆ ಈ ವಿಷಯದ ಕುರಿತು ನಡೆದ ಅಧ್ಯಯನಗಳನ್ನು

ಚರ್ಚಿಸಲಾಗಿದೆ. ಮಹಾಪ್ರಬಂಧಗಳು, ಕೃತಿಗಳು ಹಾಗೂ ಲೇಖನಗಳು ಎಂಬ ಮೂರು ಭಾಗಗಳಲ್ಲಿ ವಿವರಿಸಲಾಗಿದೆ. ಅಧ್ಯಾಯ ಮೂರರಲ್ಲಿ ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯರ ಜೀವನ, ವೃತ್ತಿ, ಅಂಕಿತ, ಪವಾಡಗಳಿಗೆ ಸಂಬಂಧಿಸಿದ ವಿಚಾರಗಳ ಬಗ್ಗೆ ಮುಂದುವರೆದ ಅಧ್ಯಯನವನ್ನು ಮಾಡಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಜೇಡರದಾಸಿಮಯ್ಯನಿಗೆ ಸಂಬಂಧಿಸಿದ ಆಕರಗಳನ್ನು ಚರ್ಚೆ ಮಾಡಲಾಗಿದೆ. ಅಂದರೆ ಶಾಸನಗಳು, ಜೇಡರ ದಾಸಿಮಯ್ಯನ ವಚನಗಳು, ಆತನ ಬಗ್ಗೆ ಉಲ್ಲೇಖವಿರುವ ಇತರ ಶರಣರ ವಚನಗಳು, ಕಾವ್ಯಗಳು ಹೇಗೆ ದಾಸಿಮಯ್ಯನ ಚರಿತ್ರೆಯನ್ನು ನಿರೂಪಿಸಲು ಪೂರಕವಾಗುತ್ತವೆಂಬ ಆಶಯ ಈ ಅಧ್ಯಾಯದ್ದಾಗಿದೆ.

ಅಧ್ಯಾಯ ಐದರಲ್ಲಿ ಜೇಡರದಾಸಿಮಯ್ಯನಿಗೆ ಸಂಬಂಧಿಸಿದ ಸಾಹಿತ್ಯ ಕೃತಿಗಳಾದ ವಿರೂಪಾಕ್ಷ ದೇಶಿಕನ ದೇವರದಾಸಿಮಯ್ಯ ಪುರಾಣ, ರಾಘವಾಂಕನದೆನ್ನಲಾದ ದೇವಾಂಗ ದಾಸಿಮಯ್ಯ ಪುರಾಣ, ಅಯ್ಯಪ್ಪ ಕವಿಯ ದೇವಾಂಗ ಪುರಾಣ, ಮಹಾಂತದೇಶಿಕನ ಶಿವಶರಣ ವಿಳಾಸ ಈ ಕೃತಿಗಳೊಂದಿಗೆ ಕನ್ನಡ ವಚನ ಶ್ರೀ ದೇವಾಂಗ ಪುರಾಣವನ್ನೊಳಗೊಂಡು ಇಲ್ಲಿನ ಕಥಾವಸ್ತುವನ್ನು ವಿವರಿಸಲಾಗಿದೆ. ಇದರೊಂದಿಗೆ ಇಂತಹ ಕಥೆಗಳು ಪುರಾಣ ಕಥೆಗಳು, ದಂತ ಕತೆಗಳು, ಆಗಿರಬಹುದಾದರೂ ಅವುಗಳ ಅಧಾರದ ಮೇಲೆ ದಾಸಿಮಯ್ಯರ ಜೀವನದೆಡೆಗೆ ನಮ್ಮನ್ನು ಕರೆದೊಯ್ಯುವ ಮಹತ್ವದ ಸಾಧನಗಳಾಗಿ ಕಂಡುಬರುತ್ತವೆ. ಅಂತಹವುಗಳ ತೌಲನಿಕ ಚರ್ಚೆಯನ್ನು ಮಾಡಲಾಗಿದೆ.

ಅಧ್ಯಾಯ ಆರರಲ್ಲಿ ಜೇಡರದಾಸಿಮಯ್ಯನಿಗೆ ಸಂಬಂಧಿಸಿದಂತೆ ಮುದನೂರನ್ನು ಸಾಂಸ್ಕೃತಿಕ ವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಜೇಡರದಾಸಿಮಯ್ಯನಿಗೆ ಸಂಬಂಧಿಸಿದ ದೇವಾಲಯಗಳು, ಅಲ್ಲಿನ ಚರಿತ್ರೆ, ಕಲೆ ವಾಸ್ತುಶಿಲ್ಪ, ಆತನ ಊರು ಮೊದಲಾದವುಗಳಿಗೆ ಸಂಬಂಧಿಸಿದ ವಿಷಯಗಳನ್ನು ಈ ಅಧ್ಯಾಯ ಒಳಗೊಂಡಿದೆ.

ಈ ಮಹಾಪ್ರಬಂಧದ ಕೊನೆಯಲ್ಲಿ ಅಧ್ಯಯನದ ಫಲಶ್ರುತಿ ಸಮಾರೋಪವನ್ನು ನೀಡಲಾಗಿದೆ. ಇಲ್ಲಿ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಕೊಡುವುದರ ಮೂಲಕ; ದಾಸಿಮಯ್ಯನಿಗೆ ಸಂಬಂಧಿಸಿದಂತೆ ಮುದನೂರಿನ ದೇವಾಲಯ, ಅಲ್ಲಿನ ಪುಷ್ಕರಣಿಗಳು ಮೊದಲಾದ ಅವಶೇಷಗಳ ಛಾಯಾಚಿತ್ರಗಳನ್ನು ಹಾಗೂ ಪರಾಮರ್ಶನ ಗ್ರಂಥಗಳನ್ನು ನೀಡಲಾಗಿದೆ.

# ಅಧ್ಯಾಯ: ಎರಡು

## ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

೨.೧. ಸಂಶೋಧನಾ ಮಹಾ ಪ್ರಬಂಧಗಳು

೨.೨. ಕೃತಿಗಳು

೨.೩. ಲೇಖನಗಳು

## ಅಧ್ಯಾಯ: ಎರಡು

# ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

'ಜೇಡರದಾಸಿಮಯ್ಯ: ಒಂದು ಅಧ್ಯಯನ' ಎಂಬ ವಿಷಯವನ್ನು ಸಂಶೋಧನೆಗೆ ಆಯ್ಕೆ ಮಾಡಿಕೊಳ್ಳಲಾಗಿದ್ದು, ಈ ವಚನಕಾರನ ಕುರಿತು ಚಾರಿತ್ರಿಕ ಹಾಗೂ ಸಾಹಿತ್ಯಿಕ ಅಧ್ಯಯನದ ಮಾದರಿ ಇದಾಗಿದೆ. ಜೇಡರದಾಸಿಮಯ್ಯನ ವಚನಗಳನ್ನು ಈ ಅಧ್ಯಯನದಲ್ಲಿ ನೇರವಾಗಿ ತೆಗೆದುಕೊಳ್ಳದೇ, ಆತನ ಜೀವನ ಹಾಗೂ ವ್ಯಕ್ತಿತ್ವದ ನಿಲುವುಗಳನ್ನು ಪರಿಗಣಿಸುವಾಗ ಅಲ್ಲಲ್ಲಿ ಆತನ ವಚನಗಳನ್ನು ವಿಶ್ಲೇಷಿಸಲಾಗಿದೆ. ಜೇಡರದಾಸಿಮಯ್ಯ ಮತ್ತು ಆತನ ಜೀವನ ಹಾಗೂ ವೈಯಕ್ತಿಕ ವಿಷಯಗಳಾದ ತಂದೆ, ತಾಯಿ, ಪತ್ನಿ, ಹಾಗೂ ಆತನ ವೃತ್ತಿ, ಆತನು ಸಮಾಜಕ್ಕೆ ನೀಡಿದ ಕೊಡುಗೆ ಮೊದಲಾದವುಗಳನ್ನು ಈವರೆಗೆ ಕನ್ನಡ ಸಾಹಿತ್ಯದಲ್ಲಿ ದೊರೆತ ಆಕರಗಳನ್ನು ಅನುಲಕ್ಷಿಸಿ ಈ ಅಧ್ಯಯನ ಕೈಗೊಳ್ಳಲಾಗಿದೆ. ಜೊತೆಗೆ ದಾಸಿಮಯ್ಯನ ಬಗ್ಗೆ ರಚನೆಗೊಂಡ ಸಾಹಿತ್ಯ(ಕಾವ್ಯ, ಪುರಾಣಗಳು, ವಚನಗಳು ಇತ್ಯಾದಿ)ವನ್ನು ಕುರಿತ ಅಧ್ಯಯನವೂ ಆಗಿದೆ.

ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಇದುವರೆಗೂ ಕನ್ನಡಸಾಹಿತ್ಯ ಕ್ಷೇತ್ರದಲ್ಲಿ ನಡೆದಿರುವ ಅಧ್ಯಯನಗಳನ್ನು ಸಮೀಕ್ಷೆಗೆ ಒಳಪಡಿಸುವುದು ಬಹು ಮುಖ್ಯವಾದ ಸಂಗತಿ. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ಕನ್ನಡಸಾಹಿತ್ಯದಲ್ಲಿ ಈ ಕುರಿತ ಚರ್ಚೆಗಳು ವಿಫುಲವಾಗಿ ದೊರೆಯುತ್ತವೆ ಯಾದರೂ, ಸಂಪೂರ್ಣ ವಿಷಯ ಜ್ಞಾನವನ್ನು ಒದಗಿಸಲು ಈ ಅಧ್ಯಯನಗಳು ಸೋತಿವೆ ಎಂದು ಹೇಳ ಬಹುದು. ಆದರೂ ಫ.ಗು ಹಳಕಟ್ಟಿ, ಗೋವಿಂದ ಪೈ, ಶಿ.ಶಿ. ಬಸವನಾಳ ಮೊದಲಾದವರಿಂದ ಇಲ್ಲಿಯವರೆಗೂ ಚರ್ಚಿತವಾಗುತ್ತಲೇ ಬಂದಿರುವ ವಿಷಯವಾಗಿದ್ದರೂ ಇಂದಿಗೂ ಈ ವಿಷಯ ಕನ್ನಡ ಸಾಹಿತ್ಯ ವಲಯದಲ್ಲಿ ಚರ್ಚೆಯ ರೂಪದಲ್ಲಿಯೇ ನಿಂತಿದೆ. ಇಂತಹ ವಸ್ತು ವಿಷಯವನ್ನು ಹೊಸ ಪ್ರಯತ್ನದಲ್ಲಿ ನಿರೂಪಿಸುವುದು ಈ ಪ್ರಬಂಧದ ಮಾದರಿಯಾಗಿದೆ. ಅಂತಹ ಚರ್ಚೆಯನ್ನು

೧. ಸಂಶೋಧನಾ ಪ್ರಬಂಧಗಳು

೨. ಕೃತಿಗಳು

೩. ಲೇಖನಗಳು

ಎಂದು ಸಮೀಕ್ಷಿಸಲಾಗಿದೆ.

## ೨.೧. ಸಂಶೋಧನಾ ಪ್ರಬಂಧಗಳು

ಈವರೆಗೆ ಜೇಡರದಾಸಿಮಯ್ಯ ಹಾಗೂ ಅದಕ್ಕೆ ಪೂರಕವಾಗಿ ಬಂದ ಪಿಎಚ್.ಡಿ. ಪ್ರಬಂಧಗಳಲ್ಲಿನ ತಾತ್ವಿಕ ನಿಲುವುಗಳನ್ನು ಇಲ್ಲಿ ಅಧ್ಯಯನಕ್ಕೆ ಗುರಿಪಡಿಸಲಾಗಿದೆ. ಅಧ್ಯಯನದ ದೃಷ್ಟಿಯಿಂದ ಎರಡು ಹಂತದಲ್ಲಿ ವಿಭಾಗ ಮಾಡಿಕೊಳ್ಳಲಾಗಿದೆ. ಮೊದಲು ಸಂಶೋಧನಾ ಪ್ರಬಂಧದ ಉದ್ದೇಶ ಹಾಗೂ ವ್ಯಾಪ್ತಿಗಳನ್ನಾಧರಿಸಿದ ಸಂಶೋಧನೆಯ ಹಂತಗಳನ್ನು ಚರ್ಚಿಸಲಾಗಿದೆ. ಎರಡನೆಯದಾಗಿ ಸಂಶೋಧನಾ ನಿಲುವುಗಳನ್ನು ಚರ್ಚಿಸಲಾಗಿದೆ.

ಜೇಡರದಾಸಿಮಯ್ಯನ ಕುರಿತು ಕೈಗೊಂಡ ಅಧ್ಯಯನಗಳನ್ನು ಸಮೀಕ್ಷೆಗೆ ತೆಗೆದುಕೊಂಡಾಗ ಪ್ರಧಾನವಾಗಿ ಕಂಡುಬರುವುದು **ಗಂಗಮ್ಮ. ಎಚ್.ಎಸ್** ಅವರು ರಚಿಸಿದ ಸಂಶೋಧನಾ ಮಹಾಪ್ರಬಂಧ **'ಮುದನೂರು ದಾಸಿಮಯ್ಯ: ಒಂದು ಅಧ್ಯಯನ'**. ಇದು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ಪಡೆದ ಮಹಾಪ್ರಬಂಧವಾಗಿದೆ. ಗಂಗಮ್ಮ ಎಚ್.ಎಸ್ ಅವರ ಈ ಮಹಾಪ್ರಬಂಧವು ಜೇಡರದಾಸಿಮಯ್ಯನ ಕುರಿತು ಸಮಗ್ರ ಮಾಹಿತಿ ನೀಡುತ್ತದೆ. ಈ ಮಹಾಪ್ರಬಂಧದ ಪ್ರಮುಖ ಉದ್ದೇಶ ಜೇಡರದಾಸಿಮಯ್ಯನ ಜೀವನ ಮತ್ತು ಸಾಧನೆಗಳನ್ನು ಅನಾವರಣಗೊಳಿಸುವುದರ ಜೊತೆಗೆ ಆತನ ವಚನಗಳನ್ನು ವಿಶ್ಲೇಷಣೆಗೊಳಪಡಿಸುವುದಾಗಿದೆ.

ಮೊದಲ ಅಧ್ಯಾಯ ಜೇಡರದಾಸಿಮಯ್ಯನ ಜೀವನಚರಿತ್ರೆ, ಈ ಅಧ್ಯಾಯದಲ್ಲಿ ಜೇಡರ ದಾಸಿಮಯ್ಯನ ಜೀವನಕ್ಕೆ ಸಂಬಂಧಿಸಿದ ಎಲ್ಲಾ ಆಕರಗಳನ್ನು ಚರ್ಚಿಸಿದ್ದಾರೆ. ಇನ್ನು ಎರಡನೆಯ ಅಧ್ಯಾಯದಲ್ಲಿ ಜೇಡರದಾಸಿಮಯ್ಯನ ಜೀವನಚರಿತ್ರೆಯೊಂದಿಗೆ ಆತನ ಜೀವನಕ್ಕೆ ಸಂಬಂಧಿಸಿದ ವಿಷಯಗಳ ಚರ್ಚೆ ಇದೆ. ಮೂರನೆಯ ಅಧ್ಯಾಯದಲ್ಲಿ ವಚನ ಸಾಹಿತ್ಯ, ವಚನಗಳ ಅರ್ಥ, ಪರಿಚಯ, ವಚನಗಳ ಪ್ರಾಚೀನತೆ ಮೊದಲಾದ ವಿಷಯಗಳ ಚರ್ಚೆ ಇದೆ. ನಾಲ್ಕನೆಯ ಅಧ್ಯಾಯದಲ್ಲಿ ಜೇಡರದಾಸಿಮಯ್ಯನ ವಚನಗಳ ಸಾಮಾಜಿಕ ವಿವೇಚನೆ ಮತ್ತು ಆತನ ವಚನಗಳಲ್ಲಿನ ಸಾಮಾಜಿಕ ಆಯಾಮಗಳಾದ ಜಾತೀಯತೆ, ಭಕ್ತ-ಭವಿ ಕಲ್ಪನೆ, ಸ್ತ್ರೀಯರ ಸ್ಥಾನಮಾನ, ವೇಶ್ಯಾವಾಟಿಕೆ, ಪರಸ್ತ್ರೀ ಕಲ್ಪನೆ, ಭಕ್ತಿಯ ಮಹತ್ವ, ಢಾಂಬಿಕತೆ, ವೇಷಧಾರಿಗಳ ವಿಡಂಬನೆ, ಬಹುದೈವೋಪಾಸನೆ ಮೊದಲಾದ ವಿಷಯಗಳನ್ನು ಹಲವು ಆಯಾಮಗಳಲ್ಲಿ ವಿಶ್ಲೇಷಿಸಿದ್ದಾರೆ.

ಐದನೇ ಅಧ್ಯಾಯದಲ್ಲಿ ಜೇಡರದಾಸಿಮಯ್ಯನ ವಚನಗಳ ತಾತ್ವಿಕ ವಿವೇಚನೆ ಕಂಡುಬರುತ್ತದೆ. ಪ್ರಾರ್ಥನೆ, ಪರಮಾತ್ಮನ ಸ್ವರೂಪ, ಕ್ರಿಯಾ ಜ್ಞಾನ, ಮೋಕ್ಷ ಪರಿಕಲ್ಪನೆ, ಷಟ್‌ಸ್ಥಲ ಸಿದ್ಧಾಂತ, ಪಂಚಾಚಾರಗಳು ಮೊದಲಾದವುಗಳನ್ನು ಇಲ್ಲಿ ಅಧ್ಯಯನಕ್ಕೊಳಪಡಿಸಿದ್ದಾರೆ. ಅಧ್ಯಾಯ ಆರರಲ್ಲಿ ಜೇಡರದಾಸಿಮಯ್ಯನ ವಚನಗಳ ಸಾಹಿತ್ಯಿಕ ಅಂಶಗಳಾದ ವಚನಗಳ ರಚನೆ, ಉಪಮೆಗಳ ಬಳಕೆ, ಪ್ರಾಸ, ಛಂದಸ್ಸು, ಶೈಲಿ ಮೊದಲಾದವುಗಳ ಚರ್ಚೆಯನ್ನು ಸಂಶೋಧಕರು ಇಲ್ಲಿ ಚರ್ಚಿಸಿದ್ದಾರೆ. ಅಧ್ಯಾಯ ಏಳು ಜೇಡರದಾಸಿಮಯ್ಯನ ವ್ಯಕ್ತಿತ್ವದ ಪ್ರಭಾವ ನಂತರ ಬಂದ ಬಸವಣ್ಣ, ಅಕ್ಕಮಹಾದೇವಿ ಮೊದಲಾದ ವಚನಕಾರರ ಮೇಲೆ ಆದ ರೀತಿಯನ್ನು ವಿವರಿಸಿದ್ದಾರೆ. ಕೊನೆಯದಾಗಿ ಸಮಾರೋಪ. ಒಟ್ಟಾರೆ ಈ ಸಂಶೋಧನಾ ಪ್ರಬಂದಧದ ಸ್ವರೂಪ ಹೀಗಿದೆ. ಇನ್ನು ವಿಷಯವಾರು ಚರ್ಚೆಯನ್ನು ಮುಂದಿನಂತೆ ನೋಡಬಹುದು.

ಸಂಶೋಧಕರ ನೆಲೆಯಂತೆ ಇಲ್ಲಿ ದೇವರ ದಾಸಿಮಯ್ಯನೆಂದು ಎಲ್ಲಿಯೂ ತರದ ಕಾರಣ ಆ ಇಬ್ಬರು ವ್ಯಕ್ತಿಗಳನ್ನು ಭಿನ್ನರೆಂದೂ, ಅಭಿನ್ನರೆಂದೂ ತೋರದೇ ತಟಸ್ಥ ಮಾರ್ಗವನ್ನು ಅನುಸರಿಸಿದ್ದಾರೆ ಎಂದರೂ ತಪ್ಪಿಲ್ಲ. ಆಕರಗಳ ಚರ್ಚೆಯಲ್ಲಿ ಈ ಇಬ್ಬರೂ ವ್ಯಕ್ತಿಗಳಿಗೆ ಸಂಬಂಧಿಸಿದಂತೆ ಎಲ್ಲ ಆಕರಗಳನ್ನು ಚರ್ಚಿಸಿದ್ದಾರೆ. ಆದರೆ ಸಂಶೋಧನೆಯಲ್ಲಿ ಎಲ್ಲಿಯೂ ದೇವರದಾಸಿಮಯ್ಯ ಎಂಬ ಉಲ್ಲೇಖಗಳಿಲ್ಲದೆ, ಜೇಡರದಾಸಿಮಯ್ಯ ಎಂದಷ್ಟೆ ಬಳಸಲಾಗಿದೆ. "ಕ್ರಿಶ ೧೧೪೮ರ ವೇಳೆಗೆ ಅವನದೊಂದು ಕುಲವೇ ಏರ್ಪಟ್ಟು ಆ ಕುಲಕ್ಕೆ ತಿಲಕಪ್ರಾಯ ನೆನಿಸಿದನು."[೧] ಆತನು ಆಚಾರ್ಯಸ್ಥಾನದಲ್ಲಿದ್ದು ಇನ್ನೊಬ್ಬರಿಗೆ ಉಪದೇಶ ಅಥವಾ ದೀಕ್ಷೆ ನೀಡುವ ಮಟ್ಟದಲ್ಲಿದ್ದನು. ಅಂತೆಯೇ ಕ್ರಿಶ ೧೧೬೫ಕ್ಕೆ ಮೊದಲೇ ಶಿವನನ್ನು ಒಲಿಸಿಕೊಂಡು ತವನಿಧಿಯನ್ನು ಪಡೆದನೆಂದು ದಾಖಲಿಸುತ್ತಾರೆ.

ಇಲ್ಲಿ ಕ್ರಿಶ ೧೧೪೮ರ ವೇಳೆಗೆ ಆತ ಪ್ರಭುದ್ಧನಾಗಿದ್ದನೆಂದು ಹೇಳಲಾಗಿದೆ ಮತ್ತು ಆ ಹೊತ್ತಿಗಾಗಲೇ ತವನಿಧಿ ಪಡೆದುದ್ದಾಗಿ ಹೇಳಿ ಅದರ ಕಾಲವನ್ನು ಕ್ರಿಶ ೧೧೬೫ಕ್ಕೆ ತಳ್ಳಲಾಗಿದೆ. ಅಂದರೆ ಆ ಇಬ್ಬರು ವ್ಯಕ್ತಿಗಳು ಭಿನ್ನರು ಅಥವಾ ಒಬ್ಬರೇ ಎಂದು ಸಾಧಿಸಬೇಕಾದಲ್ಲಿ ಕಾಲ ನಿರ್ಣಯ ಪ್ರಮುಖವಾಗಿದ್ದು ಅದರ ಚರ್ಚೆಯನ್ನು ಇಲ್ಲಿ ತೆಗೆದುಕೊಂಡಿಲ್ಲ. ಈ ಸಂಶೋಧನೆ ನಡೆಸಿದ ಉದ್ದೇಶ ಆತನ ಸಾಹಿತ್ಯಿಕ ಸಾಧನೆಗಳನ್ನು ಅಧ್ಯಯನ ಮಾಡುವುದಾಗಿದೆ. ಆದ್ದರಿಂದ ಆತನ ವೈಯುಕ್ತಿಕ ಜೀವನಕ್ಕೆ ಸಾಂದರ್ಭಿಕವಾದ ಒತ್ತನ್ನು ಮಾತ್ರ ನೀಡಿದ್ದಾರೆ ಎಂದು ಭಾವಿಸ ಬಹುದು.

ಮುದನೂರು ಮೊದಲಾದ ಸಾಂಸ್ಕೃತಿಕ ನೆಲೆಗಳ ಬಗ್ಗೆ ಚರ್ಚೆಯಾದಾಗಲೂ ಸಂಶೋಧಕರು ದೇವರದಾಸಿಮಯ್ಯನ ಉಲ್ಲೇಖ ತರುವುದಿಲ್ಲ. ದೇವರದಾಸಿಮಯ್ಯನ ಪುರಾಣ ಮೊದಲಾದವುಗಳ

ಕುರಿತು ಚರ್ಚೆಯನ್ನು ಮಾಡಿದಾಗಲೂ ಈ ಕುರಿತ ಯಾವುದೇ ವಿಷಯಗಳು ಸಂಶೋಧನೆಯಲ್ಲಿಲ್ಲ. ಸಂಶೋಧಕರ ಗ್ರಹಿಕೆಯು ಬಹುಶಃ ಆ ಇಬ್ಬರೂ ಅಭಿನ್ನರೆಂದು ತೋರುವುದೇ ಆಗಿದ್ದು, ಆ ಕುರಿತ ಚರ್ಚೆಯನ್ನು ತೀವ್ರವಾಗಿ ಗಣನೆಗೆ ತೆಗೆದುಕೊಳ್ಳದೆ ಮುದನೂರು ದಾಸಿಮಯ್ಯ ಎಂದು ಹೇಳಿ ಮೃದುಧೋರಣೆಯನ್ನು ಅನುಸರಿಸಿದ್ದಾರೆ.

## ೨.೨. ಕೃತಿಗಳು

ಸಂಶೋಧನಾ ಪ್ರಬಂಧಗಳನ್ನು ಹೊರತುಪಡಿಸಿ 'ಜೇಡರದಾಸಿಮಯ್ಯ'ನ ಚರ್ಚೆಗಳಿರುವ ಪ್ರಕಟಿತ ಕೃತಿಗಳನ್ನು ಇಲ್ಲಿ ವಿಮರ್ಶೆಗೊಳಪಡಿಸಲಾಗಿದೆ. ಇಲ್ಲಿಯೂ ಮೂರು ಹಂತದಲ್ಲಿ ಕೃತಿಗಳನ್ನು ಚರ್ಚಿಸಲಾಗಿದೆ. ಒಂದು ಕೃತಿ ಹಾಗೂ ಕೃತಿ ಹೊಂದಿದ ಪೂರಕ ವಿಷಯಗಳು, ಎರಡನೆಯದು ಕೃತಿಕಾರನ ನಿಲುವುಗಳು, ಮೂರನೆಯದು ಕೃತಿಗೆ ಬಂದೊದಗಿದ ಪ್ರತಿಕ್ರಿಯೆಗಳನ್ನು ಪರಿಭಾವಿಸಲಾಗಿದೆ .

**ನಂದಿಮಠ ಎಸ್.ಸಿ** ಅವರ 'A Hand Book of virasaivism' ಕೃತಿಯು ಕನ್ನಡ ಸಂಶೋಧನಾ ಕ್ಷೇತ್ರದಲ್ಲಿ ಮೊದಲ ಹಂತದಲ್ಲಿಯೇ ಅಂದರೆ ೧೯೪೨ರಲ್ಲಿ ಪ್ರಕಟಗೊಂಡದ್ದು, ಜೇಡರದಾಸಿಮಯ್ಯನ ಬಗ್ಗೆ ಬಹಳ ಪೂರ್ವದಲ್ಲಿಯೇ ಮಾಹಿತಿಯನ್ನು ನೀಡಿರುವ ಕೃತಿಯಾಗಿ ಕಂಡು ಬರುತ್ತದೆ. ಈ ಕೃತಿಯಲ್ಲಿ ನಂದಿಮಠ ಎಸ್.ಸಿ ಇವರು ಜೇಡರ ದಾಸಿಮಯ್ಯನೇ ಮೊದಲ ವಚನಕಾರ. ಬಸವಣ್ಣನಲ್ಲ ಎಂದು ನಿರ್ಣಯಿಸುತ್ತಾ ಜೇಡರದಾಸಿಮಯ್ಯನ ಬಗ್ಗೆ ಮತ್ತಷ್ಟು ಮಾಹಿತಿಯನ್ನು ನೀಡುತ್ತಾರೆ.

"He is one of the early vacana writers. He was a weaver by profession, and apparently a great and influential teacher. His story is narrated in the Basava purana, cennabasava purana and Sankara Dasimayara charita. According to the tradition narrated in there, he was guru of the suggaladevi, the queen of the chalukya Desingaraya. He is Said to have Successfully disputed in the king's court with the jainas, and to have converted the king to virasaivism. Dr Fleet admits the validity of this tradition and identifies Desing with the chalukya Jayasimha I (1018-1042). An inscription in Hasan district ( Belur taluk) States that this Jayasimha had a wife named Suggaladevi. A kannada poet named Brahmashiva (1125 A.D) mentions our Dasimayya. He was therefore a Contemporary of the chalukya Jayasimha, i.e, he lived

about a century before Basava. His vacanas end with 'Ramanatha"[೨] ಎಂದು ಹೇಳುತ್ತಲೇ, "Basava did not found virasaivism, but only revived it-our knowledge of pre-basavan virasaivism is fragmentary and confusing the Kalamukha or Lakula sect Flourished before basava in south india- many kalamukha mathas were transformed into virasaiva Mathas in the port Basava era"[೩] ಎಂದು ಬಸವಪೂರ್ವ ಕಾಲದ ವೀರಶೈವವನ್ನು ನಂದೀಮಠ ಅವರು ವಿವರಿಸುತ್ತಾ, ದಾಸಿಮಯ್ಯನ ಕಾಲವನ್ನು ಕ್ರಿ.ಶ ೧೦೪೦ ಎಂದು ದಾಖಲಿಸುತ್ತಾರೆ. ಇಲ್ಲಿ ಲೇಖಕರು ಬಸವಣ್ಣ ವೀರಶೈವದ ಸ್ಥಾಪಕ ಅಲ್ಲ. ಆತನಿಗೂ ಮೊದಲು ಒಬ್ಬ ವಚನಕಾರನಿದ್ದ ಆತನೇ ದೇವರದಾಸಿಮಯ್ಯ ಎಂದು ವಿವರಿಸುತ್ತಾ ಸುಗ್ಗಲಾದೇವಿಯನ್ನು ಆತನ ಶಿಷ್ಯೆ ಎಂದೂ, ಜಯಸಿಂಹನು ಈಕೆಯ ಪತಿ ಎಂದೂ ದಾಖಲಿಸುತ್ತಾರೆ. ಇಲ್ಲಿ ಲೇಖಕರು ಜೇಡರ ದಾಸಿಮಯ್ಯನನ್ನೇ ದೇವರದಾಸಿಮಯ್ಯ ಎಂದು ಭಾವಿಸಿದಂತಿದೆ. ಆದರೂ ಮೊದಮೊದಲ ಕನ್ನಡ ಸಾಹಿತ್ಯದಲ್ಲಿನ ಗೊಂದಲಗಳಿಗೆ ಕೆಲಮಟ್ಟಿಗೆ ಸ್ಪಷ್ಟತೆ ನೀಡಿದ್ದು ಈ ಕೃತಿ ಎನ್ನಬಹುದು.

**ಶಾಂತರಸ** ಅವರ ಕ್ರಿ.ಶ ೧೯೭೨ರಲ್ಲಿ ಪ್ರಕಟವಾದ **'ಬಸವಪೂರ್ವ ಯುಗದ ಶರಣರು'** ಎಂಬ ಕೃತಿಯಲ್ಲಿ ವೀರಶೈವ ಆಚಾರಗಳು, ವೀರಶೈವದ ಹುಟ್ಟು, ಅದು ಮೊದಲುಗೊಂಡ ಸ್ಥಳಗಳು ಮೊದಲಾದವುಗಳ ಚರ್ಚೆ ಇದೆ. ಈ ಕೃತಿಯ ಮೂರು ಲೇಖನಗಳು ಮಹತ್ವ ವಾದವುಗಳಾಗಿವೆ. ಅವುಗಳನ್ನು ಒಂದರ ನಂತರ ಒಂದರಂತೆ ವಿಶ್ಲೇಷಿಸಲಾಗಿದೆ. ಇವುಗಳಲ್ಲಿ ಮೊದಲ ಲೇಖನ **'ಹೊಸ ಹುಟ್ಟಿಗೆ ಮೂಲಿಗ ದೇವರದಾಸಿಮಯ್ಯ'**. ಈ ಲೇಖನದಲ್ಲಿ ಲೇಖಕರು "ಅಂದಿನ ಕರ್ನಾಟಕದಲ್ಲಿ ಕಾಪಾಲಿಕರಂಥ ಕೆಲವು ವಾಮ ಪಂಥಗಳು ತಮ್ಮ ಉಗ್ರ ಭೀಭತ್ಸ ಜೀವನದಿಂದ ಸಾಮಾಜಿಕ ಜೀವನದಲ್ಲಿ ಗೊಂದಲವನ್ನುಂಟು ಮಾಡಿದ್ದವು. ಕ್ಷುದ್ರ ದೇವತೆಗಳ ಉಪಾಸನೆ ಹೆಚ್ಚಾಗಿ, ನಿಜವಾದ ದೇವರ ಕಲ್ಪನೆಯೇ ಇಲ್ಲದಂತಾಗಿತ್ತು. ಜ್ಯೋತಿಷ್ಯ, ನಿತ್ಯ ನೈಮಿತ್ಯಕಗಳು ಜನರಿಗೆ ಜೀವನದಲ್ಲಿ ಅವಿಶ್ವಾಸವನ್ನೂ ಅಂಧಶ್ರದ್ಧೆಯನ್ನೂ ಉಂಟು ಮಾಡಿದ್ದವು. ದುಡಿಮೆಗೆ ಬೆಲೆಯಿರಲಿಲ್ಲ. ಕೆಲಸದಲ್ಲಿ ಮೇಲು, ಕೀಳು ಬಗೆದು ಅದರಿಂದ ಮನುಷ್ಯನ ಅಳತೆಯಾಗುತ್ತಿತ್ತು. ವರ್ಣ, ವರ್ಗಗಳು ಸಮಾಜದ ತಾಯ್‌ಬೇರಿಗೆ ನಂಜಿನ ನೀರನ್ನೆರೆದಿದ್ದುವು ಸರ್ವ ವಿಧದಿಂದಲೂ ಜನತೆಯ ಜೀವನ ಹಾಳಾಗಿತ್ತು. ಇದನ್ನು ತಿದ್ದಿ ತೀಡಿ ಸುಂದರಗೊಳಿಸಲು ಶರಣರು ಹುಟ್ಟಿ ಬಂದರು. ಇವರು ಮಾಡಿದ ಮೊದಲ ಮಹಾ ಕೆಲಸವೆಂದರೆ ಸಾರ್ವತ್ರಿಕವಾದ ಜ್ಞಾನ ಪ್ರಸಾರ ಮತ್ತು ಜನರಲ್ಲಿ ಸ್ವತಂತ್ರವಾಗಿ ವಿಚಾರ ಮಾಡುವ ಶಕ್ತಿಯನ್ನು ತಂದು ಕೊಟ್ಟಿದ್ದು. ಇಂತಹ ಶರಣರಲ್ಲಿ ಮೂಲಿಗನೆನಿಸಿದಾತ ದೇವರದಾಸಿಮಯ್ಯ"[೪] ಎನ್ನುತ್ತಾರೆ.

ಮೇಲಿನ ಮಾತುಗಳು ಅಕ್ಷರಶಃ ಸತ್ಯ. ಹೊಸ ಸಾಮಾಜಿಕ ಜೀವನದ ಬದಲಾವಣೆಯ ಹಲವು ಆಶಯಗಳನ್ನು ಹೊತ್ತು ಸಾಹಿತ್ಯ ಸೃಷ್ಟಿಗೆ ನಿಂತವರು ವಚನಕಾರರು. ಜ್ಞಾನ ಪ್ರಸಾರ, ಸ್ವತಂತ್ರ ಚಿಂತನಾ ಶಕ್ತಿಯ ಪ್ರಸಾರ ಇವರ ಆಶಯವಾಗಿದ್ದು ನಿಜವೇ. ಇಂತಹ ಸಂದರ್ಭದಲ್ಲಿ ಸಮಾಜ ನಿರ್ಮಾಣದ ಕಾರ್ಯದಲ್ಲಿ ತಮ್ಮನ್ನೇ ಅರ್ಪಿಸಿಕೊಂಡ ಶರಣರಲ್ಲಿ ಜೇಡರ ದಾಸಿಮಯ್ಯನೂ ಒಬ್ಬನಾಗಿದ್ದಾನೆ. ಈತನನ್ನು ದೇವರದಾಸಿಮಯ್ಯ ಎಂದೇ ಲೇಖಕರು ನಮೂದಿಸುತ್ತಾರೆ. ಆದರೆ ಲೇಖಕರ ಮಟ್ಟಿಗೆ 'ದೇವರದಾಸಿಮಯ್ಯ' ವಚನಕಾರನೋ ಅಥವಾ ಬೇರೆ ಶರಣನೋ ಎಂಬುದು ಸ್ಪಷ್ಟವಿಲ್ಲ. ನಂತರ ಅವರು ದೇವರದಾಸಿಮಯ್ಯನ ಊರು ಮುದನೂರು ಎಂದು, ಆತನ ಕಾಯಕ ನೇಯ್ಗೆ ಎಂದು ಹೇಳಿರುವುದನ್ನು ನೋಡಿದರೆ ಇವರ ದೃಷ್ಟಿಯಲ್ಲಿಯೂ ದೇವರದಾಸಿಮಯ್ಯ ಹಾಗೂ ಜೇಡರದಾಸಿಮಯ್ಯ ಒಂದೇ ಎಂದು ಸ್ಪಷ್ಟವಾಗುತ್ತದೆ. ಈ ಕೃತಿಯಲ್ಲಿ ದಾಸಿಮಯ್ಯನ ಜೀವನ ಚರಿತ್ರೆಯನ್ನು ಪುರಾಣ ಕೃತಿಗಳನ್ನಾಧರಿಸಿ ನಿರೂಪಿಸಲಾಗಿದೆ. ವಿವಾಹ ಪೂರ್ವದಲ್ಲಿ ಈತನೇ ಪೊಟ್ಟಲಕೆರೆಗೆ ಹೋಗಿ ನೆಲೆಸಿ ನಂತರ ಕೆಲಕಾಲವಾದ ಮೇಲೆ ಮುದನೂರಿಗೆ ಬಂದು ನೇಯ್ಗೆ ಕಾಯಕದಲ್ಲಿ ತೊಡಗಿದನೆಂಬುದು ಇವರ ಅಭಿಪ್ರಾಯ. ಲೇಖನದ ಮುಂದಿನ ಭಾಗದಲ್ಲಿ ಶಾಸನಗಳನ್ನು ಆಧಾರಗಳಾಗಿ ನೀಡಿ; ಅವುಗಳಲ್ಲಿ ಜೇಡರದಾಸಿಮಯ್ಯನ ಹೆಸರನ್ನೆ ಪ್ರಸ್ತಾಪಿಸುತ್ತಾರೆ.

ಈ ಕೃತಿಯ ಮತ್ತೊಂದು ಲೇಖನ **'ನಾಡಿನಲ್ಲಿ ಸರಸ ಸಜ್ಜನಿಕೆ ಸದಾಚಾರ ಬಿತ್ತಿದ ಶಂಕರ ದಾಸಿಮಯ್ಯ.'** ಈ ಲೇಖನದಲ್ಲಿ ಶಂಕರದಾಸಿಮಯ್ಯನ ಗುಣಗಳನ್ನು ಹೇಳುವಾಗ ಜೇಡರ ದಾಸಿಮಯ್ಯನನ್ನು ಶಂಕರದಾಸಿಮಯ್ಯ ಭೇಟಿಯಾದ ಸಂದರ್ಭವನ್ನು ವಿವರಿಸುತ್ತಾರೆ. ಅಲ್ಲಿಯೂ ಸಹ ಜೇಡರದಾಸಿಮಯ್ಯನ ಬದಲಿಗೆ ದೇವರದಾಸಿಮಯ್ಯ[೫] ಎಂದೇ ದಾಖಲಿಸುತ್ತಾರೆ. ಶಂಕರದಾಸಿಮಯ್ಯ ಮತ್ತು ಜೇಡರದಾಸಿಮಯ್ಯನ ಕಥೆ ಬಂದಿರುವ ಹರಿಹರನ ರಗಳೆಯಲ್ಲಿ ದೇವರದಾಸಿಮಯ್ಯ ಎಂಬ ಹೆಸರು ಕಂಡುಬರುವುದಿಲ್ಲ. ಅದಾಗ್ಯೂ ಲೇಖಕರು ಇಲ್ಲಿ ದೇವರದಾಸಿಮಯ್ಯ ಎಂದು ಕರೆದಿರುವುದು ಅನುಚಿತವೆನಿಸುತ್ತದೆ. ಮುದನೂರನ್ನು ಬಿಟ್ಟು ಹೊರಡುವ ವೇಳೆಗೆ ಶಂಕರದಾಸಿಮಯ್ಯನಿಗೆ ಕಲ್ಯಾಣದ ಒಂದನೇ ಸೋಮೇಶ್ವರನಿಂದ ಕರೆ ಬಂದುದರ ಕಾರಣಕ್ಕಾಗಿ ತನ್ನ ಪರಿವಾರ ಸಹಿತ ಕಲ್ಯಾಣಕ್ಕೆ ಹೊರಡುವನು ಎಂದು ದಾಖಲಿಸುತ್ತಾರೆ. ಈ ಒಂದನೇ ಸೋಮೇಶ್ವರ ವೈಷ್ಣವನಾಗಿದ್ದ, ಜಯಸಿಂಹನ ನಂತರದ ಚಾಲುಕ್ಯ ಚಕ್ರವರ್ತಿ ಯಾದವನು ಮತ್ತು ಕಲ್ಯಾಣ ನಗರವನ್ನು ಕಟ್ಟಿದಾತ[೬] ಎಂದು ಆತನ ಬಗ್ಗೆ ವಿವರಿಸುತ್ತಾರೆ. ಆದರೆ ಶಂಕರದಾಸಿಮಯ್ಯನಿಗೆ ಕರೆ ಬರುವುದು ಜಯಸಿಂಹನಿಂದ

ಎಂಬ ಉಲ್ಲೇಖ ಹರಿಹರನ ಶಂಕರದಾಸಿಮಯ್ಯನ ರಗಳೆಯಲ್ಲಿದೆ. ಇಲ್ಲಿ ಲೇಖಕರು ಯಾವ ದಾಖಲೆಯನ್ನಾಧರಿಸಿ ಒಂದನೇ ಸೋಮೇಶ್ವರ ಎಂದು ಹೇಳಿದ್ದಾರೋ ಖಚಿತವಾಗುವುದಿಲ್ಲ.

ಇನ್ನು ಮೂರನೇ ಲೇಖನ **'ಶರಣ ಧರ್ಮಕ್ಕೆ ಉಸಿರಿತ್ತ ದುಗ್ಗಳೆ'**[೭] ಈ ಲೇಖನದಲ್ಲಿ ಶಾಂತರಸ ಅವರು 'ದಿಬ್ಯ' ಗೆದ್ದು ದೇವರದಾಸಿಮಯ್ಯನ ಮಡದಿಯಾದವಳು ದುಗ್ಗಳೆ ಎಂದು ಹೇಳುತ್ತಾರೆ. ಮುಂದುವರೆದು ಅವರ ದಾಂಪತ್ಯದ ಸನ್ನಿವೇಶಗಳನ್ನು ನಿರ್ದೇಶಿಸುತ್ತಾರೆ. ಇಲ್ಲಿ ಶಾಂತರಸ ಅವರ ಅಭಿಪ್ರಾಯದಂತೆ ದೇವರದಾಸಿಮಯ್ಯ ಹಾಗೂ ಜೇಡರದಾಸಿಮಯ್ಯ ಇಬ್ಬರೂ ಒಬ್ಬನೇ ಎಂದು ಸ್ಪಷ್ಟವಾಗುತ್ತದೆ. ಈ ಹೇಳಿಕೆಯನ್ನಾಧರಿಸಿ, ಅವರ ಅಭಿಪ್ರಾಯವನ್ನು ಅಲ್ಪ ಬದಲಾವಣೆಯೊಂದಿಗೆ ಸ್ವೀಕರಿಸುವುದಾದರೆ, ದೇವರದಾಸಿಮಯ್ಯನು ಪೊಟ್ಟಲಕೆರೆಗೆ ಹೋಗಿದ್ದು ಜಯಸಿಂಹನ ಆಸ್ಥಾನಕ್ಕೆಂದೂ, ಜೇಡರದಾಸಿಮಯ್ಯನ ಸಮಕಾಲೀನ ಸೋಮೇಶ್ವರನೆಂದೂ ತೆಗೆದುಕೊಂಡರೆ; ಅಲ್ಲಿಗೆ ಈ ಇಬ್ಬರು ಶರಣರ ಬಗೆಗಿನ ಕಾಲನಿರ್ಣಯದ ಗೊಂದಲ ಬಗೆಹರಿಯಬಹುದು. ಆದರೆ ಇದಕ್ಕೆ ಸ್ಪಷ್ಟ ಆಧಾರಗಳನ್ನು ಹುಡುಕಬೇಕಾಗಿದೆ.

**ಡಾ. ಎಲ್ ಬಸವರಾಜು** ಅವರ ಸಂಶೋಧನಾ ಕೃತಿ **'ದೇವರದಾಸಿಮಯ್ಯನ ವಚನಗಳು'**. ಈ ಕೃತಿಯು ೧೯೭೦ರಲ್ಲಿ ಪ್ರಕಟಗೊಂಡು ೨೦೧೧ರ ಹೊತ್ತಿಗೆ ಏಳು ಮುದ್ರಣಗಳನ್ನು ಕಂಡಿದೆ. ಈ ಕೃತಿಯು ಲೇಖಕರ ಸಂಶೋಧನಾತ್ಮಕ ಪೀಠಿಕೆಯಿಂದ ಬಹಳ ಪ್ರಬುದ್ಧವೆನಿಸುತ್ತದೆ. ೪೮ ಪುಟಗಳ ಪೀಠಿಕೆ ಹಾಗೂ ವಚನಗಳ ಸಂಗ್ರಹಣೆ ಮತ್ತು ಅವುಗಳ ನಿರ್ವಚನ ಕೃತಿಯ ತೂಕವನ್ನು ಹೆಚ್ಚಿಸಿದೆ ಎಂದರೆ ತಪ್ಪಾಗಲಾರದು. ಇಲ್ಲಿ ಕೃತಿಕಾರರು ಡಿ. ಎಲ್ ನರಸಿಂಹಾಚಾರ್ ಅವರ ಮಾತನ್ನು ಮಾದರಿಯಾಗಿಟ್ಟುಕೊಂಡು, 'ಪೀಠಿಕಾ' ಭಾಗದಲ್ಲಿ ಜೇಡರದಾಸಿಮಯ್ಯನ ಬಗ್ಗೆ ಚರ್ಚಿಸಿದ್ದಾರೆ. ಇಲ್ಲಿ ಪ್ರಧಾನವಾದ ಅಂಶವೆಂದರೆ, ದೇವರದಾಸಿಮಯ್ಯನ ವಚನಗಳು ಎಂಬದು ಕೃತಿಯ ಹೆಸರು; ಡಿ.ಎಲ್.ನರಸಿಂಹಾಚಾರ್ ಅವರು ಸೂಚಿಸಿರುವುದು ದೇವರ ದಾಸಿಮಯ್ಯನ ಹೆಸರನ್ನೇ.[೮] ಆದರೆ ಕೃತಿಯಲ್ಲಿ ಚರ್ಚಿತವಾದ ಹೆಸರು ಸನ್ನಿವೇಶಾನ್ವಿತವಾಗಿ ಜೇಡರದಾಸಿಮಯ್ಯನೆಂತಲೂ, ದೇವರದಾಸಿಮಯ್ಯನೆಂತಲೂ ನಿರೂಪಿತವಾಗಿದೆ.

ಇನ್ನೂ ಸೂಕ್ಷ್ಮವಾಗಿ ನೋಡಿದಾಗ ಕಂಡು ಬರುವ ಅಂಶವೆಂದರೆ ಕೃತಿಕಾರರು ನಿರೂಪಿಸಿ ರುವ ಆಧಾರಗಳನ್ನು ವಿವರಿಸುವಾಗ ನಿಶ್ಚಯವಾಗಿ ಜೇಡರದಾಸಿಮಯ್ಯನೆಂದೇ ಗುರುತಿಸುತ್ತಾರೆ. ತಾವು ಆಕರಗಳನ್ನು ವಿಸ್ತರಿಸುವಾಗ ದೇವರದಾಸಿಮಯ್ಯನೆಂದು ಹೆಸರಿಸುತ್ತಾರೆ. ಈ ಕೃತಿಯ ಪೀಠಿಕೆಯ ಪುಟ ೨೫ರಲ್ಲಿ ಜೇಡರದಾಸಿಮಯ್ಯ ಶಂಕರದಾಸಿಮಯ್ಯನ ಸಮಕಾಲೀನ. ಅವರಿಗೆ ನೇರ ಸಂಪರ್ಕವಿತ್ತು. ಜೇಡರದಾಸಿಮಯ್ಯ ಮುದನೂರಿನವನು. ಕಂದಶಿಲೆ, ನವಿಲೆಯ ಸುತ್ತಮುತ್ತ ಮುದನೂರು ಇತ್ತು. ಆತನ ಆರಾಧ್ಯ ದೈವ ರಾಮನಾಥ. ಶಿವನಿಂದ ತವನಿಧಿ ಪಡೆದು,

ಶಂಕರದಾಸಿಮಯ್ಯನಿಂದ ಅದು ಊರ್ಜಿಗೊಂಡಿತು ಎಂಬೆಲ್ಲಾ ವಿವರಗಳನ್ನು ನೀಡಿದ್ದಾರೆ. ಕೊನೆಯಲ್ಲಿ "ಜೇಡರದಾಸಿಮಯ್ಯನು ಬದುಕಿದ್ದಕಾಲಕ್ಕೆ (ಕಲ್ಯಾಣಿ ಚಾಲುಕ್ಯರ ದೊರೆ) ಜಯಸಿಂಹನು ಕಲ್ಯಾಣದಲ್ಲಿದ್ದನು"" ಎಂದು ಗುರುತಿಸುತ್ತಾರೆ. ಮತ್ತೊಂದು ಅಂಶವೆಂದರೆ ಕೃತಿಕಾರರು ಎಲ್ಲಿಯೂ ದಾಸಿಮಯ್ಯನ ಹೆಸರಿನ ಬಗ್ಗೆ ಚರ್ಚಿಸಿಲ್ಲ, ಅದರ ಬದಲಾಗಿ ಮೂಲ ಆಕರಗಳನ್ನು ಆಧರಿಸಿ ಅಲ್ಲಿ ಬಂದಿರುವ ಸಂದರ್ಭಗಳನ್ನನುಸರಿಸಿ ಅಲ್ಲಿನ ಹೆಸರುಗಳನ್ನು ಉಲ್ಲೇಖಿಸುತ್ತಾರೆ. ಉದಾಹರಣೆಗೆ ಶಂಕರ ದಾಸಿಮಯ್ಯನಿಂದ ತವನಿಧಿ ಬಯಲಾದ ಪ್ರಸಂಗದಲ್ಲಿ 'ಜೇಡರದಾಸಿಮಯ್ಯ'ನೆಂದೂ, ಪಾಲ್ಕುರಿಕೆ ಸೋಮನಾಥನ ಬಸವಪುರಾಣದಲ್ಲಿನ ಪೊಟ್ಟಚೆರುವಿನ ಕಥೆಯನ್ನು ಹೇಳುವಾಗ 'ದೇವರದಾಸಿಮಯ್ಯ' ಹಾಗೂ 'ದಾಸಿದೇವನೆಂತಲೂ' ಗುರುತಿಸಿದ್ದಾರೆ. ಗೊಂದಲದ ಸಂಗತಿಯೆಂದರೆ ಕೃತಿಕಾರರು ಈ ಇಬ್ಬರೂ ವ್ಯಕ್ತಿಗಳನ್ನು ಒಂದೇ ಎಂದು ನಿರ್ಣಯಿಸಿದ್ದು, ನಿಜವೇ ಆಗಿದ್ದಲ್ಲಿ ಒಂದೇ ಹೆಸರನ್ನು ಬಳಸುವ ಸಾಧ್ಯತೆಯನ್ನು ಏಕೆ ಮಾಡಿಕೊಂಡಿಲ್ಲ ಎನ್ನುವುದು ಇಲ್ಲಿ ಮಹತ್ವದ ಪ್ರಶ್ನೆಯಾಗಿಯೇ ಉಳಿಯುತ್ತದೆ.

ಒಟ್ಟಾರೆಯಾಗಿ ಈ ಕೃತಿಯು ದಾಸಿಮಯ್ಯರ ಬಗೆಗಿನ ಎಲ್ಲ ವಿವರಗಳನ್ನು ಸಂಶೋಧನಾತ್ಮಕ ವಾಗಿ ನೋಡುವ ಹಲವು ಆಯಾಮಗಳನ್ನು ಒದಗಿಸುತ್ತದೆ. ಯಾವ ಯಾವ ಆಕರಗಳು ಕಾಲ ಸಾಮೀಪ್ಯದಿಂದ ಹೆಚ್ಚು ನೈಜವಾಗಿವೆ ಮತ್ತು ಯಾವ ಯಾವ ಆಕರಗಳು ಕಥಾ ಬೆಳವಣಿಗೆಯ ದೃಷ್ಟಿಯಿಂದ ಹೇಗೆ ಬೆಳವಣಿಗೆ ಹೊಂದಿವೆ ಎಂಬುದನ್ನು ನಿರ್ಣಯಿಸಲು ಸುಲಭವಾದ ಮಾರ್ಗವನ್ನು ಹಾಕಿಕೊಡುತ್ತದೆ. ಅಷ್ಟೇ ಅಲ್ಲದೇ ಯಾವ ಕೃತಿಗಳು ಯಾವ ಕೃತಿಗಳ ಮೇಲೆ ಪ್ರಭಾವವನ್ನು ಬೀರಿವೆ ಎಂಬ ಅಂಶಗಳನ್ನು ಅರಿಯುವ ಸಾಧ್ಯತೆಯನ್ನು ಒದಗಿಸುತ್ತದೆ.

**ದೇವಿರಪ್ಪ ಎಚ್. ಮತ್ತು ರಾಚಪ್ಪ ಆರ್.** ಅವರ **'ಜೇಡರದಾಸಿಮಯ್ಯನ ವಚನಗಳು'** ಕೃತಿಯು ೧೯೭೪ರಲ್ಲಿ ಪ್ರಕಟಗೊಂಡಿದ್ದು, ಇದು ಜೇಡರದಾಸಿಮಯ್ಯನ ವಚನಗಳನ್ನು ಸಂಪಾದಿಸಿದ ಕೃತಿಯಾಗಿದೆ. ಈ ಕೃತಿಯ ಪ್ರಸ್ತಾವನೆ ಭಾಗದಲ್ಲಿ ಲೇಖಕರು ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ, ಇಬ್ಬರ ಬಗ್ಗೆಯೂ ಚರ್ಚಿಸಿದ್ದಾರೆ. ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ ಇಬ್ಬರು ಬೇರೆ ಎನ್ನುವುದು ಲೇಖಕರ ನಿಲುವಾಗಿದೆ.

"ಜೇಡರದಾಸಿಮಯ್ಯನೇ ದೇವರ ದಾಸಿಮಯ್ಯ ಎಂಬ ವಾದವನ್ನು ಈಗ ಕೈಬಿಡಬೇಕಾಗುತ್ತದೆ. ತವನಿಧಿಯ ಪವಾಡದ ಜೇಡರದಾಸಿಮಯ್ಯನೇ ಬೇರೆ, ಆತ ಮುದನೂರಿನಾತ. ಸುಗ್ಗಲೆಗೆ ಅನುಗ್ರಹಿಸಿ ಜೈನರನ್ನು ವಾದದಲ್ಲಿ ಸೋಲಿಸಿ ಉತ್ತರೇಶ್ವರಲಿಂಗ ಸ್ಥಾಪಿಸಿದ ದೇವರದಾಸಿಮಯ್ಯನೇ ಬೇರೆ. ಈತ ಯಾರೋ ತಿಳಿದು ಬಂದಿಲ್ಲ. ಈತನ ಊರು ದೇಶ

ಕಾಲಗಳ ಮೇಲೆ ಬೆಳಕು ಚೆಲ್ಲುವ ಯಾವ ಆಧಾರಗಳೂ ದೊರಕಿಲ್ಲ. ಜೇಡರದಾಸಿಮಯ್ಯ ಮತ್ತು ದೇವರದಾಸಿಮಯ್ಯ ಇವರಿಬ್ಬರ ಇಷ್ಟದೇವರು ರಾಮನಾಥನೇ ಆದ ಕಾರಣ ಇವರಿಬ್ಬರು ಒಂದೇ ಎಂದು ನಂಬಲು ಕಾರಣವಾಗಿರಬೇಕು. ಯಾವ ವಚನ ಕಟ್ಟುಗಳಲ್ಲಿಯೂ ದೇವರದಾಸಿಮಯ್ಯ ಎಂಬ ಹೆಸರು ಬಂದಿರುವುದಿಲ್ಲ; ಜೇಡರದಾಸಿಮಯ್ಯ ಇಲ್ಲವೆ ದಾಸಿಮಯ್ಯ ಎಂದು ಇರುತ್ತದೆ"[೧೦] ಎಂದು ಅವರು ಜೇಡರದಾಸಿಮಯ್ಯನ ವಚನಗಳನ್ನು ಸಂಪಾದಿಸುವಾಗಲೇ ಈ ವಿಷಯವನ್ನು ಪ್ರಸ್ತಾಪಿಸುತ್ತಾರೆ. ಜೊತೆಗೆ ವಚನಕಾರ ಜೇಡರದಾಸಿಮಯ್ಯನ ಕಾಲ ಕ್ರಿ.ಶ ೧೦೫೦ ರಿಂದ ಕ್ರಿ.ಶ ೧೧೫೦ ಎಂದು ಓಲೆಗರಿ ಕಟ್ಟುಗಳ ಸಹಾಯದಿಂದ ಸ್ಪಷ್ಟಪಡಿಸಿ, ದೇವರದಾಸಿಮಯ್ಯನ ಕಾಲ ಕ್ರಿ.ಶ ೧೦೪೦ ಎಂದು ಉಲ್ಲೇಖಿಸುತ್ತಾರೆ. ಇವರ ಈ ನಿಲುವನ್ನು ಹಲವಾರು ವಿದ್ವಾಂಸರು ಖಂಡಿಸುತ್ತಾರಾದರೂ ವಚನಕಾರ ಜೇಡರದಾಸಿಮಯ್ಯನ ಬಗೆಗೆ ಪರಿಪಕ್ವವಾದ ನಿಲುವು ಇವರಿಂದ ಮತ್ತಷ್ಟು ಗಟ್ಟಿಗೊಳ್ಳುತ್ತದೆ. ದೇವಿರಪ್ಪ.ಎಚ್, ರಾಚಪ್ಪ.ಆರ್. ಇವರ ಆಧಾರಗಳನ್ನೇ ಎಂ.ಚಿದಾನಂದಮೂರ್ತಿ, ಎಸ್.ವಿದ್ಯಾಶಂಕರ್. ಎಂ.ಎಂ.ಕಲಬುರ್ಗಿ ಅವರನ್ನೊಳಗೊಂಡು ಮುಂದಿನ ತಲೆಮಾರಿನ ಸಂಶೋಧಕರು ಸಮರ್ಥಿಸುತ್ತಾರೆ.

**ಅನ್ನಪೂರ್ಣ ಜಾಲವಾದಿಯವರ 'ಶಂಕರದಾಸಿಮಯ್ಯ ಪುರಾಣ ಒಂದು ಅಧ್ಯಯನ'** ಎಂಬ ಕೃತಿಯು ೧೯೯೦ರಲ್ಲಿ ಪ್ರಕಟವಾಗಿದ್ದು, ಇದು ಅವರ ಸಂಶೋಧನಾ ಮಹಾಪ್ರಬಂಧವಾಗಿದೆ. ಈ ಕೃತಿಯು ಚರಿತ್ರೆಯಲ್ಲಿ ಪ್ರಚಲಿತವಲ್ಲದ ಪ್ರಭಾವಿ ಶರಣನಾದ ಶಂಕರದಾಸಿಮಯ್ಯನ ಕುರಿತ ಸಂಶೋಧನೆಯಾಗಿದೆ. ಶಂಕರದಾಸಿಮಯ್ಯನ ಜೀವನದ ಹಲವು ಘಟನೆಗಳಲ್ಲಿ ಜೇಡರ ದಾಸಿಮಯ್ಯನ ಭೇಟಿಯು ಒಂದು, ಜೇಡರದಾಸಿಮಯ್ಯನಿಗೆ ಶಿವನಿಂದ ತವನಿಧಿಯನ್ನು ಪಡೆದ ಭಕ್ತ ಎಂಬ ಅಹಂ ತಲೆಯನ್ನು ಹೊಕ್ಕಾಗ, ಆ ಅಹಂ ಅನ್ನು ದೂರ ಮಾಡಿ ಮತ್ತೆ ಭಕ್ತಿಯನ್ನು ಮೆರೆಯುವಂತೆ ಮಾಡಿದಾತ ಶಂಕರದಾಸಿಮಯ್ಯ ಎಂಬ ಕಥೆ ಕನ್ನಡಸಾಹಿತ್ಯದಲ್ಲಿ ದೊರೆಯುತ್ತದೆ. ಇದಕ್ಕೆ ಸಂಬಂಧಿಸಿದಂತೆ ಪಂಡಿತ ಮಲ್ಲಿಕಾರ್ಜುನ ಕೃತ ಶಂಕರದಾಸಿಮಯ್ಯ ಪುರಾಣವನ್ನು ಕುರಿತ ಅಧ್ಯಯನವನ್ನು ಈ ಸಂಶೋಧನಾ ಕೃತಿ ಒಳಗೊಂಡಿದೆ. ಶಂಕರದಾಸಿಮಯ್ಯನೊಂದಿಗೆ ಜೇಡರದಾಸಿಮಯ್ಯನ ಸಂಬಂಧವನ್ನು ಹೇಳುವ ಒಂದು ಕಥೆಯನ್ನು ಶಂಕರದಾಸಿಮಯ್ಯ ಪುರಾಣ ಒಳಗೊಂಡಿದ್ದು, ಆ ಕುರಿತಂತೆ ಜೇಡರದಾಸಿಮಯ್ಯನ ಜೀವನವನ್ನು ಕೆಲಮಟ್ಟಿಗೆ ಈ ಕೃತಿಯಲ್ಲಿ ಕೃತಿಕಾರರು ಚರ್ಚಿಸಿದ್ದಾರೆ.

"ಈಶಭಕ್ತ ಲಲಾಮ ಶಂಕರ।
ದಾಸಿಯಾ ಮುದನೂರು ದೇವರ।
ದಾಸಿಮಯ್ಯನ ತವನಿಧಿಯನುರೆ ಬಯಲ ಮಾಡಿದನು॥"[೧೧]

ಎಂಬ ವಾಕ್ಯ ಶಂಕರದಾಸಿಮಯ್ಯ ಪುರಾಣದ ಆರನೇ ಸಂಧಿಯಲ್ಲಿ ಬರುತ್ತದೆ. ಈ ಪದ್ಯದಂತೆ ಇಲ್ಲಿ ಶಂಕರದಾಸಿಮಯ್ಯ ಗರ್ವಭಂಗಗೊಳಿಸುವುದು ಜೇಡರದಾಸಿಮಯ್ಯನನ್ನೇ ಹೊರತು, ದೇವರದಾಸಿಮಯ್ಯನದಲ್ಲ ಅಥವಾ ಕೃತಿ ರಚನೆಯ ಕಾಲವನ್ನು(ಕೃತಿಕಾರರು ನಿರ್ಣಯಿಸಿದಂತೆ) ಕ್ರಿಶ ೧೬೫೬–೮೭ ಎಂದಿಟ್ಟುಕೊಂಡರೆ. ಈ ಕೃತಿ ರಚನೆಯ ಹೊತ್ತಿಗಾಗಲೇ ಜೇಡರದಾಸಿಮಯ್ಯನ ಹೆಸರಿನೊಂದಿಗೆ 'ದೇವರ' ಎಂಬ ವಿಶೇಷಣ ಬೆರೆತು 'ದೇವರ'ದಾಸಿಮಯ್ಯ ಎಂಬ ಹೆಸರು ಬಂದಿರಬಹುದೆಂದು ತೋರುತ್ತದೆ. ಮತ್ತೊಂದು ಊಹೆ ಆವರೆಗಿನ ಕೃತಿ ರಚನಾ ಪರಂಪರೆಯಲ್ಲಿ ಕವಿಗಳು ಸೂಕ್ಷ್ಮ ದೃಷ್ಟಿಯಿಂದ ಶಂಕರದಾಸಿಮಯ್ಯನ ಕಥೆಯಲ್ಲಿ ಬರುವ ದಾಸಿಮಯ್ಯನನ್ನು ಜೇಡರದಾಸಿಮಯ್ಯ ಎಂದೇ ನಮೂದಿಸಿರಬೇಕು. ಈ ಸಾಧ್ಯತೆಯನ್ವಯ ಈ ಇಬ್ಬರು ವ್ಯಕ್ತಿಗಳ ಭಿನ್ನತೆಯ ಅರಿವು ಇರಬಹುದು ಅಥವಾ ಮೊದಲಿನ ಪರಂಪರೆಯನ್ನೇ ಅನುಸರಿಸಿರಬಹುದು.

ಶಂಕರದಾಸಿಮಯ್ಯನ ಜೀವನದ ಪ್ರಮುಖ ಘಟನೆಗಳನ್ನು ಚರ್ಚಿಸುವಾಗ ಕೃತಿಕಾರರು ಹೀಗೆ ನಮೂದಿಸುತ್ತಾರೆ. "ಕ್ರಿ ಶ ೧೦೭೫ರ ಸುಮಾರಿಗೆ ನವಿಲೆಯಿಂದ ಮುದನೂರಿಗೆ ಪ್ರಯಾಣ, ಜೇಡರದಾಸಿಮಯ್ಯನ ತವನಿಧಿಯನ್ನು ಬಯಲು ಮಾಡಿದ ಪ್ರಖ್ಯಾತಿ"[೧೨] "ಕ್ರಿಶ ೧೦೮೦ರಲ್ಲಿ ೪ನೆಯ ಜಯಸಿಂಹನ ಆಹ್ವಾನದಂತೆ ಕಲ್ಯಾಣಕ್ಕೆ ಆಗಮನ, ನಾರಸಿಂಹ ವಿಗ್ರಹ ದಹನ, ಅಗ್ನಿ, ನೇತ್ರದ ಮಹಿಮೆ ತೋರಿದುದು".[೧೩] ಈ ಎರಡು ಘಟನೆಗಳ ನಿರ್ಣಯವನ್ನು ಕೃತಿಕಾರರು ನೀಡುತ್ತಾರೆ. ಒಂದನೆಯದು ೧೦೭೫ರ ಸುಮಾರಿಗೆ ಶಂಕರದಾಸಿಮಯ್ಯ ಮುದನೂರಿಗೆ ಪ್ರಯಾಣ ಮಾಡಿ ಅಲ್ಲಿ ಜೇಡರದಾಸಿಮಯ್ಯನ ತವನಿಧಿಯನ್ನು ಬಯಲು ಮಾಡಿದ ಪ್ರಖ್ಯಾತಿ ದೊರೆತದ್ದು ಮತ್ತು (೧೦೮೦) ಕೇವಲ ೫–೬ವರ್ಷಗಳ ಅಂತರದಲ್ಲಿ ೪ನೇ ಜಯಸಿಂಹನ ಆಹ್ವಾನದಂತೆ ಕಲ್ಯಾಣಕ್ಕೆ ಆಗಮಿಸಿ ನಾರಸಿಂಹ ವಿಗ್ರಹದಹನ, ಅಗ್ನಿ ನೇತ್ರದ ಮಹಿಮೆಯನ್ನು ಶಂಕರದಾಸಿಮಯ್ಯ ತೋರುತ್ತಾನೆ. ಎರಡನೆಯದು ಕ್ರಿ.ಶ.೧೧೨೦ರ ಹೊತ್ತಿಗೆ ಢಕ್ಕೆಯ ಬೊಮ್ಮಣ್ಣನಿಂದ ಶಂಕರ ದಾಸಿಮಯ್ಯನ ಗರ್ವಭಂಗ ಎಂದು ಹೇಳಿ, ಶಂಕರದಾಸಿಮಯ್ಯನ ಐಕ್ಯ ಕ್ರಿಶ ೧೧೨೫–೩೦ ಎನ್ನುತ್ತಾರೆ. ಈ ಎಲ್ಲಾ ನಿದರ್ಶನಗಳನ್ನು ಆಧರಿಸಿ ಶಂಕರದಾಸಿಮಯ್ಯನ ಕಿರಿಯ ಸಮಕಾಲೀನನಾದ ದಾಸಿಮಯ್ಯನ ಕಾಲವನ್ನು ಈತನಿಗಿಂತಲೂ ಮತ್ತಷ್ಟು ಮುಂದಕ್ಕೆ ತಳ್ಳುವ ಸಾಧ್ಯತೆ ಇದ್ದು ಕ್ರಿಶ ೧೦೪೦ರ ನಂತರ ೧೧೪೦ ಎಂದು ಗುರುತಿಸಬಹುದು. ಇನ್ನು ೪ನೇ ಜಯಸಿಂಹನು ಕ್ರಿಶ ೧೦೮೦ ರಿಂದ ೧೦೮೨ರವರೆಗೆ ಕಲ್ಯಾಣವನ್ನು ರಾಜಧಾನಿಯಾಗಿಸಿ ಕೊಂಡಿದ್ದನೆಂಬುದು ಇಲ್ಲಿನ ಚರ್ಚೆಗಳಿಂದ ಸ್ಪಷ್ಟಗೊಳ್ಳುತ್ತದೆ.

**ಎಚ್.ತಿಪ್ಪೇರುದ್ರಸ್ವಾಮಿಯವರ 'ವೀರಶೈವ ದೀಪ್ತಿ'** ಕೃತಿಯನ್ನು ಕ್ರಿಶ ೧೯೯೯ರಲ್ಲಿ ಮೈಸೂರಿನ ಭಾರತ ಶರಣ ಸಾಹಿತ್ಯ ಪರಿಷತ್ತಿನಿಂದ ಪ್ರಕಟಿಸಲಾಗಿದೆ. ಈ ಕೃತಿಯಲ್ಲಿನ **'ವಚನ ಚಳುವಳಿ'**

ಎಂಬ ಲೇಖನವನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಈ ಲೇಖನದಲ್ಲಿ ವೀರಶೈವ ಹಾಗೂ ಕಾಳ ಮುಖದ ಸಂಬಂಧಗಳನ್ನು ಲೇಖಕರು ಚರ್ಚಿಸಿದ್ದಾರೆ. ಇದರೊಂದಿಗೆ ವಚನ ಚಳುವಳಿ ಹೇಗೆ ಮೊದಲುಗೊಂಡಿತು ಎನ್ನುವುದನ್ನು ಹಲವು ನೆಲೆಗಳಿಂದ ವಿವರಿಸುತ್ತಾರೆ. "ಬಸವಣ್ಣನವರು ಬಳಸಿದ ವಚನ ಸಾಹಿತ್ಯದ ಉಗಮ ಹೇಗಾಯಿತೆಂಬುದನ್ನು ನಿರ್ದಿಷ್ಟವಾಗಿ ಹೇಳಲಾಗದಿದ್ದರೂ, ಜಾನಪದ ಸಾಹಿತ್ಯದ ದಾಟಿ ಸ್ವಲ್ಪ ಮಟ್ಟಿಗಾದರೂ ಅವುಗಳ ಲಯದ ಮೇಲೆ ಪ್ರಭಾವವನ್ನು ಬೀರಿರಬೇಕು. ದೇವರದಾಸಿಮಯ್ಯ (ಸು.೧೦೫೦)ನ ವಚನಗಳಲ್ಲಿ ತ್ರಿಪದಿಯ ಛಾಯೆ ಅಲ್ಲಲ್ಲಿ ಕಂಡು ಬರುತ್ತದೆ"[೧೪] ಎಂದು ಹೇಳುತ್ತಾ, "ದೇವರದಾಸಿಮಯ್ಯ ಮೊದಲಾದವರು ಸಣ್ಣ ಪ್ರಮಾಣದಲ್ಲಿ ಪ್ರಾರಂಭಿಸಿದ ಈ ಪ್ರಯೋಗ, ಶ್ರೀ ಬಸವೇಶ್ವರರಿಂದ ಪ್ರಭಾವಶಾಲಿಯಾಗಿ, ವ್ಯಾಪಕವಾಗಿ ಜಾಗೃತಿಗೊಳಿಸಬಲ್ಲ ಮಹಾಶಕ್ತಿಯುತವಾದ ಮಾಧ್ಯಮವಾಗಿ ಪರಿಣಮಿಸಿತು"[೧೫] ಎಂಬ ಅಭಿಪ್ರಾಯವನ್ನು ಮುಂದಿಡುತ್ತಾರೆ.

"ಜನರ ಮನಸ್ಸನ್ನು ಮುಟ್ಟಿ ಸದ್ವಿಚಾರಗಳಿಂದ ಅದನ್ನು ಒಮ್ಮುಖಗೊಳಿಸುವುದು, ಕತ್ತಿಯನ್ನು ಝುಳಪಿಸುತ್ತಾ ಅಥವಾ ಗುಂಡನ್ನು ಹಾರಿಸುತ್ತಾ ಕತ್ತಲನ್ನು ಕಳೆಯುವುದು, ನಿಧಾನವಾಗಿ ಬೆಳೆಯುವ ಸೃಷ್ಟ್ಯಾತ್ಮಕ ಕ್ರಾಂತಿ(Creative Revalution) ಮಾರ್ಗ. ಅದಕ್ಕಾಗಿ ಬಸವಣ್ಣ ಕೈಗೆತ್ತಿಕೊಂಡದ್ದು ಖಡ್ಗವನ್ನಲ್ಲ, ವಚನಗಳನ್ನು. ಕನ್ನಡದಲ್ಲಿ ಆಗಲೇ ವಚನ ಪ್ರಕಾರ ದಾಸಿಮಯ್ಯಾದಿಗಳಿಂದ ಉಗಮಗೊಂಡಿತ್ತು. ನೇರವಾದ ಭಾಷೆಯಲ್ಲಿ ಜನತೆಯನ್ನು ಮುಟ್ಟಿ ಜಾಗೃತಗೊಳಿಸುವ ಸಶಕ್ತ ಮಾಧ್ಯಮವನ್ನು ಬಸವಣ್ಣ ಅವುಗಳಲ್ಲಿ ಕಂಡುಕೊಂಡ"[೧೬] ಎಂದು ವಚನ ಚಳುವಳಿಯ ಉಗಮವನ್ನು ಒಂದು ಕ್ರಾಂತಿ ಎಂಬುದಾಗಿ ಪರಿಗಣಿಸುತ್ತಾರೆ. ಈ ಮೇಲಿನ ಎಲ್ಲಾ ಮಾತುಗಳು ಜೇಡರದಾಸಿಮಯ್ಯನು ವಚನ ಚಳುವಳಿಯನ್ನು ಸಣ್ಣ ಪ್ರಮಾಣದಲ್ಲಿ ಪ್ರಾರಂಭಿಸಿದಾತ, ಅದರ ಕ್ರಾಂತಿಯನ್ನು ಪ್ರಬುದ್ಧಗೊಳಿಸಿದ್ದು ಮಾತ್ರ ಬಸವಣ್ಣ ಎಂಬ ಅಭಿಪ್ರಾಯವನ್ನು ತಿಳಿಸುತ್ತವೆ(ಲೇಖಕರು ವಚನಕಾರ ಜೇಡರದಾಸಿಮಯ್ಯನನ್ನು ಇಲ್ಲಿ ದೇವರ ದಾಸಿಮಯ್ಯನೆಂದೇ ಕರೆದಿದ್ದಾರೆ). ಆದರೆ ವಚನ ಎಂಬ ಪ್ರಕಾರ ಜೇಡರದಾಸಿಮಯ್ಯನ ಕಾಲಕ್ಕಾಗಲೇ ಪ್ರಬುದ್ಧವಾದ ತಳಹದಿಯನ್ನು ಕಂಡುಕೊಂಡಿತ್ತು ಎನ್ನುವುದನ್ನು ಇಲ್ಲಿ ಮರೆಯುವಂತಿಲ್ಲ. ಲೇಖಕರು ಆದ್ಯ ವಚನಕಾರ ದೇವರದಾಸಿಮಯ್ಯ ಆತನ ಕಾಲ ಕ್ರಿ.ಶ ೧೦೫೦ ಎಂದೇ ಗುರುತಿಸುತ್ತಾರೆ. ಇದೇ ಲೇಖನದಲ್ಲಿ ಮತ್ತೊಂದೆಡೆ ವೀರಶೈವ ಪಂಥದ ಕುರಿತು "ವೀರಶೈವ ಎನ್ನುವ ಪಂಥ ಪ್ರಾಚೀನವಾದುದೆಂಬುದನ್ನು ಒಪ್ಪಿಕೊಳ್ಳಲೇ ಬೇಕಾಗುತ್ತದೆ. ೧೪ನೇ ಶತಮಾನದ ಮಾಧವರು ತಮ್ಮ ಸರ್ವದರ್ಶನ ಸಂಗ್ರಹದಲ್ಲಿ ವೀರಶೈವ ಎಂಬ ಹೆಸರನ್ನು ಹೇಳಿಲ್ಲ. ವೀರಶೈವರಿಗೂ ಕಾಳಮುಖರಿಗೂ ಭೇದವಿಲ್ಲವೆಂದು ಅವರು ಕಲ್ಪಿಸಿದಂತೆ

ತೋರುತ್ತದೆ. 'ವೀರಶೈವ' ಎಂಬ ಹೆಸರನ್ನು ಅವರು ಉಲ್ಲೇಖಿಸದಿದ್ದ ಮಾತ್ರಕ್ಕೆ ಅದರ ಅಸ್ತಿತ್ವವನ್ನೇ ಅವರು ಪರಿಗಣಿಸಿಲ್ಲವೆನ್ನುವುದಕ್ಕಿಂತ ಹಿಂದಿನಿಂದಲೂ ಪ್ರಸಿದ್ಧವಾಗಿ ಬಂದ ಕಾಳಮುಖರಲ್ಲಿಯೇ ವೀರಶೈವರನ್ನು ಸಮಾವೇಶಗೊಳಿಸುವ ಪದ್ಧತಿ ಮೊದಲಿನಿಂದಲೂ ಇತ್ತೆಂಬುದಕ್ಕೆ ಅದನ್ನು ಸಮರ್ಥನೆಯಾಗಿ ತೆಗೆದುಕೊಳ್ಳಬಹುದು"[೧೭] ಎಂದು ಹೇಳುತ್ತಾ, "ವೀರಶೈವಕ್ಕೂ ಕಾಳಮುಖಕ್ಕೂ ಭೇದಗಳಿದ್ದರೂ ಕನ್ನಡ ನಾಡಿನ ಮಟ್ಟಿಗೆ ಹೇಳಬಹುದಾದರೆ ಶ್ರೀ ಬಸವಣ್ಣನವರ ಕಾಲದ ವೀರಶೈವವು ಕಾಳಮುಖ ಪಂಥವನ್ನು ತನ್ನಲ್ಲಿ ಅಳವಡಿಸಿಕೊಂಡಂತೆ ತೋರುತ್ತದೆ. ಅನೇಕ ಕಾಳಮುಖ ಮಠಗಳು ವೀರಶೈವ ಮಠಗಳಾಗಿ ಪರಿವರ್ತನೆಗೊಂಡವು"[೧೮] ಎಂದು ಹೇಳುತ್ತಾ, ಕೋಡಿಯ ಮಠ ಮತ್ತು ಹೂಲಿಯ ಪಂಚವಣ್ಣಿಗೆಯ ಮಠಗಳು ಮೊದಲು ಕಾಳಮುಖವಾಗಿದ್ದು, ನಂತರ ವೀರಶೈವವಾಗಿ ಮಾರ್ಪಟ್ಟುದಾಗಿ ವಿವರಿಸತ್ತಾರೆ.

ಎಂ.ಎಂ. ಕಲಬುರ್ಗಿಯವರು ಮುದನೂರನ್ನು ಕುರಿತು ಚರ್ಚಿಸುವಾಗ ಇದು ಶೈವಶಾಖೆ (ನಕುಲೀಶ ಪಾಶುಪತದ)ಯ ಕೇಂದ್ರವಾಗಿದ್ದು, ನಂತರದಲ್ಲಿ ವೀರಶೈವವಾಗಿ ಪರಿವರ್ತನೆ ಹೊಂದಿತು ಎಂದು ಸ್ಪಷ್ಟಪಡಿಸುತ್ತಾರೆ. ಶೈವವು ವೀರಶೈವವಾಗಿ ಪರಿವರ್ತನೆ ಹೊಂದುತ್ತಿದ್ದ ಕಾಲದಲ್ಲಿಯೇ ದೇವರದಾಸಿಮಯ್ಯ ಹಾಗೂ ಜೇಡರದಾಸಿಮಯ್ಯರು ಬದುಕಿದ್ದು ಪ್ರಮುಖವಾಗತ್ತದೆ. ದೇವರದಾಸಿಮಯ್ಯ ಶೈವನಾಗಿಯೇ ಬಾಳದವನಾಗಿದ್ದು ಜೇಡರದಾಸಿಮಯ್ಯನ ಕಾಲದಲ್ಲಿಯೇ ಶೈವ ಧರ್ಮವು ವೀರಶೈವವಾಗಿ ಸಂಪೂರ್ಣವಾಗಿ ಪರಿವರ್ತನೆ ಹೊಂದಿ ಬಸವಣ್ಣ ಮೊದಲಾದವರ ಕಾಲಕ್ಕಾಗಲೇ ಪ್ರವೃದ್ಧವಾಗಿ ಪ್ರಸರಣಹೊಂದಿರಬೇಕು ಎನಿಸುತ್ತದೆ.

**ರಾಮರೆಡ್ಡಿ ಎಸ್.** ರಡ್ಡೇರ ಅವರ ೨೦೦೫ರಲ್ಲಿ ಪ್ರಕಟವಾದ **'ದೇವರದಾಸಿಮಯ್ಯನ ಜೀವನ ಮತ್ತು ಸಾಹಿತ್ಯ'** ಕೃತಿಯು ಸಂಶೋಧನೆಯ ದೃಷ್ಟಿಯಿಂದ ನೇರವಾದ ವಿಷಯ ವಿವರಣೆಯನ್ನು ಹೊಂದಿದ ಕೃತಿಯಾಗಿದೆ. ಈ ಕೃತಿಯಲ್ಲಿ ಚರ್ಚೆಗೊಂಡ ಪ್ರಧಾನ ವಿಷಯಗಳೆಂದರೆ, ದಾಸಿಮಯ್ಯನ ಕುರಿತ ಅಧ್ಯಯನದ ಆಕರಗಳು, ದೇವರದಾಸಿಮಯ್ಯ-ಜೇಡರದಾಸಿಮಯ್ಯರ ಬಗೆಗಿನ ವಿವರಣೆ, ದಾಸಿಮಯ್ಯನ ಸ್ಥಳ-ಕಾಲ, ಜೀವನೇತಿಹಾಸ, ಪವಾಡಗಳು, ದಾಸಿಮಯ್ಯನ ಸಾಹಿತ್ಯ ಕೃತಿಗಳು, ದಾಸಿಮಯ್ಯನ ವಚನಗಳ ಸಾಂಸ್ಕೃತಿಕ ವಿವೇಚನೆ ಹೀಗೆ ಮೊದಲಾದವುಗಳ ಬಗ್ಗೆ ಅತ್ಯಂತ ಆಳವಾದ ಚರ್ಚೆಗಳಿವೆ.

ಜೇಡರದಾಸಿಮಯ್ಯನ ಕುರಿತ ಶಾಸನಗಳನ್ನು ಆಧಾರವಾಗಿ ನೀಡುತ್ತಾ "ಮುದನೂರು ಗ್ರಾಮದ ಹತ್ತಿರದಲ್ಲಿರುವ ಕ್ರಿ.ಶ ೧೦೫೮ರ ಹಾವಿನಾಳ ಶಾಸನದ ಕೊನೆಯಲ್ಲಿ ದೇವರದಾಸಿಯು ಭಯಲಿಪಿ ಲಿಖಿತ... ಎಂಬ ಉಲ್ಲೇಖವನ್ನು"[೧೯] ಕೃತಿಕಾರರು ನೀಡಿದ್ದಾರೆ. ಇದು ಸತ್ಯವಾದಲ್ಲಿ

ಹಾವಿನಾಳ ಶಾಸನದ ಕರ್ತೃ ದೇವರದಾಸಿಮಯ್ಯನೇ ಆಗುತ್ತಾನೆಂದು ಹೇಳಿ ಚರ್ಚೆಯನ್ನು ಕೊನೆಗೊಳಿಸುತ್ತಾರೆ. ಆದರೆ ಇತ್ಯರ್ಥವಾಗಬೇಕಾದ ವಿಷಯವೆಂದರೆ ಈ ಶಾಸನದ ಕಾಲ ಕ್ರಿಶ ೧೦೫೮ ಆಗಿದ್ದರೆ ಅಲ್ಲಿಗೆ ದೇವರದಾಸಿಮಯ್ಯನ ಕಾಲವು ಸ್ಪಷ್ಟಗೊಳ್ಳುತ್ತದೆ. ಇನ್ನುಳಿದ ಶಾಸನಗಳ ಕಾಲ ಎಂದರೆ ಮುದನೂರು ಶಾಸನದ ಕಾಲ ಕ್ರಿ.ಶ. ೧೧೬೭. ಅಲ್ಲಿಗೆ ಹೆಚ್ಚು ಕಡಿಮೆ ೮೦ ರಿಂದ ೯೦ ವರ್ಷಗಳ ಅಂತರ ಕಂಡುಬರುತ್ತದೆ. ಕೃತಿಕಾರರು ಕೊಟ್ಟ ಆಧಾರ ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯನ ನಡುವಿನ ಕಾಲದ ಅಂತರವನ್ನು ತೋರಿಸಿಕೊಡುತ್ತದೆ. ಒಂದು ಪಕ್ಷ ವಿದ್ವಾಂಸರ ವಾದದಂತೆ ಜೇಡರದಾಸಿಮಯ್ಯ ದೇವರದಾಸಿಮಯ್ಯ ಒಂದೇ ಎಂದು ಭಾವಿಸುವುದಾದರೆ, ಈ ಒಂದು ಶಾಸನವನ್ನು ಹೊರತುಪಡಿಸಿ ಇನ್ನುಳಿದ ಇತರೆ ಶಾಸನಗಳು ದೇವರದಾಸಿಮಯ್ಯ ಎಂಬ ಹೆಸರನ್ನು ಉಲ್ಲೇಖಿಸಿರುವುದಿಲ್ಲ. ಜೇಡರದಾಸಿಮಯ್ಯ ಎಂಬ ಹೆಸರು ಮುಂದೆ 'ದೇವರ' ವಿಶೇಷಣವನ್ನು ಹೊಂದಿ ದೇವರದಾಸಿಮಯ್ಯ ಆಗಿರುವ ಸಾಧ್ಯತೆಗಳೇ ಭಾಷಾ ವೈವಿಧ್ಯತೆಯಲ್ಲಿ ಹೆಚ್ಚು. ಹಾಗಿದ್ದಾಗ 'ದೇವರವು' 'ಜೇಡರ' ಆಗಿರುವುದು ಹೇಗೆ? ಎಂಬ ಪ್ರಶ್ನೆ ಇಲ್ಲಿ ಮೂಡುತ್ತದೆ.

**ಸಿ.ಕೆ ನಾವಲಗಿಯವರ 'ಜೇಡರ ದಾಸಿಮಯ್ಯ'** ಕೃತಿಯು ೨೦೦೫ರಲ್ಲಿ ಶರಣ ಪರಂಪರೆ ಪುಸ್ತಕ ಮಾಲೆಯಿಂದ ಪ್ರಕಟಗೊಂಡಿದ್ದು; ಕೃತಿಯು ಪ್ರಧಾನವಾಗಿ ೨ ಭಾಗಗಳಲ್ಲಿ ರಚನೆಯಾಗಿದೆ. ಒಂದು ದಾಸಿಮಯ್ಯನ ಜೀವನ-ಸಾಧನೆ ಕುರಿತದ್ದು. ಮತ್ತೊಂದು ಆತನ ವಚನಗಳ ವಿಶ್ಲೇಷಣೆ.

"ಜೇಡರದಾಸಿಮಯ್ಯನು ಒಬ್ಬ ಹಿರಿಯ ಶಿವ ಶರಣ; ಐತಿಹಾಸಿಕ ವ್ಯಕ್ತಿ. ಹಿರಿಯೂರು, ಗೊಬ್ಬೂರು ಶಾಸನಗಳು, ಪುರಾಣ ಕಾವ್ಯಗಳು, ಬಸವಣ್ಣ, ಬ್ರಹ್ಮ ಶಿವರಲ್ಲಿಯ ಉಲ್ಲೇಖಗಳು, ಶಿವ ಶರಣರ ವಚನಗಳು, ವಿದ್ವಾಂಸರ ಲೇಖನಗಳನ್ನೆಲ್ಲ ಅನುಲಕ್ಷಿಸಿದರೆ, ಜೇಡರದಾಸಿಮಯ್ಯ ೧೦೪೦ರ ಸುಮಾರಿನಲ್ಲಿ ಜೀವಿಸಿರಬೇಕೆನ್ನಬಹುದು. ಬಸವಣ್ಣನಿಗಿಂತ ನೂರಾರು ವರ್ಷ ಮುಂಚಿನಿಂದ ಜೇಡರದಾಸಿಮಯ್ಯ, ಶಂಕರದಾಸಿಮಯ್ಯನಂತಹ ಶಿವ ಶರಣರು ಹುಟ್ಟಿ ಚಾರಿತ್ರ್ಯದಿಂದಲೂ ವಾದ ವಿಷಯಗಳಿಂದಲೂ ವೀರಶೈವ ಧರ್ಮವನ್ನು ಬೆಳೆಸುತ್ತಿದ್ದರೆನ್ನಲು ಅಡ್ಡಿಯಿಲ್ಲ. ಇವರಿಂದಲೇ ವಚನ ರಚನೆಯೂ ನಡೆಯಿತು. ದಾಸಿಮಯ್ಯ ಬಹಳ ವರ್ಷ ಬಾಳಿರಬೇಕೆಂದು ತೋರುತ್ತದೆ. ಅಂತೆಯೇ ಅವನಿಂದ ಬಹಳಷ್ಟು ವಚನ ರಚನೆಯಾಗಿರುವ ಸಾಧ್ಯತೆಯಿದೆ. ಆದರೆ ಉಪಲಬ್ಧವಾಗಿರುವ ವಚನಗಳು ಸುಮಾರು ೧೫೦. ದೇವರದಾಸಿಮಯ್ಯ ಮತ್ತು ಜೇಡರದಾಸಿಮಯ್ಯ ಬೇರೆ ಬೇರೆ ಎಂಬ ಅಭಿಪ್ರಾಯವೊಂದಿತ್ತು. ಈಗ ಅದು ಬಿದ್ದು ಹೋಗಿ ಇದ್ದವನು ವಚನಕಾರ ಜೇಡರದಾಸಿಮಯ್ಯ ಮಾತ್ರ ಎಂದು ಸಾಧಿತವಾಗಿದೆ[೨೦] ಎಂದು ಹೇಳುತ್ತಾರೆ ನಾವಲಗಿಯವರು.

ಇವರ ಪ್ರಕಾರ ಜೇಡರದಾಸಿಮಯ್ಯ ಎಂಬ ವ್ಯಕ್ತಿಯೊಬ್ಬನೇ. ಆತನೇ ವಚನಕಾರ ಮತ್ತು ಪೊಟ್ಟಲಕೆರೆಗೆ ಭೇಟಿನೀಡಿದ ಶರಣ. ಆತನು ಬಹಳ ವರ್ಷ ಬದುಕಿದ್ದು, ಶಂಕರ ದಾಸಿಮಯ್ಯನ ಸಮಕಾಲೀನನೂ ಜಯಸಿಂಹ–ಸುಗ್ಗಲೆಯರ ಗುರುವೂ, ತವನಿಧಿ ಪಡೆದ ದಾಸಿಮಯ್ಯನೂ, ಎಲ್ಲರೂ ಒಬ್ಬನೇ ವ್ಯಕ್ತಿ. ಇವರ ಗಮನ ಜೇಡರದಾಸಿಮಯ್ಯನ ವಚನಗಳಲ್ಲಿ ಬಂದಂತಹ ಸಾಮಾಜಿಕ ಆಯಾಮಗಳನ್ನು ಕುರಿತದ್ದಾಗಿದ್ದು. ಅಂದಿನ ಕಾಲದಲ್ಲಿ ಸಾಮಾಜಿಕ ಜವಾಬ್ದಾರಿಯ ಭಾಗವಾಗಿ ಇವು ಹೇಗೆ ಕಾರ್ಯ ನಿರ್ವಹಿಸಿದವು ಎಂಬುದಾಗಿದೆ.

"ಜೇಡರದಾಸಿಮಯ್ಯನು ವಚನ ರಚನೆಯಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡಿದ್ದಾನೆ. ಅಂತೆಯೇ ಆತನ ವಚನಗಳಲ್ಲಿ ಕೆಲವು ಅಚ್ಚ ತ್ರಿಪದಿ–ಚೌಪದಿಗಳನ್ನು ಹೋಲುವ ರಚನೆಗಳಿವೆ. ತ್ರಿಪದಿಯ ಲಯವುಳ್ಳ ರಚನೆಗಳೂ ಇವೆ. ಏನೇ ಇರಲಿ 'ವಚನ'ಎಂಬ ಈ ವಿನೂತನ ಪರಿಕಲ್ಪನೆಯನ್ನು ಕೊಟ್ಟ ಮೊದಲಿಗ ಜೇಡರದಾಸಿಮಯ್ಯ ಎನ್ನುವ ಖಚಿತ ಅಭಿಪ್ರಾಯ ಎಂ. ಚಿದಾನಂದ ಮೂರ್ತಿ, ಪಿ.ವಿ ನಾರಾಯಣರಂಥ ವಿದ್ವಾಂಸರದ್ದು ಎನ್ನುವುದನ್ನು ಲಕ್ಷಿಸಬೇಕು"[೨೧] ಎಂದೂ ಹೇಳುತ್ತಾರೆ. ನಂತರ ವಚನ ರಚನೆಗೆ ತಳಹದಿ ಹಾಕಿದಾತನೇ ಜೇಡರದಾಸಿಮಯ್ಯ. ಚಂಪೂ ತನ್ನ ಪ್ರಭಾವವನ್ನು ಕಳೆದುಕೊಳ್ಳುವ ಸಂದರ್ಭದಲ್ಲಿ ಜನ ಸಂಮುಖಿಯಾಗಿ ನೆಲೆನಿಂತದ್ದು ಈ ವಚನ ಸಾಹಿತ್ಯವೆ. ಇಂತಹ ಸಂದರ್ಭದಲ್ಲಿ ಶೈವ ಧರ್ಮವು ವೀರಶೈವವಾಗಿ ಪರಿಷ್ಕರಣೆ ಹೊಂದಿತು. ಇದಕ್ಕೆಲ್ಲ ಮಾರ್ಗದರ್ಶಕನಾಗಿ ನೆಲೆಯಾದವನು ಜೇಡರ ದಾಸಿಮಯ್ಯ ಎಂದು ಹೇಳುತ್ತಾ ಈ ಕೃತಿಯಲ್ಲಿ ವಚನ ಶಬ್ದೋತ್ಪತ್ತಿ, ವಚನಗಳ ಮಹತ್ವ ಮೊದಲಾದವುಗಳನ್ನು ತಿಳಿಸುತ್ತಾರೆ. ಲೇಖನದಲ್ಲಿ ಪ್ರಧಾನವಾಗಿರುವ ಅಂಶಗಳೆಂದರೆ;

- ನಂದಿ ಗ್ರಾಮದ ಮುಕುಂದ ದೇವಾಲಯ, ಶಿವ ದೇವಾಲಯವನ್ನಾಗಿಸಿದ ಅಂತೆಯೇ ರಾಮೇಶ್ವರ ಗುಡಿ ವೈಷ್ಣವದಿಂದ ಶೈವೀಕರಣಗೊಂಡಿರಬೇಕು.[೨೨] ಮುದನೂರಿನ ರಾಮೇಶ್ವರ ದೇವಾಲಯವನ್ನು ವೀಕ್ಷಿಸಿದಾಗಲೂ ಇಂತಹ ಅನುಮಾನಗಳು ಸುಳಿದು ಹೋಗುತ್ತವೆ. ಗಜಲಕ್ಷ್ಮಿಯ ಲಾಲಟ ಮೊದಲಾದ ಕೆತ್ತನೆಗಳು ಇದು ಮೊದಲು ವೈಷ್ಣವ ದೇವಾಲಯ ವಾಗಿದ್ದು ನಂತರ ಶೈವೀಕರಣ ಗೊಂಡಿರಬಹುದು.
- "ಪೊಟ್ಟಲಗೆರೆಯ ನೇಯ್ಗೆಯ ಕಾಯಕದ ದೇವಾಂಗ ಸಮುದಾಯದವರನ್ನೆಲ್ಲ ಕಲೆಹಾಕಿ, ಶಿವನ ಭಕ್ತರಾಗಿ ಎಂದು ಕರೆಕೊಟ್ಟು ವೀರಶೈವ ಧರ್ಮದ ಮಹಿಮಾತಿಶಯವನ್ನು ಅವರಿಗೆ ತಿಳಿಸಿ ಅವರ ಮನವನ್ನೆಲ್ಲ ಸಂಪೂರ್ಣವಾಗಿ ಗೆದ್ದನು. ಈ ಊರಿನ ಜನ ಈತನಿಗೆ ಮಠವೊಂದನ್ನು ಕಟ್ಟಿ ಕೊಟ್ಟಿದ್ದರಂತೆ"[೨೩] ಎನ್ನುವುದನ್ನು ಲೇಖಕರು ಇಲ್ಲಿ ಪ್ರಸ್ತಾಪಿಸುತ್ತಾರೆ. ಕೆಲವು ಆಧಾರಗಳ ಪ್ರಕಾರ ಪೊಟ್ಟಲಕೆರೆಯಲ್ಲಿ ಇಂದಿಗೂ ದೇವಾಂಗ

ಸಮಾಜದ ಜನರು ಹೆಚ್ಚಿನದಾಗಿ ಕಂಡುಬರುತ್ತಾರೆ ಎನ್ನಲಾಗಿದೆ. ಜ.ಚ.ನಿ ಅವರ ದಾಸಿಮಾರ್ಯ ಪ್ರಶಸ್ತಿಯಲ್ಲಿನ ದೇವರದಾಸಿಮಯ್ಯ ಚರಿತ್ರೆ ಹಾಗೂ ಕನ್ನಡ ವಚನ ದೇವಾಂಗ ಪುರಾಣ ಎಂಬಲ್ಲಿನ ಉಲ್ಲೇಖಗಳನ್ನು ಹೊರತು ಪಡಿಸಿದರೆ, ಇದುವರೆಗಿನ ಎಲ್ಲಾ ಆಕರಗಳ ಪ್ರಕಾರ ದೇವರದಾಸಿಮಯ್ಯನು ಪೊಟ್ಟಲಕೆರೆಯಲ್ಲಿ ಜೈನ ಧರ್ಮದವರನ್ನು ಮತ್ತು ವೈಷ್ಣವ ಧರ್ಮದವರನ್ನು ವಾದದಲ್ಲಿ ಗೆದ್ದು ಶಿವಭಕ್ತನಾಗಿಸಿದ ಉಲ್ಲೇಖಗಳಿವೆಯೇ ಹೊರತು ದೇವಾಂಗ ಸಮಾಜದವರನ್ನು ಶೈವರನ್ನಾಗಿಸಿದ ಆಧಾರಗಳಿಲ್ಲ. ಬಹುಶಃ ಇವರು ವೈಷ್ಣವ ಆರಾಧಕರಾಗಿದ್ದು, ಇವರನ್ನು ಶೈವರನ್ನಾಗಿಸಿರಬಹುದಾದ ಸಾಧ್ಯತೆ ಇರಬಹುದು. ಪೊಟ್ಟಲಕೆರೆಯಲ್ಲಿ ಜೈನರು ಮತ್ತು ವೈಷ್ಣವರೊಂದಿಗೆ ಇನ್ನುಳಿದ ಧರ್ಮಿಯರೂ ಅಧಿಕ ಸಂಖ್ಯೆಯಲ್ಲಿದ್ದಾರೆಂಬುದು ಅಧ್ಯಯನಗಳಿಂದ ತಿಳಿದು ಬರುತ್ತದೆ.

**ಎಂ. ಚಿದಾನಂದಮೂರ್ತಿ**ಯವರ ೨೦೧೪ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟಗೊಂಡ ಕೃತಿ **'ದೇವರದಾಸಿಮಯ್ಯ ಶಂಕರದಾಸಿಮಯ್ಯ ಜೇಡರದಾಸಿಮಯ್ಯ'**. ಈ ಕೃತಿಯು ಇತ್ತೀಚೆಗೆ ಬಂದ ಎಲ್ಲ ಚರ್ಚೆಗಳನ್ನು ಒಳಗೊಂಡಿದ್ದು, ಲೇಖಕರೇ ಇದರ ಬಗ್ಗೆ ಹೀಗೆ ಹೇಳಿಕೊಂಡಿದ್ದಾರೆ. "ಈ ಕೃತಿಯು ಸ್ಪಷ್ಟ ಆಧಾರಗಳನ್ನು ನೀಡಿ ವಾಸ್ತವವನ್ನು ಪ್ರತಿಪಾದಿಸುವ ಒಂದು ಪ್ರಾಮಾಣಿಕ ಪ್ರಯತ್ನವಾಗಿದೆ"[೨೪] ಎಂದು ಹೇಳುತ್ತಲೇ, ವಾಸ್ತವದ ಸಂಗತಿಗಳು ಹಾಗೂ ಈವರೆಗೆ ನಡೆದಿರುವ ಘಟನೆಗಳನ್ನು ಪ್ರಸ್ತಾಪಿಸಲಾಗಿದೆ ಎಂದಿದ್ದಾರೆ.

"ಒಂದು ವರ್ಷದ ಹಿಂದೆ ಬಹುಶಃ ಯಾವುದೋ ಒತ್ತಡಕ್ಕೆ ಮಣಿದ ಕರ್ನಾಟಕ ಸರ್ಕಾರವು ನೀಡಿದ ಸಲಹೆ ಮೇರೆಗೆ ಕನ್ನಡ ವಿಶ್ವವಿದ್ಯಾಲಯವು 'ದೇವರದಾಸಿಮಯ್ಯ ಪೀಠ'ವನ್ನು ಆರಂಭಿಸಿ ಅದರ ಕಾರ್ಯ ವ್ಯಾಪ್ತಿಯೊಳಗೆ ಅವನ ವಚನಗಳ ಅಧ್ಯಯನವನ್ನು ಸೇರಿಸಿದ ವಿಷಯವು ಪತ್ರಿಕೆಗಳಲ್ಲಿ ಪ್ರಕಟವಾಯಿತು. ತಕ್ಷಣವೇ ನಾನು ಅದಕ್ಕೆ ಪ್ರತಿಕ್ರಿಯಿಸಿ ದೇವರದಾಸಿಮಯ್ಯ(ಕ್ರಿ.ಶ.೧೦೪೦) ವಚನಕಾರ ಅಲ್ಲವೆಂದು ಜೇಡರದಾಸಿಮಯ್ಯನೇ 'ರಾಮನಾಥ' ಅಂಕಿತದ ವಚನಗಳ ಕರ್ತೃ ಎಂದು ಪ್ರತಿಪಾದಿಸಿ ಆ ಹೆಸರಿನ ಪೀಠವನ್ನು ವಿರೋಧಿಸಿ ಪತ್ರಿಕೆ ಗಳಿಗೆ ಹೇಳಿಕೆ ಕೊಟ್ಟ ನನ್ನ ಹೇಳಿಕೆಯನ್ನು ಖಂಡಿಸಿ ನೇಕಾರರ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನ ಇತ್ಯಾದಿ ಒಂದೆರಡು ಸಂಸ್ಥೆಗಳು ದೇವರದಾಸಿಮಯ್ಯನೇ ನಿಜವಾದ ವಚನಕಾರ ಎಂದು ತಮ್ಮ ನಿಲುವನ್ನೆ ಮತ್ತೆ ಪ್ರತಿಪಾದಿಸಿ ಇಂತಹ ಹೇಳಿಕೆಗಳನ್ನು ನೀಡಿದರೆ ನನ್ನ ವಿರುದ್ಧ ಪ್ರತಿಭಟನೆ ಹಮ್ಮಿಕೊಳ್ಳಲಾಗುವುದು ಎಂಬಂತಹ ಸೂಕ್ಷ್ಮ ಬೆದರಿಕೆಯ ಮಾತುಗಳನ್ನು ಹೇಳಿದ್ದು ಪತ್ರಿಕೆಗಳಲ್ಲಿ ಪ್ರಕಟವಾಯಿತು. ನನ್ನ ಪ್ರತಿಪಾದನೆ ಐತಿಹಾಸಿಕ ಸತ್ಯವಾದ್ದರಿಂದ ಅದನ್ನೆ ನಾನು ಲೇಖನಗಳ ಮೂಲಕ ಚಿಂತನ ಗೋಷ್ಠಿಗಳ ಮೂಲಕ ಪ್ರತಿಪಾದಿಸಿದೆ. ಮತ್ತು ಕನ್ನಡ

ವಿಶ್ವವಿದ್ಯಾಲಯದ ಕುಲಪತಿಗಳಿಗೆ ಅಗತ್ಯ ಬಿದ್ದರೆ 'ದಾಸಿಮಯ್ಯ ಪೀಠ' ಎಂದು ಹೆಸರು ಬದಲಾಯಿಸಿ ಅದರ ವ್ಯಾಪ್ತಿಗೆ ದೇವರದಾಸಿಮಯ್ಯ, ಜೇಡರದಾಸಿಮಯ್ಯ, ಶಂಕರದಾಸಿಮಯ್ಯರ ಬಗ್ಗೆ ಅಧ್ಯಯನಗಳನ್ನು ಸೇರಿಸಿ ಎಂದು ಸಲಹೆ ಕೊಟ್ಟೆ."[೨೫]ಎಂದು ವಿಷಯವನ್ನು ಸಮಷ್ಟಿಗೊಳಿಸುತ್ತಾರೆ.

ಈ ಕೃತಿ ರಚನೆಯ ಪ್ರಧಾನ ಉದ್ದೇಶವನ್ನು ಅವರು ಮೇಲಿನಂತೆ ಲೇಖಕನ ಮಾತು ಭಾಗದಲ್ಲಿ ವಿವರಿಸುತ್ತಾರೆ. ಅಂತೆಯೇ ಕೃತಿಯುದ್ದಕ್ಕೂ ಈ ಎಲ್ಲ ಗೊಂದಲ ಹಾಗೂ ಪ್ರಶ್ನೆಗಳಿಗೆ ಉತ್ತರ ಕೊಡುವ ಪ್ರಯತ್ನ ಮಾಡಿದ್ದಾರೆ. ಇಲ್ಲಿ ಕನ್ನಡ ವಿಶ್ವವಿದ್ಯಾಲಯದ 'ದೇವರದಾಸಿಮಯ್ಯ ಪೀಠ'ಕ್ಕೆ ಬದಲಾಗಿ 'ದಾಸಿಮಯ್ಯ ಪೀಠ' ಎಂದು ಸೂಚಿಸಿರುವುದು ಗಮನಾರ್ಹ. ಜೇಡರದಾಸಿಮಯ್ಯ, ದೇವರದಾಸಿಮಯ್ಯ ಭಿನ್ನರು ಎಂಬುದು ನಿಜವಾಗಲಿ, ನಿಜವಾಗದಿರಲಿ ಒಂದು ವೇಳೆ ನಿಜವೆ ಆಗಿದ್ದಲ್ಲಿ ಒಬ್ಬ ಶರಣನಿಗೆ ಅಪಚಾರವಾಗುವುದಂತೂ ನಿಜ. ಹಾಗಾಗಿ ಈ ಗೊಂದಲಗಳನ್ನು ನಿಲ್ಲಿಸಿ ಸಮನ್ವಯತೆ ತೋರುವುದು ಉತ್ತಮ ಎನ್ನುವುದೇ ಪ್ರಮುಖವಾಗುತ್ತದೆ.

ಲೇಖಕರು ತೆಲುಗು ಹಾಗೂ ಕನ್ನಡ ಬಸವಪುರಾಣಗಳನ್ನು ವಿಶ್ಲೇಷಿಸಿ ಆ ಇಬ್ಬರೂ ಶರಣರು ಹೇಗೆ ಭಿನ್ನ ಎಂಬುದನ್ನು ವಿವರಿಸಿದ್ದಾರೆ. ಎಲ್ಲ ವಿದ್ವಾಂಸರ ಅಭಿಪ್ರಾಯ ಒಂದೇ ಆಗಿದ್ದು ದೇವರ ದಾಸಿಮಯ್ಯ ಜೇಡರದಾಸಿಮಯ್ಯ ಒಂದೇ ಎಂದು ಸಾಧಿಸುತ್ತಾರೆ ಎಂದು ಹೇಳುತ್ತಲೇ ಲೇಖಕರು ಅದಕ್ಕೆ ಕಾರಣಗಳನ್ನೂ ನೀಡುತ್ತಾರೆ. "ದೇವರದಾಸಿಮಯ್ಯ'ನ ಬಗ್ಗೆ ರಚಿತವಾಗಿದ್ದ ಕಾವ್ಯ ಪುರಾಣಗಳು ಮತ್ತು ಎಲ್ಲ ವಚನಕಾರರ ವಚನಗಳು ಇಂದಿನಂತೆ ಆಗ ಲಭ್ಯವಾಗಿರಲಿಲ್ಲ. ಜೇಡರದಾಸಿಮಯ್ಯನ ಪತ್ನಿ ದುಗ್ಗಳೆ ಎಂದು ಗೊತ್ತಿದ್ದರೂ ಆಕೆಯ ವಚನಗಳೂ ಲಭ್ಯವಿರಲಿಲ್ಲ. ಈಗ ಅಂತಹ ಮಾಹಿತಿ ಇನ್ನೂ ಹೆಚ್ಚು ಲಭ್ಯವಿರುವುದರಿಂದ ದೇವರದಾಸಿಮಯ್ಯ, ಜೇಡರದಾಸಿಮಯ್ಯ ಇಬ್ಬರೂ ಭಿನ್ನ ಎಂಬುದು ಈಗ ಎಲ್ಲರೂ ಒಪ್ಪಲೇ ಬೇಕಾದ ಸಂಗತಿ"[೨೬] ಎಂದು ಹೇಳಿ ಎಚ್. ದೇವಿರಪ್ಪ ಮೊದಲಾದವರನ್ನು ಇಲ್ಲಿ ಅನುಸರಿಸಿದ್ದಾರೆ.

ತವನಿಧಿಯನ್ನು, ಮುದನೂರನ್ನು ಭಾಷಾ ವಿಜ್ಞಾನದ ಹಿನ್ನೆಲೆಯಲ್ಲಿಯೂ ಹಾಗೂ ಭೂ ವೈಜ್ಞಾನಿಕ ಆಧಾರಗಳ ಮೇಲೆ ಅನುಲಕ್ಷಿಸಿ ಹಲವು ಲೇಖಕರ ಅಭಿಪ್ರಾಯಗಳನ್ನು ಇಲ್ಲಿ ಮಂಡಿಸಿದ್ದಾರೆ. ಜೇಡರದಾಸಿಮಯ್ಯನ ವಚನಗಳ ಕಾವ್ಯ ಮೌಲ್ಯಗಳನ್ನು ಅದರಲ್ಲಿನ ವೈಯಕ್ತಿಕ ವಿವರಗಳನ್ನು ವಿಶ್ಲೇಷಿಸಿದ್ದಾರೆ. ಅಂತೆಯೆ ದಾಸಿಮಯ್ಯ ಹೆಸರಿನ ಮತ್ತೋರ್ವ ಶರಣ ವೀರಶಂಕರದಾಸಿಮಯ್ಯ[೨೭]ನನ್ನು ಕುರಿತು ಲೇಖಕರು ಚರ್ಚಿಸಿದ್ದಾರೆ. ಅಷ್ಟೆ ಅಲ್ಲದೆ ವ್ಯಕ್ತಿ ನಾಮ ನಿಷ್ಪತ್ತಿಯಲ್ಲಿ[೨೮] ಸುಗ್ಗಲೆ, ಜೇಡರದಾಸಿಮಯ್ಯ ಮೊದಲಾದ ಹೆಸರುಗಳನ್ನು ಚರ್ಚಿಸಿದ್ದಾರೆ.

ಒಟ್ಟಾರೆಯಾಗಿ ಜೇಡರದಾಸಿಮಯ್ಯ, ದೇವರದಾಸಿಮಯ್ಯ ಭಿನ್ನರು ಎಂದು ನಿರೂಪಿಸುವಲ್ಲಿ ನಿಖರವಾದ, ಸ್ಪಷ್ಟ ದಾಖಲೆಗಳನ್ನು ನೀಡಿದ್ದಾರೆ.

**ಮೃತ್ಯುಂಜಯ ರುಮಾಲೆಯವರ** ಕೃತಿ **'ಜೇಡರದಾಸಿಮಯ್ಯ'** ಈ ಕೃತಿಯು ಮೂರು ಭಾಗಗಳನ್ನು ಹೊಂದಿದೆ. ೧. ಜೇಡರದಾಸಿಮಯ್ಯ: ಅಘಟಿತ ಘಟಿತ, ವಿಪರೀತ ಚರಿತ ೨. ಜೇಡರದಾಸಿಮಯ್ಯ: ಹಿನ್ನೆಲೆ, ಪ್ರಭಾವ ೩. ಜೇಡರದಾಸಿಮಯ್ಯ: ವಚನಕಾರ, ತತ್ವ ಜ್ಞಾನಿ.

ಲೇಖಕರು ಜೇಡರದಾಸಿಮಯ್ಯ, ಶಂಕರದಾಸಿಮಯ್ಯ, ದೇವರದಾಸಿಮಯ್ಯ ಮೂವರು ಭಿನ್ನರೆಂದು ಈ ಕೃತಿಯಲ್ಲಿ ಸ್ಪಷ್ಟೀಕರಿಸಿದ್ದಾರೆ. ಅದು ಹೀಗಿದೆ; "ವೀರಶೈವ ಧಾರ್ಮಿಕ ಚರಿತ್ರೆಯಲ್ಲಿ ಮುಖ್ಯವಾಗಿ ಮೂರು ದಾಸಿಮಯ್ಯಗಳು ಬರುತ್ತಾರೆ. ದೇವರದಾಸಿಮಯ್ಯ, ಶಂಕರದಾಸಿಮಯ್ಯ, ಮತ್ತು ಜೇಡರದಾಸಿಮಯ್ಯ. ಅನುಕ್ರಮವಾಗಿ ಇವರು ದೇವಾಂಗ, ಬ್ರಾಹ್ಮಣ, ಜೇಡರ ಜಾತಿಗೆ ಸಂಬಂಧಿಸಿದವರು. ಘಟಸರ್ಪದ ಪವಾಡ, ಜಯಸಿಂಹ-ಸುಗ್ಗಲೆಯರಿಗೆ ವೀರಶೈವವನ್ನು ತೋರಿಸಿದ ಪವಾಡವನ್ನು ದೇವರದಾಸಿಮಯ್ಯ. ಶಿವನಿಂದ ಹಣೆಗಣ್ಣು ಪಡೆದು ಪವಾಡ ಮೆರೆದು, ಜೇಡರದಾಸಿಮಯ್ಯನನ್ನು ಸಂದರ್ಶಿಸಿ ಮಾರ್ಗದರ್ಶನ ಮಾಡಿದವನು ಶಂಕರದಾಸಿಮಯ್ಯ, ಪ್ರಸ್ತುತ ಜೇಡರದಾಸಿಮಯ್ಯ ವಸ್ತುದಾನ ಪವಾಡ, ತವನಿಧಿಯ ಸಂಪಾದನೆ ಪಡೆದವನು."[೨೯]

ದೇವರದಾಸಿಮಯ್ಯ ಒಬ್ಬ ವಚನಕಾರ ಎಂದು ಹೇಳಲು ಯಾವುದೇ ಆಧಾರಗಳೂ ಇಲ್ಲ. ಎಂಬ ಎಂ.ಚಿದಾನಂದಮೂರ್ತಿಯವರ ಹೇಳಿಕೆಯನ್ನೇ ಅವರು ಪ್ರಸ್ತುತಪಡಿಸಿ ವಿಶ್ಲೇಷಿಸು ತ್ತಾರೆ. ಕಾಲದ ವಿಚಾರದಲ್ಲಿಯೂ ಜೇಡರದಾಸಿಮಯ್ಯನ ಸಮಕಾಲೀನ ಶರಣರ ಕಾಲದ ಉಲ್ಲೇಖದೊಂದಿಗೆ ಆತನ ಕಾಲವನ್ನು ಕ್ರಿ.ಶ.೧೦೬೦ರಿಂದ ೧೧೬೦ ಎಂದು ತಿಳಿಸುತ್ತಾರೆ.

ಜೇಡರದಾಸಿಮಯ್ಯನ ಊರು ಮುದನೂರು ಒಂದು ಶೈವ ಧರ್ಮದ ಕೇಂದ್ರ ಅಥವಾ ಶಾಖೆ. ಅಲ್ಲಿನ ವಾತಾವರಣವನ್ನು ಕಂಡಾಗ ಎಲ್ಲ ರೀತಿಯ ಸೌಲಭ್ಯಗಳು ಇದಕ್ಕೆ ಅನುಕೂಲ ವಾಗಿಯೇ ಕಂಡುಬರುತ್ತವೆ. ದಾಸಿಮಯ್ಯನು ಇಂತಹ ಪರಿಸರದಲ್ಲಿ ಬೆಳೆದು ಸಾಮಾಜಿಕ ಕಳಕಳಿಯನ್ನು ಹೊತ್ತು ಬೆಳೆದಾತ. ಅದನ್ನೆ ತನ್ನ ಬದುಕಿನ ದಾರಿಯಾಗಿಸಿಕೊಂಡನು. ಅಂತೆಯೇ ಆತನ ವಚನಗಳಲ್ಲೂ ಇಂತಹ ಜನ ಬದುಕಿನ ಕಥನ ಅಡಗಿದೆ, ಕಳಕಳಿ ವ್ಯಕ್ತವಾಗಿದೆ ಎನ್ನು ವುದನ್ನು ಲೇಖಕರು ಕೃತಿಯಲ್ಲಿ ಸಾಂಗಗೊಳಿಸಿದ್ದಾರೆ. ಮೃತ್ಯುಂಜಯ ರುಮಾಲೆಯವರು ಈ ಕೃತಿಯಲ್ಲಿ ಕೊಡುವ ಆಧಾರಗಳು ಚರ್ಚೆಗಳು ಸತ್ಯಕ್ಕೆ ಹತ್ತಿರವಿದ್ದು, ವಾಸ್ತವವನ್ನು ಪ್ರತಿನಿಧಿಸುತ್ತವೆ ಎಂದರೆ ತಪ್ಪಾಗಲಾರದು. ಎಲ್ಲ ವಿಚಾರಗಳು ಸ್ಪಷ್ಟತೆಯಿಂದಲೂ ದೃಢತೆಯಿಂದಲೂ ಕೂಡಿವೆ.

ಇವರು ಜೇಡರದಾಸಿಮಯ್ಯನ ಬಗ್ಗೆ ನೀಡಿರುವ ಆಧಾರಗಳನ್ನು ಸಂಶೋಧನಾ ದೃಷ್ಟಿಯಿಂದ ಒಪ್ಪುವಂತಹವಾಗಿವೆ.

ಕರ್ನಾಟಕ ವಿಶ್ವವಿದ್ಯಾಲಯದ ಉಪನ್ಯಾಸ ಮಾಲಿಕೆಯಡಿ ೨೦೧೫ರಲ್ಲಿ **ಮಹೇಂದ್ರ ಜೇ.ಹರಿಹರ** ಅವರ **'ದಲಿತ ವಚನಕಾರರು;ವೈಚಾರಿಕ ಪ್ರಜ್ಞೆ'** ಕೃತಿ ಪ್ರಕಟವಾಗಿದೆ. ಈ ಕೃತಿಯಲ್ಲಿ ದುಗ್ಗಳೆಯನ್ನು ದಲಿತ ವಚನಕಾರ್ತಿ ಅಥವಾ ಶರಣೆ ಎಂದು ದಾಖಲಿಸುತ್ತಾರೆ. ಆದರೆ ದಾಸಿಮಯ್ಯನ ಪ್ರಸ್ತಾಪ ಎಲ್ಲಿಯೂ ಬರುವುದಿಲ್ಲ. ಬಸವಣ್ಣ, ಅಲ್ಲಮಪ್ರಭು, ಸಿದ್ಧರಾಮ, ಅಂಬಿಗರ ಚೌಡಯ್ಯ, ಮೊದಲಾದವರು ದಲಿತಪರ ಕಾಳಜಿ ವ್ಯಕ್ತಪಡಿಸಿದ ಶರಣರು, ಮಾದರಚನ್ನಯ್ಯ, ಸಮಗಾರ ಹರಳಯ್ಯ, ಡೋಹರ ಕಕ್ಕಯ್ಯ, ಮಾದಾರಧೂಳಯ್ಯ, ನುಲಿಯ ಚಂದಯ್ಯ ಮೊದಲಾದವರನ್ನು ದಲಿತ ಶರಣರು ಎಂದು ಕರೆದು ಅವರ ವೈಚಾರಿಕ ನಿಲುವುಗಳನ್ನು ಚರ್ಚಿಸುತ್ತಾರೆ. ಮೇಲಿನ ಎರಡೂ ವರ್ಗದ ಶರಣರ ಸಾಲಿನಲ್ಲಿ ದಾಸಿಮಯ್ಯನ ಹೆಸರು ಬಂದಿರುವುದಿಲ್ಲ. ಇದು ಕಣ್ತಪ್ಪಿನಿಂದಾದುದೋ ಅಥವಾ ದಾಸಿಮಯ್ಯ ದಲಿತ ಶರಣನಲ್ಲ ಎಂಬ ನಿಖರತೆಯೋ? ತಿಳಿಯದು. ದಾಸಿಮಯ್ಯ ಜೇಡ ಅಥವಾ ನೇಯ್ಗೆ ಕುಲದವನು. ಇಲ್ಲಿ ಶಿವದಾರ, ಜನಿವಾರವೆಂಬ ಎರಡು ಪಂಗಡಗಳಿದ್ದುದಾಗಿ ತಿಳಿದು ಬರುತ್ತದೆ. ಇದರಲ್ಲಿ ಶೈವಾಚಾರದ ಪಂಥಕ್ಕೆ ಜೇಡರದಾಸಿಮಯ್ಯ ಸೇರಿರಬೇಕು. ಇದು ನಿಜವಾದಲ್ಲಿ ದುಗ್ಗಳೆಯ ಕುಲವಾವುದು? ಎಂಬ ಪ್ರಶ್ನೆ ಸಹಜವಾದುದು. ಅಂದರೆ ಸಮಾಜ ಸುಧಾರಣೆಯ ಹಾದಿಯಲ್ಲಿಯೂ ಜೇಡರದಾಸಿಮಯ್ಯ ವಚನ ನಿರ್ಮಾಣದೊಂದಿಗೆ ಹೊಸ ಅಡಿ ಇಟ್ಟುದರಲ್ಲಿ ಮೊದಲಿಗನೆಂದೇ ಹೇಳಬಹುದು. ದಾಸ ದುಗ್ಗಳೆಯರದ್ದು ಆಯ್ಕೆಯ ವಿವಾಹ, (ಇಷ್ಟ ಸತಿಯನ್ನು ವರಿಸಿದ್ದ) ಆದರೆ ಇದು ಅಂತರ್ಜಾತಿ ವಿವಾಹವೇ? ಎಂಬುದು ಸ್ಪಷ್ಟವಾಗಬೇಕಿದೆ. ಇಬ್ಬರೂ ಶಿವಭಕ್ತರಾದ್ದರಿಂದ ಅವರ ಕುಲಗಳು ಪ್ರಧಾನವೆನಿಸಲಿಲ್ಲವೇ? ಎಂಬೆಲ್ಲಾ ಪ್ರಶ್ನೆಗಳು ಮೂಡುತ್ತವೆ.

**ಬಿ. ವಿ. ವಸಂತಕುಮಾರ್ ಅವರ ಕೃತಿ 'ದೇವರದಾಸಿಮಯ್ಯ ಜೇಡರದಾಸಿಮಯ್ಯ ಬೇರೆ ಬೇರೆಯಲ್ಲ'** ೨೦೧೫ ರಲ್ಲಿ ಪ್ರಕಟಗೊಂಡಿದ್ದು, ಈ ಕೃತಿಯು ಎಂ. ಚಿದಾನಂದಮೂರ್ತಿಯವರ **'ದೇವರದಾಸಿಮಯ್ಯ, ಶಂಕರದಾಸಿಮಯ್ಯ, ಜೇಡರದಾಸಿಮಯ್ಯ ಕೃತಿಗೆ'** ಪ್ರತಿಕ್ರಿಯೆ ನೀಡಿದಂತಿದೆ. ಲೇಖಕರು ಅದನ್ನು ಹೀಗೆ ತಮ್ಮ ಮುನ್ನುಡಿಯಲ್ಲಿ ಬರೆದುಕೊಂಡಿದ್ದಾರೆ. "ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವಿಯ ಕ್ರಿ. ಶ. ೧೦೩೬ರ ಶಾಸನದಲ್ಲಿ ಲಕುಳೀಶ್ವರನೆಂಬ ಗುರು ಕಂಡು ಬರುತ್ತಾನೆ. ಈತ ಜಯಸಿಂಹನ ಆಸ್ಥಾನದಲ್ಲಿ ಜೈನ ವಿದ್ವಾಂಸರನ್ನು ಸೋಲಿಸಿದ್ದಾನೆ. ಈ ಮುದನೂರು

ಮಲೆಯಾಳ ಪಂಡಿತನಿಗೆ ಗುರುವಾಗಿದ್ದಿರಬೇಕೆಂದು ಡಾ.ಎಂ.ಎಂ.ಕಲಬುರ್ಗಿಯವರು ಊಹಿಸಿದ್ದಾರೆ"[೩೦] ಎಂದು ಕಲಬುರ್ಗಿಯವರ ಉಲ್ಲೇಖವನ್ನು ಒಂದೆಡೆ ನೀಡುತ್ತಾರೆ.

ಮುಂದುವರೆದು ಹೇಳುತ್ತಾರೆ, "ಮುದನೂರಿನಲ್ಲಿದ್ದ ದಾಸಿಮಯ್ಯ ವೃತ್ತಿಯಿಂದ ಜೇಡನಾಗಿದ್ದು, ರಾಮನಾಥನ ಭಕ್ತನಾಗಿದ್ದ, ಸುಗ್ಗಲೆಗೆ ಗುರುವಾಗಿದ್ದ. ಜಯಸಿಂಹನ ಆಸ್ಥಾನದಲ್ಲಿ ಜೈನ ಪಂಡಿತರನ್ನು ಗೆದ್ದು, ಘಟಸರ್ಪ ಪವಾಡವನ್ನು ಮೆರೆದು ಉತ್ತರೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಿ 'ಉತ್ತರ ಕೊಡುವುದಕ್ಕೆ' ಪ್ರಸಿದ್ಧನಾಗಿದ್ದ. ದುಗ್ಗಳೆಯ ತಂದು ಬದುಕಿದನೆಂದು ಸಾರಿದ ಆದರ್ಶ ಪತಿಯಾಗಿದ್ದ. ಮುದನೂರಿಗೆ ಬಂದ ಶಂಕರದಾಸಿಮಯ್ಯನಿಗೆ ಧಾನ್ಯ ಕಳುಹಿಸಿ ಕೋಪಕ್ಕೆ ಗುರಿಯಾಗಿ ಶಿವನಿಂದ ಪಡೆದ ತವನಿಧಿಯನ್ನು ಕಳೆದುಕೊಂಡು ಮತ್ತೆ ಪಡೆದು ಮಾಗಿ ಮತ್ತಷ್ಟು ಪ್ರಜ್ವಲಿಸಿದನು. ಈತನ ವಚನಗಳಲ್ಲಿಯೇ ಸೌರಾಷ್ಟ್ರದ ಸೋಮನಾಥನ ಭಕ್ತ ಅಲ್ಲಿಯ ರಾಜ ಓಹಿಲಯ್ಯ; ಬಂಗಾಳ ಬಿಹಾರ ಭಾಗದಲ್ಲಿದ್ದ ಘೂರ್ಜರ ಪ್ರತಿಹಾರರ ರಾಜನಾಗಿದ್ದ ಉದ್ಭಟಯ್ಯ(ತ್ರಿಲೋಚನಪಾಲ) ಕರಿಕಾಲ ಚೋಳನ ಆಸ್ಥಾನದಲ್ಲಿ ಕುದುರೆಗಳಿಗೆ ಹುಲ್ಲು ತಂದು ಹಾಕುವ ಕಾಯಕದಲ್ಲಿದ್ದ ಮಾದರ ಚೆನ್ನಯ್ಯರ ಉಲ್ಲೇಖವೂ ಬರುತ್ತದೆ. ಕವಿಚರಿತಕಾರರಿಂದ ಹಿಡಿದು ಡಿ. ಎಲ್. ನರಸಿಂಹಾಚಾರ್, ರಂ. ಶ್ರೀ. ಮುಗಳಿ, ಡಾ. ಎಚ್. ತಿಪ್ಪೇರುದ್ರಸ್ವಾಮಿ, ಎಲ್. ಬಸವರಾಜರವರೆಗೆ ದೇವರದಾಸಿಮಯ್ಯ ಜೇಡರದಾಸಿಮಯ್ಯ ಬೇರೆ ಬೇರೆಯಲ್ಲವೆಂದು ಬಹುತೇಕರು ನಿರ್ಧರಿಸಿದ್ದರು. ಅದೊಂದು ದೊಡ್ಡ ಭಿನ್ನಾಭಿಪ್ರಾಯದ ಪ್ರತಿಭಟನೆಯ ವಿಷಯವಾಗಿರಲಿಲ್ಲ"[೩೧] ಎಂದು ಹೇಳುತ್ತಾ ಕ್ರಿ.ಶ.೨೦೦೫ರಲ್ಲಿ ನಡೆದ ಪ್ರತಿಭಟನೆಯ ಘಟನೆಯನ್ನು ಉಲ್ಲೇಖಿಸುತ್ತಾರೆ.

ಮುಂದುವರೆದು ಕಾಳಾಮುಖರ ಕಾಲದಲ್ಲಿ ದೇವರದಾಸಿಮಯ್ಯ ವಚನಗಳನ್ನು ರಚಿಸಿದ್ದು 'ಸೂಳ್ನುಡಿ'ಯ ಕಾಲವಾಗಿದೆ. ಅದೂ ಜಯಸಿಂಹ ಹಾಗೂ ಸುಗ್ಗಲೆಯರ ಕಾಲ ಅಂದರೆ ಬಳ್ಳಿಗಾವಿ ಲಕುಳೀಶ್ವರನ ಕಾಲ. ಹಾಗಾಗಿ ದೇವರದಾಸಿಮಯ್ಯ-ಜೇಡರದಾಸಿಮಯ್ಯ ಒಬ್ಬನೇ ಎಂಬ ವಾದವನ್ನು ಮಂಡಿಸುತ್ತಾರೆ. ಲೇಖಕರು ಸತ್ಯವನ್ನು ಸಾಧಿಸುವ ಭರದಲ್ಲಿ ಮತ್ತಷ್ಟು ಗೊಂದಲಗಳನ್ನು ಸೃಷ್ಟಿಸಿದ್ದಾರೆ.

- ಇಲ್ಲಿ ಡಾ. ಎಂ. ಎಂ. ಕಲಬುರ್ಗಿಯವರು ಪ್ರತಿಪಾದಿಸಿದ ಲಕುಲಿಶ್ವರನೇ ಈ ದೇವರ ಅಥವಾ ಜೇಡರದಾಸಿಮಯ್ಯ ಎಂಬುದು ಲೇಖಕರ ಅಭಿಪ್ರಾಯ. ಎಂ.ಎಂ.ಕಲಬುರ್ಗಿ ಯುವರು ಸ್ಪಷ್ಟವಾಗಿ ತಮ್ಮ ಲೇಖನದಲ್ಲಿ[೩೨] ಮುದನೂರನ್ನು ಶೈವ ಶಾಖಾ ಕೇಂದ್ರ ಎಂದು ವಿವರಿಸಿದ್ದಾರೆ. ಮತ್ತು ಹಲವು ಲೇಖನಗಳಲ್ಲಿ ಜೇಡರದಾಸಿಮಯ್ಯ, ದೇವರ ದಾಸಿಮಯ್ಯರ ಕುರಿತು ಹೇಳಿದ್ದಾರೆ. ಅಂದ ಮೇಲೆ ಈ ಎಲ್ಲವನ್ನು ವಿವರಿಸಿದ ಅವರು

ಇಲ್ಲಿ ಜೇಡರದಾಸಿಮಯ್ಯನೇ ಬೇರೆ, ದೇವರದಾಸಿಮಯ್ಯನೇ ಬೇರೆ ಎಂದೇ ಪ್ರತಿಪಾದಿಸುತ್ತಾರೆ. ಎಂ.ಎಂ.ಕಲಬುರ್ಗಿಯವರು ಶೈವ ಸನ್ಯಾಸಿ ಎಂದು ಕರೆದದ್ದು ಬಹುಶಃ ದೇವರ ದಾಸಿಮಯ್ಯನ್ನಿರಬೇಕು. ಈತ ಲೋಕಸಂಚಾರ ಮಾಡುತ್ತಾ ಶಿವಸೇವೆಗೆ ತೊಡಗಿದಾತನಿರ ಬಹುದು. ವೀರಶೈವಕ್ಕೂ ಮೊದಲಿನ ಶೈವ ಪಾಶುಪತ ಪಂಥದ ಕಾಲಘಟ್ಟದಲ್ಲಿಯೇ ಇದ್ದಾತ ಎಂದು ಕಾಲವನ್ನು ಅವರು ತಮ್ಮ ಲೇಖನಗಳಲ್ಲಿ ಸ್ಪಷ್ಟಪಡಿಸುತ್ತಾರೆ. ಮುದನೂರನ್ನು ಶೈವದಿಂದ ವೀರಶೈವಕ್ಕೆ ಸಂಕ್ರಮಣ ಹೊಂದಿದ ಧರ್ಮ ಕೇಂದ್ರವಾಗಿ ಇವರು ಗುರುತಿಸುತ್ತಾರೆ. ಈ ಇಬ್ಬರು ಶರಣರು ಮುದನೂರು ಮತ್ತು ಮುದನೂರಿನ ಸಮೀಪದ ದೇವನೂರಿಗೆ ಸಂಬಂಧಿಸಿದವರು ಎಂದು ಅವರೇ ತಿಳಿಸುತ್ತಾರೆ. ಲೇಖಕರು ಹೇಳಿರುವ ಆ ಲಕುಳೀಶ ಗುರು ದೇವರದಾಸಿಮಯ್ಯನಾಗಿರುವ ಸಾಧ್ಯತೆ ಇರಬಹುದು ಆದರೆ ಆತನು ಜೇಡರ ದಾಸಿಮಯ್ಯನೇ, ಅಲ್ಲವೇ ಎನ್ನುವುದನ್ನು ಇನ್ನಷ್ಟು ಸಂಶೋಧನೆಗಳ ಮೂಲಕ ತಿಳಿಯಬೇಕಾಗಿದೆ.

- ಈ ಕೃತಿಯಲ್ಲಿ ದೇವರದಾಸಿಮಯ್ಯ ಹಾಗೂ ಜೇಡರದಾಸಿಮಯ್ಯ ಒಂದೆಯೇ? ಅಥವಾ ಬೇರೆ ಬೇರೆಯೇ ಎಂಬ ವಾದಗಳನ್ನು 'ದೇವರದಾಸಿಮಯ್ಯನೇ ಬೇರೆ ಎಂಬುದು ನಿಜವೇ?' ಎಂಬ ಶೀರ್ಷಿಕೆಯಡಿ ಚರ್ಚಿಸಿದ್ದಾರೆ. ಇವರು ಹೆಚ್ಚಿನದಾಗಿ ದೇವರದಾಸಿಮಯ್ಯ ಹಾಗೂ ಜೇಡರದಾಸಿಮಯ್ಯ ಇಬ್ಬರೂ ಒಂದೇ ಎಂಬ ವಾದವನ್ನು ಒಪ್ಪಿ ಅದನ್ನೇ ಸಾಧಿಸಿದ್ದಾರೆ. ಅದಕ್ಕೆ ಹಲವು ವಿದ್ವಾಂಸರ ವಾದಗಳನ್ನು ಬಳಸಿಕೊಂಡಿದ್ದಾರೆ.
- "ಹರಿಹರನ ಪ್ರಕಾರ ಜೇಡರದಾಸಿಮಯ್ಯ ದುಗ್ಗಳೆಯರು ಶಂಕರದಾಸಿಮಯ್ಯನನ್ನು ಭೇಟಿ ಮಾಡಿದಾಗ ಕಲ್ಯಾಣದಲ್ಲಿ ರಾಜನಾಗಿದ್ದವನು ಜಯಸಿಂಹ. ಅವನು ಇಮ್ಮಡಿ ಜಯಸಿಂಹನೇ ಏಕಾಗಿರಬಾರದು?"[೩೩] ಎಂಬ ಪ್ರಶ್ನೆಯನ್ನು ಹಾಕುತ್ತಾರೆ. ಆದರೆ ಸ್ಪಷ್ಟತೆ ನೀಡದೆ ಉತ್ತರ ಹುಡುಕಬೇಕಾಗಿದೆ ಎಂದು ಹೇಳಿ ಮುಂದಿನ ಸಂಶೋಧನೆಗೆ ಬಿಡುತ್ತಾರೆ. ಇವರು ಎತ್ತಿರುವುದು ಕೇವಲ ಊಹಾತ್ಮಕವಾದ ಪ್ರಶ್ನೆಗಳಾಗಿದ್ದು, ಇದರಿಂದ 'ದಾಸಿಮಯ್ಯ' ಹೆಸರಿನ ಸುತ್ತಲಿರುವ ಸಮಸ್ಯೆ ಬಗೆ ಹರಿಯುವುದಿಲ್ಲ. ಇವರೇ ಹೇಳಿರುವಂತೆ ಜಯಸಿಂಹ, ಇಮ್ಮಡಿ ಜಯಸಿಂಹನೇಯಾಕಾಗಿರಬೇಕು ಎಂಬ ಮರು ಪ್ರಶ್ನೆ ಹುಟ್ಟುತ್ತದೆಯಷ್ಟೆ.
- "ಬಸವಣ್ಣನವರೇ ವಚನಕಾರ ದಾಸಿಮಯ್ಯನನ್ನು ಜೇಡರದಾಸಿಮಯ್ಯ ಹಾಗೂ ದಾಸಿದೇವ ಎಂದು ಎರಡೂ ರೂಪಗಳಲ್ಲಿ ಕರೆದಿದ್ದಾರೆ. ಪಾಲ್ಕುರಿಕೆ ಸೋಮನಾಥನ ಎರಡೂ ಕಥಾ ಪ್ರಸಂಗಗಳಲ್ಲಿ ದಾಸಿಮಯ್ಯನಿಗೆ ಜೇಡರದಾಸಿಮಯ್ಯ, ದಾಸಿದೇವ, ದಾಸಿಮಯ್ಯ ಅರ್ಥಾತ್ ಜೇಡರ ದಾಸಿಮಯ್ಯ ಮುಂದೆ ಭೀಮಕವಿಯ ಕೃತಿಯಲ್ಲಿ ದೇವರದಾಸಿಮಯ್ಯನೆಂದು

ಪರಿಗಣಿತನಾಗಿದ್ದಾನೆ ಎಂಬುದು ನಿಜವಾಗಿರುವಾಗ ಜೇಡರದಾಸಿಮಯ್ಯ ದೇವರದಾಸಿಮಯ್ಯ ಹೇಗೆ ಬೇರೆ ಬೇರೆಯಾಗುತ್ತಾರೆ?"[೩೪] ಎಂಬುದು ಲೇಖಕರ ಅಭಿಪ್ರಾಯ.

ಪಾಲ್ಕುರಿಕೆ ಸೋಮನಾಥನ ಬಸವ ಪುರಾಣದಲ್ಲಿ ಶಂಕರದಾಸಿಮಯ್ಯನೊಂದಿಗಿನ ಕಥಾ ಸಂದರ್ಭದಲ್ಲಿ ಜೇಡರದಾಸಿಮಯ್ಯನೆಂತಲೂ, ಪೊಟ್ಲಚೆರುವಿನ ಸಂದರ್ಭದಲ್ಲಿ ದೇವರ ದಾಸಿಮಯ್ಯ ನೆಂತಲೂ ಬಂದಿದ್ದು, ಈ ಸಂದರ್ಭದ ದೇಡರ ವಿಶೇಷಣವು ದೇವರ ಎಂದಾಗಿದೆ. ಇಲ್ಲಿ ಕಥಾ ಭಾಗಗಳು ಬೇರೆ ಸನ್ನಿವೇಶಗಳು ಬೇರೆ. ಸೋಮನಾಥನು ಬಸವಪುರಾಣ ಬರೆದುದರ ಬಗೆ ಬಸವ ಪಥದ ಒಂದು ಲೇಖನದಲ್ಲಿ ಡಾ.ಎಸ್.ವಿದ್ಯಾಶಂಕರ ಅವರು ಹೀಗೆ ದಾಖಲಿಸಿದ್ದಾರೆ.

"ಕರ್ನಾಟಕದ ಗೊಬ್ಬೂರೆಂಬ ಅಗ್ರಹಾರದಲ್ಲಿ ಮುಂಡಗೆಯ ಮಾದಿರಾಜನೆಂಬ ಓರ್ವ ಶರಣನಿದ್ದನು. ಗೊಬ್ಬೂರಿನ ವಿಭುವಾದ ಸಂಗಮಾತ್ಯನು ಈತನ ಶಿಷ್ಯನು. ಸೋಮನಾಥನು ಬಸವಪುರಾಣವನ್ನು ಗೊಬ್ಬೂರು ವಿಭುವಾದ ಸಂಗಮಾತ್ಯನಿಗೆ ಹೇಳಿದಂತೆ 'ಬಸವ ಪುರಾಣಮು'ವಿನ ಪ್ರಾರಂಭದ ಭಾಗದಿಂದ ತಿಳಿದು ಬರುತ್ತದೆ. ಬಸವ ಪುರಾಣದ ಶೋತ್ರುವಾದ ಈತನನ್ನು ಸೋಮನಾಥ ಪ್ರತಿ ಆಶ್ವಾಸದ ಕೊನೆಯಲ್ಲಿ ಸ್ತುತಿಸಿರುವನು."[೩೫]

ಪಸರಿಪ ಜಂಗಮ ಭಕ್ತುಂಡನಿಯು
ಬಸವ ಪುರಾಣೈಕ ಪಾಸ್ರುಂಡವನಿಯು
ಆಚಲಿತ ಪ್ರೀತಿ ಮಾತನುಕುಲಂಬಿನಿಯು
ರಚಿಯಂತು ಬಸವಪುರಾಣ ಸತ್ಯವಿತ
ಆವದಾನವಂತುಂಡ್ಯೆವ ನೆಮ್ಮಿವಿನುಮು
ಸವಿಶೇಷ ಭಕ್ತಿ ಮ್ಯೆ ಸಂಗಮಾತ್ಯ.[೩೬]

ಎಸ್.ವಿದ್ಯಾಶಂಕರ ಅವರ ಈ ಉಲ್ಲೇಖವು ಪ್ರಬಲವಾದ ಆಧಾರವನ್ನು ಒದಗಿಸುತ್ತದೆ. ಪಾಲ್ಕುರಿಕೆ ಸೋಮನಾಥನು ಗೊಬ್ಬೂರನ್ನು ಕಂಡವನಾಗಿದ್ದನು ಎಂಬುದು ಇಲ್ಲಿ ಸ್ಪಷ್ಟ. ಇದು ಯಾವ ಗೊಬ್ಬೂರು ಎಂಬುದು ಸ್ಪಷ್ಟವಾದರೆ ಇನ್ನಷ್ಟು ಸತ್ಯಕ್ಕೆ ಹತ್ತಿರವಾಗುವ ಸಾಧ್ಯತೆ ಇದೆ. ಸೋಮನಾಥನು ಈ ಇಬ್ಬರೂ ಶರಣರಂತೆ ಆಂಧ್ರ, ಕರ್ನಾಟಕಗಳ ಸಂಬಂಧವನ್ನು ಹೊಂದಿದ್ದ. ಆದ್ದರಿಂದ ಸ್ಪಷ್ಟ ಭಿನ್ನತೆಯನ್ನು ನಮೂದಿಸಿದ್ದನೆಂದೂ ಇಲ್ಲಿ ಗ್ರಹಿಸಬಹುದು. ಹಾಗಾಗಿ ಸ್ಪಷ್ಟತೆಯಿಲ್ಲದ ಬಿ. ವಿ. ವಸಂತಕುಮಾರ್ ಅವರ ವಾದವನ್ನು ಒಪ್ಪುವುದು ಕಷ್ಟದ ಸಂಗತಿ. ಇಲ್ಲಿ ಸಾಧಿಸಿರುವ ವಿಷಯಗಳೆಲ್ಲವೂ ಜೇಡರದಾಸಿಮಯ್ಯ ದೇವರದಾಸಿಮಯ್ಯನನ್ನು ಒತ್ತಾಯ ಪೂರ್ವಕವಾಗಿ ಒಂದುಗೂಡಿಸಿ ಒಂದೇ ಎಂದು ಸಾಧಿಸಿದಂತಿವೆ. ಅದೇನೇ ಇದ್ದರು ಈ

ಕೃತಿಯು ಈ ಇಬ್ಬರು ಶರಣರ ಬಗ್ಗೆ ಮಹತ್ವದ ಮಾಹಿತಿಯನ್ನು ಒದಗಿಸುವಲ್ಲಿ ಸಹಾಯವಾಗಿದೆ ಎಂದು ಹೇಳಬಹುದು.

### ೨.೩. ಲೇಖನಗಳು

ಅಧ್ಯಯನದ ವಿಷಯಕ್ಕೆ ಪೂರಕವೆನಿಸಿದ ಲೇಖನಗಳನ್ನು ಇಲ್ಲಿ ಚರ್ಚಿಸಲಾಗಿದೆ. ಬಿಡಿ ಲೇಖನಗಳು ಹಾಗೂ ಅವಶ್ಯವೆನಿಸಿದಲ್ಲಿ ಒಂದು ಕೃತಿಯಲ್ಲಿನ ಹಲವು ಲೇಖನಗಳನ್ನು ಇದೇ ಭಾಗದಲ್ಲಿ ತರಲಾಗಿದೆ. ಉದಾಹರಣೆಗೆ ಮಾರ್ಗ ಸಂಪುಟದ ಲೇಖನಗಳು, ದಾಸಿಮಾರ್ಯ ಪ್ರಶಸ್ತಿಯ ಲೇಖನಗಳು ಮೊದಲಾದುವು. ಇಲ್ಲಿಯೂ ಸಹ ಎರಡು ಹಂತದ ಚರ್ಚೆ ನಡೆಸಲಾಗಿದೆ. ಮೊದಲು ಲೇಖನ ಹಾಗೂ ಲೇಖನದಲ್ಲಿ ಚರ್ಚಿತವಾದ ವಿಷಯ, ವಿಮರ್ಶಕ ಅಭಿಮತಗಳಿದ್ದಲ್ಲಿ ಅವರುಗಳ ಚರ್ಚೆಗಳು ಹಾಗೂ ಲೇಖಕರ ನಿಲುವುಗಳನ್ನು ಗಣನೆಗೆ ತೆಗೆದುಕೊಂಡು ಅವುಗಳಿಗೆ ಬಂದಂತಹ ಪ್ರಕ್ರಿಯೆಗಳನ್ನೂ ಇಲ್ಲಿ ಚರ್ಚಿಸಲಾಗಿದೆ.

ಲೇಖನಗಳ ಭಾಗದಲ್ಲಿ ಮೊದಲು ಗುರುತಿಸಬೇಕಾದ ಲೇಖನಗಳು ಫ. ಗು. ಹಳಕಟ್ಟಿಯವರ ಸಮಗ್ರ ಸಂಪುಟದ ಲೇಖನಗಳು ಅದಕ್ಕೂ ಮೊದಲು ಕವಿಚರಿತೆ ಸಂಪುಟದಲ್ಲಿನ ದಾಖಲೆ. ಇಲ್ಲಿ ಜೇಡರದಾಸಿಮಯ್ಯನೇ ದೇವರದಾಸಿಮಯ್ಯ ಎಂದು ವ್ಯಕ್ತಗೊಂಡಿದೆ. ದೇವರದಾಸಿಮಯ್ಯನ ಜೀವನದ ಘಟನೆಗಳನ್ನು ವಿವರಿಸಿ ಜೇಡರದಾಸಿಮಯ್ಯನ ವಚನಗಳನ್ನು ನೀಡಲಾಗಿದೆ. ಆರ್.ನರಸಿಂಹಾಚಾರ್ ಅವರ ಕಾಲಕ್ಕೆ ಇಂತಹ ಒಬ್ಬ ವ್ಯಕ್ತಿಯ ದಾಖಲೆಯೇ ಪ್ರಮುಖವಾಗಿದ್ದು, ಅಂದಿನ ಶೋಧದ ಫಲಿತವನ್ನು ನೀಡುತ್ತಾರೆ. ಜೇಡರದಾಸಿಮಯ್ಯನ ಉಪಲಬ್ಧ ವಚನಗಳು ೧೮೯ ಎಂದು ಗುರುತಿಸುತ್ತಾರೆ. ಆದರೆ ತದನಂತರದ ಸಂಶೋಧನೆ ಇದಕ್ಕಿಂತಲೂ ಅಧಿಕವೆಂದು ಸಾಬೀತುಪಡಿಸುತ್ತದೆ.

ಫ. ಗು. ಹಳಕಟ್ಟಿಯವರು ತಮ್ಮ ಪತ್ರಿಕೆಯಲ್ಲಿ ಜೇಡರದಾಸಿಮಯ್ಯನ ವಚನಗಳನ್ನು ಸಂಪಾದಿಸಿ ಪ್ರಕಟಿಸಿರುವುದು ಪ್ರಮುಖವಾಗಿ ಕಂಡು ಬರುತ್ತದೆ. ಇವರು ಸಹ ಜೇಡರದಾಸಿಮಯ್ಯನ ವಚನಗಳನ್ನು ದೇವರದಾಸಿಮಯ್ಯನ ವಚನಗಳು ಎಂದೇ ಪ್ರಕಟಿಸಿರುವುದನ್ನು ಕಾಣುತ್ತೇವೆ. ಶರಣರ ಚರಿತ್ರೆ ಭಾಗದಲ್ಲಿಯೂ ದೇವರದಾಸಿಮಯ್ಯನ ಚರಿತ್ರೆಯನ್ನು ಪ್ರಕಟಿಸಿದ್ದಾರೆ. ಆರ್.ನರಸಿಂಹಾಚಾರ್ ಅವರಿಗಿಂತಲೂ ಹೆಚ್ಚಿನ ವಚನಗಳನ್ನು ಇವರು ಪ್ರಕಟಿಸಿದ್ದು, ಹೊಸ ಅನ್ವೇಷಣೆ ಎನಿಸಿದೆ. ನಂತರದ ಸಂಪಾದಕರು ಜೇಡರದಾಸಿಮಯ್ಯನ ವಚನಗಳೆಂದೇ ಸಂಪಾದಿಸಿ ದ್ದಾರೆ. ಉದಾಹರಣೆಗೆ ಎಚ್. ದೇವಿರಪ್ಪ, ಆರ್. ರಾಜಪ್ಪ ಅವರ 'ಜೇಡರದಾಸಿಮಯ್ಯನ ವಚನಗಳು' ಸಂಕೀರ್ಣ ವಚನ ಸಂಪುಟಗಳಲ್ಲಿ ಬಂದಿದೆ. ಇದಕ್ಕೆ ವ್ಯತಿರಿಕ್ತವೆಂಬಂತೆ ಎಲ್.

ಬಸವರಾಜು ಅವರ 'ದೇವರದಾಸಿಮಯ್ಯನ ವಚನಗಳು' ಕೃತಿ ಹೊರಬಂದಿದೆ. ಜೇಡರದಾಸಿಮಯ್ಯ ಅಥವಾ ದೇವರದಾಸಿಮಯ್ಯನ ಕುರಿತ ಒಂದು ಮಟ್ಟದ ಸಂಪೂರ್ಣವೆಂಬಂತೆ ಆಕರಗಳು ನಮಗೆ ದೊರೆಯುವುದು ದೇವರದಾಸಿಮಾರ್ಯ ಪ್ರಶಸ್ತಿಯಲ್ಲಿ. ಇಲ್ಲಿ ಪ್ರಕಟಗೊಂಡ ದಾಸಿಮಯ್ಯನ ಕುರಿತ ಲೇಖನಗಳನ್ನು ಈ ಕೆಳಗಿನಂತೆ ಗಮನಿಸಲಾಗಿದೆ.

**ಜ.ಚ.ನಿಯವರು 'ದೇವರದಾಸಿಮಯ್ಯ'** ಎಂಬ ಶೀರ್ಷಿಕೆಯಡಿಯಲ್ಲಿ ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ ಈ ಇಬ್ಬರ ಚರಿತ್ರೆಯನ್ನು ಸಂದರ್ಭಕ್ಕೆ ತಕ್ಕಂತೆ ಒಗ್ಗಿಸಿಕೊಂಡು ಇಬ್ಬರೂ ಒಂದೇ ಎಂಬಂತೆ ನಿರೂಪಿಸಿದ್ದಾರೆ. ಇವರು ಬರೆದಿರುವ ದೇವರದಾಸಿಮಯ್ಯನ ಚರಿತ್ರೆಯಲ್ಲಿ ಜೇಡರದಾಸಿಮಯ್ಯನ ತವನಿಧಿ ಪವಾಡವನ್ನು ಮತ್ತು ಆತನ ವಚನಗಳನ್ನು ಸೇರಿಸಿದ್ದಾರೆ. ಇದೇ ಭಾಗದಲ್ಲಿ ಜೇಡರದಾಸಿಮಯ್ಯನ ರಗಳೆ ಎಂಬ ರಗಳೆಯೂ ಅಚ್ಚಾಗಿದೆ. ಜ.ಚ.ನಿ.ಯವರು ದೇವರದಾಸಿಮಯ್ಯನ ಕಾಲವಿಚಾರವನ್ನು ಚರ್ಚಿಸುವಾಗ ಹೀಗೆ ಸಮರ್ಥಿಸುತ್ತಾರೆ.

"ಜಯಸಿಂಹ ಚಾಲುಕ್ಯರಾಜ. ಪೊಟಲಕೆರೆ ಅವನ ರಾಜಧಾನಿ. ಸುಗ್ಗಳೆ ಅವನ ರಾಣಿ. ಕ್ರಿ.ಶ.೧೦೦೮ ರಿಂದ ೧೦೪೦ರವರೆಗಿನ ಕಾಲದಲ್ಲಿ ಅವನು ರಾಜ್ಯಭಾರ ಮಾಡಿದಂತೆ ಡಾ. ಫ್ಲೀಟ್ ಸಾಹೇಬರು ಒಪ್ಪಿದ್ದಾರೆ. ಸುಗ್ಗಳೆಯು ದಾಸಿಮಯ್ಯನ ಶಿಷ್ಯಳಾಗಿದ್ದಳೆಂಬುದನ್ನು ಎಲ್ಲ ಕವಿಗಳು ಒಪ್ಪಿಕೊಂಡಿರುವುದರಿಂದ ದಾಸಿಮಯ್ಯನ ಕಾಲವೂ ಕ್ರಿ. ಶ. ೧೦೦೮ ರಿಂದ ೧೦೪೦ ಎಂದೇ ಹೇಳಬೇಕು. ಪಿ. ಜಿ. ಹಳಕಟ್ಟಿಯವರು, ಶ್ರೀ ವೇ. ಮೂ. ಬದ್ದಯ್ಯ ಸ್ವಾಮಿ ಪುರಾಣಿಕ ಅವರು ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರು ಸಹ ಅದೇ ಕಾಲವನ್ನು ಒಪ್ಪಿ ಲೇಖನಗಳನ್ನು ಬರೆದಿದ್ದಾರೆ. ಸು ಕ್ರಿ. ಶ. ೧೧೨೫ ರಲ್ಲಿದ್ದ ಬ್ರಹ್ಮಶಿವ ಎಂಬ ಕವಿಯು ಜೇಡರದಾಸಿಮಯ್ಯನ ಹೆಸರನ್ನು ಹೇಳುವುದರಿಂದ ಇವನು ಅವನ ಕಾಲಕ್ಕೆ ಹಿಂದೆಯೆ ಇದ್ದಿರಬೇಕು"[೩೭] ಎಂದು ಹೇಳುತ್ತಾ ಕನ್ನಡ ಕವಿಚರಿತಕಾರರು ಅದೇ ಕಾಲವನ್ನು ಒಪ್ಪಿ ಉಲ್ಲೇಖಿಸಿದ್ದಾರೆ ಎನ್ನುತ್ತಾರೆ. ಅಲ್ಲದೆ ದೇವರ ದಾಸಿಮಯ್ಯನ ಗುರುಗಳಾದ ಶ್ರೀ ಜಗದ್ಗುರು ಚಂದ್ರಗೊಂಡ ಶಿವಚಾರ್ಯರು ಸಹ ೧೦೦೦ ರಿಂದ ೧೦೫೦ರವರೆಗಿನ ಕಾಲದಲ್ಲಿ ಇದ್ದರೆಂಬುದಕ್ಕೆ ಜಗದ್ಗುರು ನಿಡುಮಾಮಿಡಿ ಶ್ರೀಶೈಲ ಸಂಸ್ಥಾನದ ಸ್ಥಳ ಪುರಾಣದಲ್ಲಿ ಹೇಳಿದ ಆ ಕಾಲದ ಚೋಳರಾಜನ ಕಥೆಯು ನಿದರ್ಶನವಾಗಿದೆ. "ಅಲ್ಲದೆ ಕ್ರಿ.ಶ. ೧೦೧೨ರಲ್ಲಿ ಈ ಪ್ರಿಯ ಶಿಷ್ಯನಾಗಿ ಪರಿಗ್ರಹಿಸಿ ಆತನ ಬ್ರಹ್ಮಹತ್ಯಾ ದೋಷವನ್ನು ಕಳೆದು ಜ್ಞಾನೋಪದೇಶ ವನ್ನುಂಟು ಮಾಡಿದರು. ಎಂಬುದಾಗಿ ಶ್ರೀ ಪಂ.ನಂಜುಂಡಯ್ಯನವರು ತಾವು ಬರೆದ ಶ್ರೀಶೈಲ ಇತಿಹಾಸದಲ್ಲಿ ೧೫೭ನೇ ಪುಟದಲ್ಲಿ ಹೇಳಿದ್ದಾರೆ"[೩೮] ಎಂದು ಹೀಗೆ ಕಾಲವನ್ನು ಸಮರ್ಥಿಸುತ್ತಾರೆ.

ಇವರು ಹೇಳಿರುವುದೆಲ್ಲವೂ ಸತ್ಯವೇ ಇದ್ದು, ಈ ಎಲ್ಲ ಅಂಶಗಳು ಜೇಡರದಾಸಿಮಯ್ಯನಿಗೆ ಸಂಬಂಧಿಸಿದವಾಗಿರದೇ ದೇವರದಾಸಿಮಯ್ಯನಿಗೆ ಸಂಬಂಧಿಸಿವೆ. ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿ ಜೇಡರದಾಸಿಮಯ್ಯನ ಉಲ್ಲೇಖ ಬರುವುದು. ಇದನ್ನು ಅವರು ದೇವರದಾಸಿಮಯ್ಯನ ಕಾಲಗಣನೆಗೆ ಪರಿಗಣಿಸಿದ್ದಾರೆ. ಅವರು ರಚಿಸಿರುವ ಚರಿತ್ರೆಯು ಪುರಾಣಗಳನ್ನು ಆಧರಿಸಿದ್ದಾಗಿದ್ದು, ದುಗ್ಗಲೆಯ ಗಂಡನಾಗಿ ದೇವರದಾಸಿಮಯ್ಯನನ್ನೆ ನಿರೂಪಿಸಲಾಗಿದೆ. ಆದ್ದರಿಂದ ಈ ಲೇಖನದ ನಂತರದ ಸಂಶೋಧನೆಯನ್ನೂ ಗಮನಿಸಬೇಕಾದ ಅಗತ್ಯವಿದೆ.

ದೇವರ ದಾಸಿಮಾರ್ಯ ಪ್ರಶಸ್ತಿಯಲ್ಲಿ ಕೆಲವು ವಿದ್ವಾಂಸರ ಲೇಖನಗಳಿವೆ. ಅವುಗಳಲ್ಲಿ ದಾಸಿಮಯ್ಯನ ಕುರಿತು ಅವರುಗಳ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ. ಇಲ್ಲಿ ಎಂ. ಗೋವಿಂದ ಪೈ, ಡಿ. ಎಲ್. ನರಸಿಂಹಾಚಾರ್, ಎಂ. ಆರ್. ಶ್ರೀಕಂಠಯ್ಯ ಮುಂತಾದವರು ಲೇಖನಗಳನ್ನು ಗಮನಿಸಬಹುದಾಗಿದೆ

**ಎಂ. ಗೋವಿಂದ ಪೈ**ಯವರು ದೇವರದಾಸಿಮಾರ್ಯ ಪ್ರಶಸ್ತಿ ಭಾ-೨ರಲ್ಲಿ ಬರೆದ ಲೇಖನ **'ದೇವರ ದಾಸಿಮಯ್ಯನ ಕಾಲವಿಚಾರ'** ಈ ಲೇಖನದ ಸಾರ ಹೀಗಿದೆ.

- ಮೊದಲು ಗೋವಿಂದ ಪೈಯವರು ಶಿವಶರಣರಲ್ಲಿ ದಾಸ, ದಾಸಯ್ಯ, ದಾಸಿಮಯ್ಯ ಎಂಬ ಒಂದೇ ಹೆಸರುಳ್ಳ ವ್ಯಕ್ತಿಗಳು ಮೂವರು ಸಿಗುತ್ತಾರೆ. ಅವರು ಒಬ್ಬರೆ, ಇಬ್ಬರೆ, ಮೂವರೆ ಎಂಬ ಪ್ರಶ್ನೆಯ ಮೂಲಕ ತನ್ನ ಲೇಖನದ ನಾಯಕ ದೇವರದಾಸಿಮಯ್ಯನ ಬಗ್ಗೆ ತಿಳಿಯುವುದಾಗಿ ವಿವರಿಸುತ್ತಾರೆ.

- ಬಸವರಾಜ ವಿಜಯ, ಚನ್ನಬಸವಪುರಾಣ, ಬಸವಪುರಾಣ ಈ ಕಾವ್ಯಗಳನ್ನು ಪರಿಶೀಲಿಸಿ ಈ ಮೂರು ಕಾವ್ಯಗಳಲ್ಲಿ ಕರೆಯುವ ಜಯಸಿಂಹನ ಸಾಮಯಿಕ ದಾಸದೇವ, ದಾಸಿದೇವ ಪೊಟ್ಟಲಕೆರೆಯ ಬಗ್ಗೆಯು, ದೇಸಿಂಗನ ರಾಣಿ ಸುಗ್ಗಲೆಯ ಬಗ್ಗೆಯೂ, ಹೇಳಿರುವುದು ದೇವರದಾಸಿಮಯ್ಯನ ಬಗ್ಗೆ. ಈ ಮೂರು ಕಾವ್ಯಗಳಲ್ಲಿ ಹೊಗಳಲ್ಪಟ್ಟ ಪವಾಡಕಾರನು ದೇವರದಾಸಿಮಯ್ಯನು ಅದೊಬ್ಬನೆ[೩೯] ಎಂದು ವಿವರಿಸುತ್ತಾರೆ.

- ವೃಷಬೇಂದ್ರ ವಿಜಯದಿಂದಲೂ, ಬಸವ ಪುರಾಣದಿಂದಲೂ, ಜಗದೇಕಮಲ್ಲನೆಂಬ ಅರಸನ ಸಮಕಾಲೀನರೆಂದು ತಿಳಿವ ಶಂಕರದಾಸಿಮಯ್ಯನೂ, ಜೇಡರದಾಸಿಮಯ್ಯನೂ ಒಬ್ಬರನ್ನೊಬ್ಬರು ಕಂಡಿರುವಂತೆ ಒಳಗೊಂಡಿರುವಂತೆ ಆ ಮೂರು ಕಾವ್ಯಗಳಿಂದ ತಿಳಿಯುವುದರಿಂದ ಅವರು ಬೇರೆ ಬೇರೆ ಎರಡು ವ್ಯಕ್ತಿಗಳಲ್ಲದೆ ಸರ್ವತಾ ಒಬ್ಬನೆ ಅಲ್ಲ[೪೦] ಎಂದು ಆಧಾರ ನೀಡುತ್ತಾರೆ.

ಮುಂದುವರೆದು ವಿವರಿಸುತ್ತಾ, ಘಟ ಸರ್ಪ ಪವಾಡ, ತವನಿಧಿ ಪವಾಡಗಳ ದಾಸಿಮಯ್ಯರೂ ಬೇರೆ ಬೇರೆ ಶಂಕರದಾಸಿಮಯ್ಯನನ್ನೊಳಗೊಂಡು ಪ್ರಥಮ ದೃಷ್ಟಿಗೆ ಕಾಣುವಂತೆ ಈ

ಮೂವರು ಬೇರೆ ಬೇರೆ ಎಂದೆನಿಸುತ್ತದೆ ಎನ್ನುತ್ತಾರೆ. ನಂತರದಲ್ಲಿ ಹರಿಹರನ ಶಂಕರ ದಾಸಿಮಯ್ಯನ ರಗಳೆ, ಗಿಜಹಳ್ಳಿ ಶಾಸನ, ಬ್ರಹ್ಮಶಿವನ ಸಮಯ ಪರೀಕ್ಷೆ, ಬಸವಣ್ಣನ ವಚನಗಳು, ಗೊಬ್ಬೂರಿನ ಕೊರವರ ಬಾವಿಯ ಕಲ್ಲಿನ ಶಾಸನ, ಚಿಕ್ಕ ಮುದನೂರಿನ ಶಾಸನಗಳಲ್ಲಿ ದಾಸಿಮಯ್ಯನ ಉಲ್ಲೇಖಗಳನ್ನು ನೀಡಿ, ಹಿರಿಯೂರು ಶಾಸನದಲ್ಲಿ ಕೇವಲ ಆತನ ಹೆಸರು ದಾಸಿಮಯ್ಯ ಎಂದಿರುವುದರಿಂದ ಅದನ್ನು ತಳ್ಳಿ ಹಾಕಿ ಉಳಿದೆಲ್ಲೆಡೆಗಳಲ್ಲಿ ಬಂದಿರುವುದು ಜೇಡರ ದಾಸಿಮಯ್ಯನೇ ಎಂದು ಸ್ಪಷ್ಟಪಡಿಸುತ್ತಾರೆ. ಹೀಗೆ ಮೂರು ದಾಸಿಮಯ್ಯರಲ್ಲಿ ಗ್ರಂಥಗಳಲ್ಲೆ ಅಲ್ಲ ಶಾಸನಗಳಲ್ಲಿ ಕೂಡ ಹೆಸರಿಸಲ್ಪಟ್ಟವನೆಂದರೆ ಅದೊಬ್ಬನೆ ಜೇಡರದಾಸಿಮಯ್ಯ. ಆತ ಒಬ್ಬ ಐತಿಹಾಸಿಕ ವ್ಯಕ್ತಿಯಾಗಿರಬೇಕು. ದೇವರದಾಸಿಮಯ್ಯನನ್ನು ಹೆಸರಿಸುವ ಮೂರು ಕಾವ್ಯಗಳು ಆತನನ್ನು ಸುಗ್ಗಲೆಯ ಗಂಡನಾದ ಜಯಸಿಂಹನ ಸಮಕಾಲೀನನಾಗಿ ನೋಡಿವೆ. ಪೊಟ್ಟಲಕೆರೆಯ ಅರಸು ಜಯಸಿಂಹನಿಗೆ ಜಗದೇಕ ಮಲ್ಲನೆಂಬ ಬಿರುದಿದ್ದು ಪೊಟ್ಟಲಕೆರೆ, ಕಲ್ಯಾಣಗಳೆರಡು ಆತನ ರಾಜಧಾನಿಗಳಾಗಿದ್ದವು. ಎಲ್ಲ ಕಾವ್ಯಗಳಲ್ಲಿ ಬಂದಿರುವ ಜಗದೇಕ ಮಲ್ಲ, ಜಯಸಿಂಹನೆಂದು ಹೆಸರಿಸಲ್ಪಟ್ಟವರು ಬೇರೆ ಬೇರೆಯಲ್ಲ ಒಬ್ಬನೆ ಅರಸನೆಂದು ನಿಷ್ಪನ್ನವಾಗುತ್ತದೆ ಎಂದು ತಿಳಿಸುತ್ತಾರೆ.

ಜೇಡರದಾಸಿಮಯ್ಯನೇ ದೇವರದಾಸಿಮಯ್ಯನಾಗಿರಬೇಕು ಎಂದು ಊಹಿಸುತ್ತಾ ಲೇಖನದ ಮುಂದುವರೆದ ಭಾಗವನ್ನು ನಿರೂಪಿಸುತ್ತಾರೆ. "ದೇವರದಾಸಿಮಯ್ಯ ಹೆಸರು ಹರಿಹರನು ಅನ್ಯ ಶಿವಶರಣರ ಮೇಲೆ ಬರೆದ ಒಂದೇ ಒಂದಾದರೂ ರಗಳೆಯಲ್ಲಿ ಇಲ್ಲದುದ್ದರಿಂದ ದೇವರದಾಸಿಮಯ್ಯನ ಮೇಲೆ ಹತ್ತಕ್ಕೆ ಎಂಟೊಂಬತ್ತಾದರೂ ಹರಿಹರನ ರಗಳೆ ಇದ್ದಿರಲಾರದು. ಕಾರಣವೇನು? ನನಗಾದರೊ ಹೀಗೆನಿಸುತ್ತದೆ. ಹರಿಹರನ ಕಾಲದಲ್ಲಿ ದೇವರದಾಸಿಮಯ್ಯನ ಹೆಸರು ಇದ್ದಿರಲಿಲ್ಲ. ಅಂದರೆ ಆಗ್ಗೆ ದೇವರದಾಸಿಮಯ್ಯನೆಂಬ ಹೆಸರು ಇನ್ನೂ ಹುಟ್ಟಿರಲಿಲ್ಲ ಅಥವಾ ಒಂದೋ ದೇವರದಾಸಿಮಯ್ಯನು ಒಬ್ಬ ಕಾಲ್ಪನಿಕ ವ್ಯಕ್ತಿಯಾಗಿರಬೇಕು, ಇಲ್ಲವೆ ಹರಿಹರನಿಗಿಂತ ಹಿಂದಣ ಯಾರೋ ಒಬ್ಬನ ಹೆಸರು ಹರಿಹರನಿಂದ ಈಚೆಯಲ್ಲಿ ರೂಪಾಂತರಿಸಿ ದೇವರದಾಸಿಮಯ್ಯ ಎಂದಾಗಿರಬೇಕು"[೪೧] ಎಂದು ಸ್ಪಷ್ಟೀಕರಣ ನೀಡುತ್ತಾರೆ.

ರಾಮನಾಥ ಎಂಬ ಅಂಕಿತದ ಚರ್ಚೆಯನ್ನು ತೆಗೆದುಕೊಂಡು ಬಸವಪುರಾಣದ ದೇವರದಾಸಿಮಯ್ಯನನ್ನು ವಚನಗಳ ಕರ್ತೃ ಜೇಡರದಾಸಿಮಯ್ಯನಿಗೆ ಹೋಲಿಸಿ ರಾಮನಾಥ ಅಂಕಿತ ಒಂದೇ ಆದ್ದರಿಂದ ಇಲ್ಲಿರುವ ವಚನಕಾರರಿಗೆ ಒಂದೇ ಅಂಕಿತವಲ್ಲ. ಪ್ರತ್ಯೇಕ ವ್ಯಕ್ತಿಗೆ ಪ್ರತ್ಯೇಕ ಅಂಕಿತವಿದೆ. ಎಂಬುದನ್ನು ಜ್ಞಾಪಕಕ್ಕೆ ತಂದುಕೊಳ್ಳಬೇಕು ಎಂದು ಹೇಳುತ್ತಾ ಈ ಇಬ್ಬರೂ ಒಬ್ಬರೇ ಎಂಬುದಾಗಿ ಲೇಖನದ ೨ ನೇ ಭಾಗದ ಕೊನೆಯಲ್ಲಿ ಆಕರಗಳನ್ನು ನೀಡುತ್ತಾ ಸಾಧಿಸುತ್ತಾರೆ ಅದು ಹೀಗಿದೆ; "ನಮ್ಮ ವಿಚಾರದ ದೇವರದಾಸಿಮಯ್ಯನೆಂದರೂ, ಜೇಡರದಾಸಿಮಯ್ಯನೆಂದರೂ ಆತನೊಬ್ಬನೆ ವ್ಯಕ್ತಿಯೆಂದೂ ಜೇಡರದಾಸಿಮಯ್ಯನನ್ನು ಕಂಡು

ಮಾತನಾಡಿದ ಹಾಗೂ ಆತನ ಗರ್ವವನ್ನು ಮುರಿದವನೆಂಬ ಶಂಕರದಾಸಿಮಯ್ಯನು ಆತನಿಂದ ಪ್ರತ್ಯೇಕ ವ್ಯಕ್ತಿಯೆಂದು. ಹೀಗೆ ಸಿದ್ಧವಾಗುವುದರಿಂದ ಶಿವಶರಣರಲ್ಲಿ ದಾಸ, ದಾಸಯ್ಯ, ದಾಸಿಮಯ್ಯ ಎಂಬ ಹೆಸರಿನ ಶಂಕರದಾಸಿಮಯ್ಯ, ಜೇಡರದಾಸಿಮಯ್ಯ ಮತ್ತು ದೇವರದಾಸಿಮಯ್ಯ ಎಂದು ಮೂವರೆಂದು ಕಾಣುವ ವ್ಯಕ್ತಿಗಳು ನಿಜವಾಗಿ ಮೂವರಲ್ಲ, ಇಬ್ಬರೆ ಎಂದೂ ಖಂಡಿತವಾಗಿ ತಿಳಿಯುತ್ತದೆ."[೨೨] ಎಂದು ಹೇಳುತ್ತಾ, ಶಾಸನಗಳಲ್ಲಿ ಹರಿಹರನ ರಗಳೆ ಹಾಗೂ ಸಮಯ ಪರೀಕ್ಷೆಯವರೆಗೂ ಜೇಡರದಾಸಿಮಯ್ಯ ಎಂದಿದ್ದಾತ ಬಸವಪುರಾಣದಿಂದ ಮುಂದೆ ದೇವರ ದಾಸಿಮಯ್ಯನಾದುದಾಗಿ ಪ್ರಾತ್ಯಕ್ಷಿಕೆ ನೀಡುತ್ತಾರೆ. ಇದಕ್ಕೆ ಕಾಲಗಡವು ೧೩-೧೪ನೇ ಶತಮಾನವನ್ನು ನೀಡುತ್ತಾರೆ. ಪ್ರಾರಂಭದಿಂದಲೂ ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ ಇಬ್ಬರೂ ಬೇರೆ ಬೇರೆ ಎಂಬಂತೆ ತಕ್ಕ ಆಧಾರಗಳನ್ನು ನೀಡಿದ ಲೇಖಕರು ಕೊನೆಯಲ್ಲಿ ಒಬ್ಬರೇ ಎಂಬ ವಾದವನ್ನು ಮಂಡಿಸಿ ಚಕಿತಗೊಳಿಸಿದ್ದಾರೆ.

ಇದೇ ಕೃತಿಯಲ್ಲಿ ಬಿ. ನಂಜುಂಡಪ್ಪನವರು **'ದೇವರದಾಸಿಮಯ್ಯನ ಪುರಾಣ ವಿರೂಪಾಕ್ಷ ದೇಶಿಕನದೆನ್ನಲಾದ ಕೃತಿಯ ವಿಮರ್ಶೆ ಹಾಗೂ ಕಥಾಸಾರ'** ಎಂಬ ವಿಸ್ತಾರ ಲೇಖನದಲ್ಲಿ ವಚನ ಸಾಹಿತ್ಯದ ಆದ್ಯ ಪ್ರವರ್ತಕ ದೇವರದಾಸಿಮಯ್ಯನೆಂದೇ ಹೇಳಿ ಆತನು ಐತಿಹಾಸಿಕ ಪುರುಷ ಆತನ ಕಾಲ ಕ್ರಿ.ಶ.೧೦೦೮ರಿಂದ ೧೦೪೦ ಎಂದು ಹೇಳಿದ್ದಾರೆ. ಇಲ್ಲಿಯೂ ವಚನಕಾರ ಜೇಡರ ದಾಸಿಮಯ್ಯನನ್ನು ಜಯಸಿಂಹನ ಕಾಲದ ದೇವರದಾಸಿಮಯ್ಯನೆಂದೇ ಸಾಧಿಸಿದ ಪ್ರಯತ್ನವಿದೆ. ಆದರೆ ಇಲ್ಲಿ ಪ್ರಧಾನವಾಗುವುದು ಒಂದು ದೇವರದಾಸಿಮಯ್ಯ ವಚನಕಾರನಲ್ಲ ಎನ್ನುವುದು. ಎರಡನೆಯದು ದೇವರ ದಾಸಿಮಯ್ಯ ವಚನಕಾರನೇ ಆಗಿದ್ದಲ್ಲಿ ಆತನ ಒಂದಾದರು ವಚನಗಳು ದೊರೆಯಬೇಕಿತ್ತು ಎಂಬುದು.

ಲೇಖನದ ಕೆಲವು ಅಂಶಗಳು ಹೀಗಿವೆ; ದುಗ್ಗಳೆಯ ಊರು ಮುದನೂರು. ದಾಸಿಮಯ್ಯ ದುಗ್ಗಳೆಯ ಮಗ ರಾಮಲಿಂಗ. ನಂತರ ವಸ್ತ್ರದಾನ ಮತ್ತು ತವನಿಧಿಯ ಪವಾಡಗಳು ನಡೆದವು. ಇದಾದ ಮೇಲೆ ಪೊಟ್ಟಲಕೆರೆಗೆ, ಸುಗ್ಗಲೆಯ ಕರೆಯ ಮೆರೆಗೆ ದಾಸಿಮಯ್ಯ ಹೋಗಿ ಜೈನರನ್ನು ಜಯಿಸಿ ಸುಗ್ಗಲೆಗೆ ದೀಕ್ಷೆನೀಡಿ ಅಷ್ಟಾವರಣ ಮಹಿಮೆಯನ್ನು ಪ್ರತಿಪಾದಿಸಿ ಮತ್ತೆ ಮುದನೂರಿಗೆ ಬಂದು ಅಲ್ಲಿ ತನ್ನ ಸತಿ ಸುತರೊಡನೆ ರಾಮನಾಥಲಿಂಗದಲ್ಲಿ ಐಕ್ಯರಾದುದಾಗಿ ಇದೆ. ಆಚಾತುರ್ಯವೆಂಬಂತೆ ಈ ಪುರಾಣದಲ್ಲಿ ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯರ ಕತೆಗಳು ಸಮ್ಮಿಳಿತಗೊಂಡಿವೆ ಆದರೆ ಹೆಸರು ಮಾತ್ರ ದೇವರದಾಸಿಮಯ್ಯ ಪುರಾಣ ಎಂದಿದೆ ಎಂದು ಲೇಖಕರು ಪ್ರತಿಪಾದಿಸುತ್ತಾರೆ. ಆದರೆ ಈ ಲೇಖನವೂ ಈವರೆಗಿನ ಸಮ್ಮಿಳಿತ ಸಂಪ್ರದಾಯಕ್ಕೆ ಸಾಮಾನ್ಯ ಅತಿಥಿಯಾಗಿದೆ. ಇದೇ ಕೃತಿಯ ಮುಂದಿನ ಲೇಖನಗಳಲ್ಲಿ

ಭಂಡಾರು ತಮ್ಮಯ್ಯ, ಸಿ. ಕೆ. ವೆಂಕಟರಾಮಯ್ಯ, ಎಂ. ಜಿ. ನಂಜುಂಡಾರಾಧ್ಯರು ಆಕರಗಳನ್ನು ನೀಡುತ್ತಾರಾದರೂ ಇದನ್ನೆ ಸಾಧಿಸಿದ್ದಾರೆ. ಡಿ.ಎಲ್. ನರಸಿಂಹಾಚಾರ್ಯರು, ಫ. ಗು. ಹಳಕಟ್ಟಿಯವರು, ಅನಕೃ ಅವರು ಇದಕ್ಕೆ ಹೊರತಾಗಿಲ್ಲ.

ಇದೇ ಕೃತಿಯಲ್ಲಿ **ಭಂಡಾರು ತಮ್ಮಯ್ಯನವರು** ತಮ್ಮ **'ದೇವರದಾಸಿಮಯ್ಯ'** ಎಂಬ ಲೇಖನದಲ್ಲಿ ದಾಸಿಮಯ್ಯನ ಕುರಿತ ಹಲವು ಸ್ಥಿತ್ಯಂತರಗಳನ್ನು ಚರ್ಚಿಸಿದ್ದಾರೆ. ಅಂತಹದರಲ್ಲಿ ದಾಸಿಮಯ್ಯನ ಕುರಿತಂತೆ ದೇಶ ಸಮನ್ವಯಗೊಳಿಸಿರುವುದು ಒಂದು. ನಂತರ ಆತನ ಉಲ್ಲೇಖಿತ ಕೃತಿಗಳ ಚರ್ಚೆ ಮತ್ತು ಶಾಸನಗಳ ಉಲ್ಲೇಖಗಳನ್ನು ತಿಳಿಸುತ್ತಾರೆ. ಈ ಲೇಖನ ಕೇವಲ ಮಾಹಿತಿಯ ಉದ್ದೇಶವನ್ನು ಈಡೇರಿಸುತ್ತದೆ. ಲೇಖಕರು ಅದನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ. ಲೇಖನದ ಒಳಹುಗಳು ಇಂತಿವೆ.

- ಲೇಖಕರು ಈ ಲೇಖನದಲ್ಲಿ ದೇವರ ದಾಸಿಮಾರ್ಯ ಎಂದು ಸಂಬೋಧಿಸಿರುವುದು ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ ಇವರ ಹೆಸರಿನ ಬಗ್ಗೆ ಸಮನ್ವಯ ನೀತಿಯನ್ನು ಪ್ರತಿಪಾದಿಸುತ್ತಾರೆ. ದೇವರದಾಸಿಮಯ್ಯನು ಆಂಧ್ರ-ಕರ್ನಾಟಕ ವಾಙ್ಮಯಗಳಲ್ಲಿ ಈತನು ಇದೆ ಹೆಸರಿನಿಂದಲ್ಲದೆ ತೇಡರದಾಸಿಮಯ್ಯ, ಜೇಡರದಾಸಿಮಯ್ಯ ಎಂಬ ಹೆಸರುಗಳಿಂದಲೂ ಸಹ ವ್ಯವಹರಿತನಾಗಿದ್ದಾನೆ[೪೩] ಎಂದು ಮೊದಲ ಅಂಶವನ್ನೆ ಮತ್ತಷ್ಟು ಆಧಾರೋತ್ತರವಾಗಿ ಇಲ್ಲಿ ಗಟ್ಟಿಗೊಳಿಸುತ್ತಾರೆ. ಆದರೆ ಜೇಡರದಾಸಿಮಯ್ಯನೇ ಅಂದರೆ ದೇವರದಾಸಿಮಯ್ಯ, ತೇಡರ ದಾಸಿಮಯ್ಯ ಎಂದು ಕರೆಸಿಕೊಂಡವನು ಎಂದು ಹೆಸರಿಸುವ ಬರದಲ್ಲಿ ಇಬ್ಬರು ದಾರ್ಶನಿಕರನ್ನು ಒಬ್ಬನನ್ನಾಗಿಸಿದ್ದಾರೆ.
- ಮಲ್ಲಿಕಾರ್ಜುನ ಪಂಡಿತಾರಾಧ್ಯನ ಶಿವತತ್ವಸಾರ, ಬಸವ ಪುರಾಣ, ಭೀಮಕವಿಯ ಬಸವಪುರಾಣ, ಬ್ರಹ್ಮಶಿವನ ಸಮಯಪರೀಕ್ಷೆ ಮೊದಲಾದ ಕೃತಿಗಳಲ್ಲಿನ ದಾಸಿಮಯ್ಯನೆಂದು ಕರೆಯಿಸಿಕೊಳ್ಳುವ ಇಬ್ಬರು ಶರಣರ ಉಲ್ಲೇಖಗಳನ್ನು ನೀಡಿದ್ದಾರೆ. ಕಥಾ ಸಾರಾಂಶವನ್ನು, ಆಕರಗಳನ್ನು ಪ್ರಸ್ತಾಪಿಸುವ ರೀತಿಯಲ್ಲಿ ವಿವರಿಸಿದ್ದಾರೆ. ಹಾಗೆ ಗೊಬ್ಬೂರು, ಹಿರಿಯೂರು ಶಾಸನಗಳಲ್ಲಿನ ಉಲ್ಲೇಖಗಳನ್ನು ಆಕರಗಳಲ್ಲಿ ಬಳಸಿಕೊಂಡಿದ್ದಾರೆ. ದೇವರದಾಸಿಮಯ್ಯ, ತೇಡರದಾಸಿಮಯ್ಯ, ಜೆಡರದಾಸಿಮಯ್ಯ ಇವರುಗಳ ಚರಿತ್ರೆಯನ್ನು ಪ್ರತ್ಯೇಕವಾಗಿ ವಿವರಿಸಿದ್ದಾರೆ. ಗೊಂದಲಗಳಿಗೆ ಆಸ್ಪದವಿಲ್ಲ. ಹಾಗೆ ಯಾವುದರ ಸ್ಪಷ್ಟೀಕರಣವಿಲ್ಲ. ಇಲ್ಲಿ ಪುರಾಣಗಳು ಹಾಗೂ ಅಲ್ಲಿನ ಕಥೆಗಳ ವಿವರವಿದೆ. ಅವುಗಳಿಗೆ ಶಾಸನಗಳ ಆಧಾರಗಳನ್ನು ಲೇಖಕರು ನೀಡಿದ್ದಾರೆ. ಕೊನೆಯದಾಗಿ ಜೇಡರದಾಸಿಮಯ್ಯನ ವಚನಗಳ ಆಂತರ್ಯದ ಸಂಗತಿಗಳನ್ನು ಚರ್ಚಿಸಿದ್ದಾರೆ.

"ದಾಸಿಮಯ್ಯನ ಕೃತಿಗಳಲ್ಲಿ ಪೂರ್ವೋಕ್ತಗಳಾದ ಷಟ್‌ಸ್ಥಳ ವಚನಗಳಲ್ಲದೆ ಮತ್ತೆ ಏನಾದರೂ ಈಚೆಗೆ ದೊರಕಿದವೋ ಏನೋ ತಿಳಿಯದು. ಈತನ ವಚನಗಳು ನಾಗದೀರ್ಘತಿಗಳಲ್ಲದೆ ವಿಶೇಷ ಭಾವಾರ್ಥಗರ್ಭಿತವಾಗಿ ವಿರಾಜಿಸುತ್ತವೆ"[೪೪] ಎಂದು ಹೇಳುತ್ತಾ, ಮುಂದಿನ ಅಧ್ಯಯನಕ್ಕೆ ಕೆಲವು ಊಹೆಗಳನ್ನು ನೀಡುತ್ತಾರೆ. "ಪಂಚಾಚಾರ್ಯ ಸಿಂಹಾಸನಗಳಲ್ಲಿನ ಶ್ರೀಶೈಲ ಸಿಂಹಾಸನಕ್ಕೆ ಸೇರಿದ ಶ್ರೀ ಚಂದ್ರಗುಂಡದೇಶಿಕೇಂದ್ರರಿಂದ ದಾಸಿಮಯ್ಯ ಲಿಂಗಾಧಾರಣೆ ಹೊಂದಿದಂತೆ ಆಂಧ್ರ ಭಾಷೆಯಲ್ಲಿ ಪುಲ್ಲ ಕವಿ ರಚಿಸಿದ ಪಂಡಿತರಾಧ್ಯ ಚರಿತ್ರದಲ್ಲಿಯೂ, ಇಡಗೂರು ರುದ್ರಕವಿ ರಚಿಸಿದ ವಿರೂಪಾಕ್ಷ ಮಹಾತ್ಮ್ಯದಲ್ಲಿಯೂ ವರ್ಣಿತವಾದಂತೆ ತಿಳಿದುಬರುತ್ತದೆ."[೪೫] ಎಂದು ಹೇಳಿ, ಈ ಲೇಖನದಲ್ಲಿ ಭಂಡಾರು ತಮ್ಮಯ್ಯನವರು ಅಧ್ಯಯನಕ್ಕೆ ಹೆಚ್ಚಿನ ಮಾಹಿತಿಯನ್ನು ದಾಖಲಿಸಿ ಮುಂದಿನ ಅಧ್ಯಯನದ ಹಾದಿಯನ್ನು ಹಾಕಿ ಕೊಟ್ಟಿದ್ದಾರೆ.

ರಂ. ಶ್ರೀ. ಮುಗಳಿಯವರ ೧೯೫೩ **'ಕನ್ನಡ ಸಾಹಿತ್ಯ ಚರಿತ್ರೆ'** ಕೃತಿಯಲ್ಲಿ ವಚನಕಾರರನ್ನು ಕುರಿತು ವಿಶ್ಲೇಷಿಸುವಾಗ ಜೇಡರದಾಸಿಮಯ್ಯನ ಕುರಿತು ವಿವರಿಸುತ್ತಾರೆ. ಇಲ್ಲಿ ಜೇಡರ, ದೇವರ ಎರಡೂ ವಿಶೇಷಗಳನ್ನು ಸಮೀಕರಿಸಿ ಬಿಂಬಿಸಲಾಗಿದೆ. "ದೇವರದಾಸಿಮಯ್ಯ ಇಲ್ಲವೆ ಜೇಡರದಾಸಿಮಯ್ಯ, ಶಂಕರದಾಸಿಮಯ್ಯ ಇವರಿಬ್ಬರೂ ಸಮಕಾಲೀನರಾಗಿ ಚಾಲುಕ್ಯ ಜಯಸಿಂಹನ ಕಾಲದಲ್ಲಿ ಇದ್ದವರೆಂದು ಹರಿಹರ, ಭೀಮಕವಿ, ಇವರ ಗ್ರಂಥಗಳಿಂದ ತಿಳಿಯುತ್ತದೆ. ಸುಮಾರು ೧೧೮೦ರಲ್ಲಿದ್ದ ಬ್ರಹ್ಮಶಿವನು ತನ್ನ ಸಮಯಪರೀಕ್ಷೆಯಲ್ಲಿ ಜೇಡರದಾಸಿಮಯ್ಯನ ಹೆಸರನ್ನು ಹೇಳಿದ್ದಾನೆ. ಬಸವೇಶ್ವರನ ವಚನಗಳಲ್ಲಿ ದೇವರದಾಸಿಮಯ್ಯನ ಉಲ್ಲೇಖವು ಬಂದ ಬಗೆಯನ್ನು ನೋಡಿದರೆ ಅವನು ಬಸವನಿಗೆ ಪೂರ್ವಕಾಲೀನನೆಂಬ ಸಂಗತಿಗೆ ಬೆಂಬಲ ದೊರೆಯುತ್ತದೆ"[೪೬] ಎಂದು ಸಾದರಪಡಿಸುತ್ತಾರೆ. ರಂ. ಶ್ರೀ. ಮುಗಳಿಯವರ ವಿವರಣೆಯನ್ನು ಒಂದು ಸಾಮಾನ್ಯ ಆಯಾಮದಲ್ಲಿ ಹೀಗೆ ಚರ್ಚಿಸಬಹುದು.

- ಇಲ್ಲಿ ಲೇಖಕರು ದೇವರದಾಸಿಮಯ್ಯ ಇಲ್ಲವೆ ಜೇಡರದಾಸಿಮಯ್ಯ, ಶಂಕರದಾಸಿಮಯ್ಯ ಸಮಕಾಲೀನರು ಜಯಸಿಂಹನ ಕಾಲದವರು ಎಂದಿದ್ದಾರೆ. ಇದರಿಂದ ಈ ನಾಲ್ಕು ಜನರ ನಡುವೆ ಕಾಲದ ಪ್ರಶ್ನೆ ಎದುರಾಗುತ್ತದೆ. ಇದಕ್ಕೆ ಹರಿಹರ, ಭೀಮಕವಿ ಇವರ ಗ್ರಂಥಗಳನ್ನು ಮೇಲ್ಕಂಡ ವಿಷಯಕ್ಕೆ ಆಕರವಾಗಿಸುತ್ತಾರೆ. ಈಗಾಗಲೇ ವಿಧಿತವಾದಂತೆ ಹರಿಹರನ ರಗಳೆಯಲ್ಲಿ ಬರುವ ವಿಷ್ಣುದಹನ ಸಂದರ್ಭದ ಜಯಸಿಂಹನೂ, ಭೀಮಕವಿಯ ಪೊಟ್ಟಲಕೆರೆಯ ಜಯಸಿಂಹನೂ ಬೇರೆ ಎಂಬ ಸಂದೇಹಗಳ ಕುರಿತು ಚರ್ಚೆಗಳು ನಡೆದಿವೆ. ಅಂತೆಯೇ ಅವರಿಬ್ಬರು ಬೇರೆ ಎಂದಾದರೆ ಕಾಲದ ದೃಷ್ಟಿಯಿಂದ ಸಮಸ್ಯೆ ಬಗೆಹರಿಯಬಹುದು ಇಲ್ಲವಾದಲ್ಲಿ ಮತ್ತಷ್ಟು ಗೊಂದಲಗಳಿಗೆ ಎಡೆಮಾಡಿಕೊಡುತ್ತದೆ.

- ಲೇಖಕರು ಬಸವೇಶ್ವರನ ವಚನಗಳಲ್ಲಿ ದೇವರದಾಸಿಮಯ್ಯನ ಉಲ್ಲೇಖವು ಬಂದಿದೆ. ಎಂದು ದಾಖಲಿಸುತ್ತಾರೆ. ಆದರೆ ಬಸವೇಶ್ವರನ ವಚನಗಳಲ್ಲಿ ಎಲ್ಲಿಯೂ 'ದೇವರ' ವಿಶೇಷಣದ ವ್ಯಕ್ತಿಯ ಉಲ್ಲೇಖವಿರುವುದಿಲ್ಲ. ಈ ಅಂಶಗಳನ್ನಾಧರಿಸಿ ಲೇಖಕರ ವಾದಗಳು ಅವರ ಸಂಶೋಧನಾ ಕಾಲಘಟ್ಟಕ್ಕೆ ಸೀಮಿತವಾಗಿದ್ದು, ಆ ನಂತರದ ಸಂಶೋಧನೆಗಳನ್ನು ಪರಿಗಣನೆಗೆ ತೆಗೆದುಕೊಂಡು ಸತ್ಯವನ್ನು ಕಂಡುಕೊಳ್ಳಬೇಕಾದ ಅನಿವಾರ್ಯತೆ ಇದೆ. ರಂ.ಶ್ರೀ.ಮುಗುಳಿಯವರ ಈ ಅಭಿಪ್ರಾಯವೇ ಸಿದ್ದಯ್ಯ ಪುರಾಣಿಕ ಹಾಗೂ ಅ.ನ.ಕೃ ಅವರದ್ದಾಗಿದೆ.

**ಸಿದ್ದಯ್ಯ ಪುರಾಣಿಕ** ಅವರು **'ಶರಣಚರಿತಾಮೃತ'** ಕೃತಿಯಲ್ಲಿ ಜೇಡರದಾಸಿಮಯ್ಯನನ್ನು ಕುರಿತು ಹೀಗೆ ಪ್ರಸ್ತುತಪಡಿಸುತ್ತಾರೆ. "ದೇವರದಾಸಿಮಯ್ಯ ವಚನ ಸಾಹಿತ್ಯದ ಪ್ರವರ್ತಕನಲ್ಲದಿದ್ದರೂ ಅದರ ಪ್ರಥಮ ಶಿಲ್ಪಿಯೆಂಬುವುದರಲ್ಲಿ ಸಂದೇಹವಿಲ್ಲ. ವಚನಗಳನ್ನು ಎಗ್ಗಳವಾಗಿ ರಚಿಸಿ ಆ ಸಾಹಿತ್ಯ ಪ್ರಕಾರಕ್ಕೊಂದು ಮೂರ್ತ ಸ್ವರೂಪವನ್ನಿತ್ತವನು ದೇವರದಾಸಿಮಯ್ಯನೆಂದು ಧಾರಾಳವಾಗಿ ಹೇಳಬಹುದು. ಬಸವಣ್ಣ ಮತ್ತು ಸರ್ವಜ್ಞನವರೆಗೆ ಅನೇಕರು ಈತನ ವಚನಗಳಿಂದ ಪ್ರಭಾವಿತರಾದದ್ದು ಕಂಡು ಬಂದಿದೆ"[೪೭] ಎಂದು ಹೇಳುತ್ತಲೇ, ಸಿದ್ದಯ್ಯ ಪುರಾಣಿಕರವರು ಸಮಯ ಪರೀಕ್ಷೆ, ಹರಿಹರನ ರಗಳೆ, ಬಸವ ಪುರಾಣಗಳನ್ನಾಧರಿಸಿ ಜಯಸಿಂಹನ ಕಾಲದಲ್ಲಿ ದೇವರದಾಸಿಮಯ್ಯನಿದ್ದ. ಅಂದರೆ ಇವನ ಕಾಲ ಕ್ರಿ.ಶ. ೯೮೦ ರಿಂದ ೧೦೪೦ ರವರೆಗೆ ಊಹಿಸಬಹುದು ಎಂದು ಹೇಳುತ್ತಾ ಮಾದರ ಚೆನ್ನಯ್ಯ, ಡೋಹರ ಕಕ್ಕಯ್ಯರ ಕಾಲವನ್ನು ನಿರ್ಣಯಿಸುತ್ತಾ, ಡೋಹರ ಕಕ್ಕಯ್ಯ ಮತ್ತು ಮಾದರ ಚನ್ನಯ್ಯರನ್ನು ದೇವರದಾಸಿಮಯ್ಯ ನೆನೆಯುತ್ತಾನೆ. ಡೋಹರ ಕಕ್ಕಯ್ಯನು ದೇವರದಾಸಿಮಯ್ಯನ ಕಿರಿಯ ಸಮಕಾಲೀನನಾಗಿದ್ದು ಎಳೆಯವಯಸಿನಲ್ಲಿಯೇ ಸಾಕಷ್ಟು ಕೀರ್ತಿಶಾಲಿಯಾಗಿರಬೇಕು. ಕ್ರಿ.ಶ.೧೦೮೦ರಲ್ಲಿ ಸುಮಾರು ೨೦-೨೫ ವರ್ಷದವನಾಗಿರಬಹುದಾದ ಡೋಹರ ಕಕ್ಕಯ್ಯನು ಬಸವಣ್ಣನವರ ಕಾಲದಿಂದ ೧೧೦೯-೧೧೬೮ರಲ್ಲಿ ೭೦-೮೦ ವರ್ಷಗಳ ವಯೋವೃದ್ಧ ಶರಣನಾಗಿ ಜೀವಿಸಿರುವುದು ಸಾಧ್ಯವಿದೆ. ಬಸವಕಾಲಿನ ಸಾಹಿತ್ಯದಲ್ಲಿ ಡೋಹರ ಕಕ್ಕಯ್ಯನು ವಯಸ್ಸಿನಲ್ಲಿ ಎಲ್ಲರಿಗಿಂತ ಹಿರಿಯನಾಗಿದನೆಂಬುದು ಅಂಗಿಕೃತವಾಗಿದೆ. ಆದುದರಿಂದ ಡೋಹರ ಕಕ್ಕಯ್ಯನು ದೇವರ ದಾಸಿಮಯ್ಯನ ಕಾಲ ಮತ್ತು ಬಸವಾದಿ ಪ್ರಮಥರ ಕಾಲವನ್ನು ಸಂಧಿಸುವ ಸೇತುವೆಯಾಗಿದ್ದನೆಂದರೆ ತಪ್ಪಾಗಲಿಕ್ಕಿಲ್ಲ"[೪೮] ಎಂದು ವಿಷಯವನ್ನು ಸಾದರಪಡಿಸುತ್ತಾರೆ. ಈ ಮೇಲಿನ ಶರಣರ ಕಾಲ ವಿಚಾರದಲ್ಲಿನ ಊಹೆಗಳು ಈಗಾಗಲೇ ಸ್ಪಷ್ಟಗೊಂಡಿವೆ. ಜೇಡರದಾಸಿಮಯ್ಯ, ಮಾದರಚನ್ನಯ್ಯ, ಡೋಹರ ಕಕ್ಕ ಯ್ಯ, ಶಂಕರದಾಸಿಮಯ್ಯ ಈ ಎಲ್ಲರೂ ಸಮಕಾಲೀನರು ಅಂತೆಯೇ ಬಸವಣ್ಣನ

ಹಿರಿಯರು, ದೇವರದಾಸಿಮಯ್ಯನ ಕಿರಿಯರು ಎಂಬುದು ಸತ್ಯ. ಸಿದ್ಧಯ್ಯ ಪುರಾಣಿಕ ಅವರು ಹೇಳುವಂತೆ ದೇವರದಾಸಿಮಯ್ಯ ಜಯಸಿಂಹನ ಕಾಲದವನೆ ನಿಜ. ಆದರೆ ಆತನ ಕಾಲವನ್ನು ಎಳೆದು ಬಸವಣ್ಣನ ಕಾಲಕ್ಕೆ ತಂದು ಹೆಚ್ಚು ಕಾಲ ಬದುಕಿದ್ದ ಎಂದು ಇಟ್ಟುಕೊಂಡು ಸಾಧಿಸಿದರೆ ಅದು ಅತಿ ದೀರ್ಘವೆನಿಸುತ್ತದೆ.

**ಶರಣ ಚರಿತಾಮೃತ** ಕೃತಿಯ ಮತ್ತೊಂದು ಲೇಖನ '**ದೇವರ ದಾಸಿಮಯ್ಯ ,ಶಂಕರ ದಾಸಿಮಯ್ಯ– ಢಕ್ಕೆಯ ಮಾರಯ್ಯ**'. ಈ ಲೇಖನದಲ್ಲಿ ಅವರ ಬಗೆಗಿನ ಮತ್ತಷ್ಟು ವಿಚಾರಗಳು ಸ್ಪಷ್ಟವಾಗುತ್ತವೆ. ಇಲ್ಲಿ ಪುರಾಣಿಕರು ಗುರುತಿಸಿದಂತೆ ಪುರಾಣಗಳನ್ನು ಇಟ್ಟುಕೊಂಡು ಬಸವಣ್ಣ ಹಾಗೂ ದೇವರ ದಾಸಿಮಯ್ಯರ ಹುಟ್ಟಿನ ಚರ್ಚೆಯನ್ನು ಹೀಗೆ ಹೇಳಿದ್ದಾರೆ. "ಶಿವನ ಗಣತತಿಯಲ್ಲಿ ನಂದಿ ಒಕ್ಕಲಿಗರ ಆರಾಧ್ಯ ದೈವತನಾದರೆ ದೇವಾಂಗ ನೇಕಾರರ ಇಷ್ಟ ದೇವತೆ. ನಂದಿ ಬಸವಣ್ಣನಾಗಿ ಭೂಲೋಕಕ್ಕೆ ಬಂದರೆ ದೇವಾಂಗ ದೇವರ ದಾಸಿಮಯ್ಯನಾಗಿ ಧರೆಗಿಳಿದನೆಂದು ಹೇಳುತ್ತಾರೆ. ಆದರೆ ಬಿತ್ತಿ ಬೆಳೆಯುವ ಒಕ್ಕಲಿಗರ ದೇವರು ಬರುವ ಮುನ್ನವೆ ಬಟ್ಟೆ ನೆಯ್ಯುವವರ ಗುರು ಬಂದುದು ಹೊಟ್ಟೆಯ ಪ್ರಶ್ನೆಗಿಂತ ಬಟ್ಟೆಯ ಪ್ರಶ್ನೆ ಮೊದಲಿನದೆಂಬುದನ್ನು ದೃಢಪಡಿಸಿದಂತಿದೆ. ಪ್ರಾಣಕ್ಕಿಂತ ಮಾನ ಹೆಚ್ಚಿನದಲ್ಲವೆ?"[೪೯] ಎಂದು ಹೇಳುವಲ್ಲಿ ಇಬ್ಬರು ಶರಣರ ಹುಟ್ಟಿನ ಸ್ಪಷ್ಟತೆಯನ್ನು ನೀಡುತ್ತಾರೆ. ಇದರ ಬಗೆಗಿನ ಚರ್ಚೆಗಳನ್ನು ಮುಂದಿನಂತೆ ತಿಳಿಯಬಹುದು.

- "ಹನ್ನೊಂದನೆಯ ಶತಮಾನದ ಪ್ರಾರಂಭದಲ್ಲಿ ಇಲ್ಲವೆ ಹತ್ತನೆಯ ಶತಮಾನದ ಕೊನೆಯಲ್ಲಿ ಶಂಕರಿ ಮತ್ತು ರಾಮಯ್ಯ ಎಂಬ ದಂಪತಿಗಳಿಗೆ ದಾಸ, ದಾಸಯ್ಯ, ದಾಸಿಮಯ್ಯ, ದಾಸಿದೇವ, ಜೇಡರದಾಸ, ದೇವರದಾಸಿಮಯ್ಯ, ದಾಸಿಮಾರ್ಯ ಹೆಸರುಗಳಿಂದ ಕರೆಯುವ ದೇವರದಾಸಿಮಯ್ಯ ಜನಿಸಿದನು"[೫೦] ಎಂದು ಹೇಳುತ್ತಾರೆ. ಇಲ್ಲಿ ದಾಸಿಮಯ್ಯನ ಕಾಲ ವಿಚಾರ ಸ್ಪಷ್ಟವಿಲ್ಲ. ಅಂತೆಯೇ ಮೇಲ್ಕಾಣಿಸಿದ ಎಲ್ಲ ಹೆಸರುಗಳಿಂದ ಕರೆಯುವ ವ್ಯಕ್ತಿ ಒಬ್ಬನೇ. ಇಲ್ಲಿ ಬರುವ ಚರಿತ್ರೆ ದೇವಾಂಗಪುರಾಣವನ್ನು ಅನುಸರಿಸಿದ್ದಾಗಿದೆ. ಈ ಹೊತ್ತಿಗಾಗಲೇ ಚರಿತ್ರೆಯಲ್ಲಿ ಜೀವಿಸಿದ್ದ ಇಬ್ಬರು ವ್ಯಕ್ತಿಗಳನ್ನು ಒಬ್ಬನೇ ಎಂದು ಕರೆಯುವ ಎಲ್ಲಾ ಪ್ರಯತ್ನಗಳು ನಡೆದು ಹೋಗಿದ್ದು, ಅದರ ಪ್ರಭಾವದಿಂದ ರಚನೆಗೊಂಡ ಕೃತಿಗಳಲ್ಲಿ ದೇವಾಂಗ ಪುರಾಣವೂ ಒಂದು ಎಂಬುದು ಗಮನಾರ್ಹ.
- ಲೇಖಕರು ಇಲ್ಲಿ ಕಾವ್ಯ ಪುರಾಣಗಳ ಕಥೆಗೆ ವಾಸ್ತವದ ಆಧಾರಗಳನ್ನು ನೀಡುತ್ತಾ ಬಂದಿದ್ದಾರೆ. ಗೊಬ್ಬೂರು ಹಾಗೂ ಹಿರಿಯೂರು ಶಾಸನಗಳನ್ನಾಧರಿಸಿ ಆತನ ಭಕ್ತಿಯನ್ನು ಮತ್ತು ಕುಲವನ್ನು ನಿರ್ಧರಿಸುತ್ತಾರೆ. ದಾಸಿಮಯ್ಯನಿಗೆ ಒಬ್ಬ ಮಗನಿದ್ದು ಆತನು

ಕೊಂಡಗೂಳಿಯ ಕೇಶಿರಾಜನ ಗುರುವಾಗಿ ಮೆರೆದನು ಎಂಬ ವಿಚಾರವನ್ನು ಲೇಖಕರು ಇಲ್ಲಿ ಚರ್ಚಿಸುತ್ತಾರೆ. ಆತನ ಹೆಸರು ವಿರೂಪಾಕ್ಷ ಎಂದು ದಾಖಲಿಸುತ್ತಾರೆ.

- "ದೇವರದಾಸಿಮಯ್ಯ ನೇಕಾರ, ಶಂಕರದಾಸಿಮಯ್ಯ ಹೊಲಿಗೆಯವ, ಇಳಿಹಾಳ ಬೊಮ್ಮಯ್ಯ ಒಕ್ಕಲಿಗ, ಕುಂಬಾರ ಗುಂಡಯ್ಯ ಕುಂಭಕಾರ, ಮಾದರ ಚನ್ನಯ್ಯ ಚರ್ಮಕಾರ, ಢಕ್ಕೆಯ ಮಾರಯ್ಯ ಸಾರುವ ಕಾಯಕದವ. ಜೀವನಕ್ಕೆ ಅಗತ್ಯವಾದ ಈ ಕಾಯಕಗಳ ನಾಯಕರಿಂದಲೇ ಶರಣ ಧರ್ಮದ ರೂಪುರೇಷೆಗಳು ಸಿದ್ದವಾದವು"[೫೧] ಎಂದು ದಾಖಲಿಸುತ್ತಾರೆ. ಇಲ್ಲಿ ಶರಣ ಧರ್ಮದ ಹುಟ್ಟು ಹಲವು ಕಾಯಕಗಳ ನಾಯಕರಿಂದ ಎಂಬುದು ಲೇಖಕರ ಅಭಿಪ್ರಾಯ. ಲೇಖಕರ ನಿಲುವಿನಂತೆ ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ ಎಂಬ ಹೆಸರುಗಳು ಒಬ್ಬನೇ ವ್ಯಕ್ತಿಯನ್ನು ಗುರುತಿಸುತ್ತವೆ. ಸಂಪತ್ತಿನ, ಸ್ವತ್ತಿನ ಅಹಂ ತಲೆಗೇರಿದಾಗ ವಿಪತ್ತನ್ನು ತಂದು ಪರೀಕ್ಷಿಸುವುದು ದೈವದ ಮತ್ತೊಂದು ರೂಪ, ಹಾಗೆ ಬಂದ ಶರಣನೇ ಶಂಕರದಾಸಿಮಯ್ಯ. ಶಂಕರದಾಸಿಮಯ್ಯನಿಗೂ ಇದು ಹೊರತಾಗಿಲ್ಲ. ಅಂದರೆ ಶಂಕರದಾಸಿಮಯ್ಯನನ್ನು ಢಕ್ಕೆಯ ಮಾರಯ್ಯ ಹೀಗೆ ಪರೀಕ್ಷಿಸುತ್ತಾನೆ. ಈ ಎಲ್ಲ ಅಂಶಗಳನ್ನು ಲೇಖಕರು ಪುರಾಣಗಳನ್ನಾಧರಿಸಿ ಸಾದರಪಡಿಸಿದ್ದಾರೆ. ಶರಣ ಧರ್ಮದ ಸಾಮಾನ್ಯ ವಿಚಾರಗಳು ದಂತಕತೆಗಳಾಗಿ ಪುರಾಣಗಳನ್ನು ಸೇರಿ ನಿರ್ಧರಿಸಲಾಗದಂತೆ ಕಗ್ಗಂಟಾಗಿ ಉಳಿದಿರುವುದನ್ನು ಇಲ್ಲಿ ಗಮನಿಸಬೇಕಾಗಿದೆ.

**ಎಂ.ಎಂ. ಕಲಬುರ್ಗಿ**ಯವರು ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ ಈ ಶರಣರನ್ನು ಒಳಗೊಂಡಂತೆ ಎಂಟಕ್ಕೂ ಹೆಚ್ಚು ಲೇಖನಗಳನ್ನು ರಚಿಸಿದ್ದಾರೆ. ಅವುಗಳನ್ನು ಅಧ್ಯಯನದಲ್ಲಿ ಬಳಸಿಕೊಳಲಾಗಿದ್ದು ವಿಷಯ ಮರು ಪ್ರಸ್ತಾಪದ ಧೋರಣೆಯ ಸಮಸ್ಯೆಯಿಂದ ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಚರ್ಚಿಸಲಾಗಿದೆ. **ಎಂ.ಎಂ. ಕಲಬುರ್ಗಿ** ಅವರ ಮಾರ್ಗ ೧ ಸಂಪುಟದ ಒಂದು ಲೇಖನ **'ಲಕುಲೀಶಪಾಶುಪತರು ಮತ್ತು ವಚನಸಾಹಿತ್ಯ'**. ಇಲ್ಲಿ ಲೇಖಕರು ವಿಶೇಷವಾದ ಚರ್ಚೆಯನ್ನು ಮಂಡಿಸಿದ್ದಾರೆ. ವಚನ ಸಾಹಿತ್ಯದ ಸೃಷ್ಟಿಯ ಮೂಲದ ಪ್ರಶ್ನೆಯನ್ನು ಎತ್ತಿ ಜೇಡರದಾಸಿಮಯ್ಯನಿಗೆ ಪೂರ್ವದಲ್ಲಿ ವಚನ ರಚನಾ ಕಾರ್ಯ ನಡೆದಿತ್ತು ಎಂಬುದು ನಿರ್ಧರಿತವಾಗಿದೆ. ಬಹುಶಃ ಇದರ ಪ್ರವರ್ತಕರು ನಕುಲೀಶ ಪಾಶುಪತರು. ಮುಂದೆ ಈ ಸಾಹಿತ್ಯ ಸೃಷ್ಟಿಯಲ್ಲಿ ಶರಣರೂ ಸಹಭಾಗಿಗಳಾದರು ಎಂದೆನಿಸುತ್ತದೆ ಎಂಬ ವಿಚಾರ ಮಂಡಿಸುತ್ತಾರೆ.

ಮುಂದುವರೆದು ಉತ್ತರೇಶ್ವರ ಲಿಂಗದ ಪ್ರತಿಷ್ಠಾಪಕನಾಗಿರುವ ದೇವರದಾಸಿಮಯ್ಯನ ವಚನಗಳು ದೊರೆಯದ ಕಾರಣ ಅವನನ್ನು ಕೈಬಿಟ್ಟು, ಸೋಮನಾಥ ಲಿಂಗಾರಾಧಕ ಕೇಶಿರಾಜ

ಮತ್ತು ರಾಮನಾಥ ಲಿಂಗರಾಧಕ ಜೇಡರದಾಸಿಮಯ್ಯಗಳ ಮತಸ್ವರೂಪ ಮತ್ತು ಸಾಹಿತ್ಯ ನಿರ್ಮಿತಿಗಳನ್ನು ವಿವೇಚಿಸಿರುವುದಾಗಿಯೂ ಲೇಖನದಲ್ಲಿ ಹೇಳುತ್ತಾರೆ. ಈ ವಿವೇಚನೆಯ ಒಟ್ಟು ಸಾರವು ಕೆಳಗಿನಂತಿದೆ. ಕೇಶಿರಾಜನ ತಂದೆ ನಿಂಬಣದಂಡನಾಥನು ಕಾಳಮುಖ ಪರಂಪರೆಯ ಗುರು ಹಿರಿಯರಿಗೆ ದತ್ತಿ ನೀಡಿದರ ಬಗ್ಗೆ ವಿವರಿಸುತ್ತಾ, ಕೇಶಿರಾಜನ ವಂಶಸ್ಥರು ಕಾಳಮುಖ ಅಂದರೆ ನಕುಲೀಶಪಾಶುಪತ ಪಂಥದವರೆಂದು ಸ್ಪಷ್ಟಪಡಿಸುತ್ತಾರೆ. ದಾಸಿಮಯ್ಯನ ಗೊಬ್ಬೂರು, ಚಿಕ್ಕಮುದನೂರು ಶಾಸನಗಳಲ್ಲಿ ಬರುವ ಗುಜ್ಜೇಶ್ವರ, ಲಕ್ಷ್ಮಣೇಶ್ವರ, ಬಲ್ಲಜೀಯ ಎಂಬ ಹೆಸರುಗಳು ದಾಸಿಮಯ್ಯ ನಕುಲೀಶ ಪಾಶುಪತ ಸಂಪ್ರದಾಯದವನೆಂಬುದಕ್ಕೆ ಸಾಕ್ಷಿಯಾಗಿವೆ ಎಂದು ಸಾಧಿಸುತ್ತಾರೆ.

ಇಲ್ಲಿ ಗಮನಿಸಬೇಕಾದ ಅಂಶಗಳೆಂದರೆ, ಮೇಲಿನ ದಾಖಲೆಗಳು ಸೋಮನಾಥ ಅಂಕಿತದ ಕೇಶಿರಾಜನನ್ನು ನಕುಲೀಶಪಾಶುಪತ ಪಂಥದವನೆಂದು ಕರೆದು ಅವನನ್ನು ಆದ್ಯ ಪ್ರವರ್ತಕರಲ್ಲಿ ಒಬ್ಬನೆಂದು ನಿರೂಪಿಸಲಾಗುದೆ. ೧೨ನೇ ಶತಮಾನದ ಹುಳಿಯಮೇಶ್ವರ, ಚಿಕ್ಕಯ್ಯ, ಏಕಾಂತ ರಾಮಯ್ಯ ಮೊದಲಾದವರು ನಕುಲೀಶ ಪಾಶುಪತರು. ಲಿಂಗಾಯತನಾಗುವ ಪೂರ್ವದಲ್ಲಿ ಸಿದ್ಧರಾಮ ಬಹುಶಃ ನಕುಲೀಶ ಪಾಶುಪತನಾಗಿದ್ದು ಆ ಅವಧಿಯಲ್ಲೇ ಅವನು ಕೆಲವು ವಚನಗಳನ್ನು ಬರೆದಿರುವ ಸಾಧ್ಯತೆಯಿದೆ[೫೨] ಎಂದು ಹೇಳುವ ಮೂಲಕ ವಚನಕಾರರ ಅಂಕಿತಕ್ಕೂ, ನಕುಲೀಶಪಶುಪತ ಆಚರಣೆಗೂ ಸಂಬಂಧವನ್ನು ಕಲ್ಪಿಸುತ್ತಾರೆ. ವಚನಕಾರರ ಅಂಕಿತಗಳೆಲ್ಲವೂ ಸ್ಥಾವರ ಲಿಂಗದಿಂದ ಪ್ರಚುರವಾದವುಗಳೆ ಎಂಬ ನಿರ್ಧಾರವನ್ನು ನೀಡುತ್ತಾ, ಶರಣರ ಅಂಕಿತದ ದೈವಗಳು ಸ್ಥಾವರಲಿಂಗಗಳಾಗಿದ್ದುವೆಂದು ಉದಾಹರಿಸುತ್ತಾರೆ. ಈ ಎಲ್ಲಾ ಅಂಶಗಳಿಂದ ಶರಣರ ಅಂಕಿತ ಪದ್ಧತಿ ಸ್ಥಾವರಲಿಂಗದಿಂದಲೇ ಪ್ರಚೋದಿತವಾಗಿದ್ದು, ವಚನಗಳ ಅಂಕಿತಗಳು ಇಷ್ಟಲಿಂಗದ ಸ್ವರೂಪ ಪಡೆದವು. ಶರಣರ ಗ್ರಾಮಗಳಲ್ಲಿ ದೊರೆಯುವ ಅಂಕಿತಸೂಚಿ ಸ್ಥಾವರಲಿಂಗಗಳನ್ನು ಇಲ್ಲಿ ಆಧಾರವಾಗಿ ಲೇಖಕರು ಪಡೆಯುತ್ತಾರೆ. ಜೇಡರದಾಸಿಮಯ್ಯನ ರಾಮನಾಥ, ಸಿದ್ಧರಾಮನ ಕಪಿಲಸಿದ್ಧ ಮಲ್ಲಿಕಾರ್ಜುನ ಅಂಕಿತಗಳನ್ನು ಉದಾಹರಿಸುತ್ತಾರೆ. ಈ ಲೇಖನದ ಮಟ್ಟಿಗೆ ಅಂಕಿತ ಪದ್ಧತಿ ಮೊದಲುಗೊಂಡ ವಿಚಾರದ ಚರ್ಚೆ ಸ್ಪಷ್ಟವಾಗುತ್ತದೆ. ಅಂತೆಯೇ ಅದರ ನಡೆ ಹಾಗೂ ಮುಂದಿನ ಬದಲಾವಣೆಗಳನ್ನು ಲೇಖಕರು ಇಲ್ಲಿ ವಿವರಿಸುತ್ತಾರೆ.

ವಚನ ರಚನೆಯ ಹವ್ಯಾಸ ಅಥವಾ ಪದ್ಧತಿ ಶರಣರಿಗೆ ದೊರೆತದ್ದು ಈ ನಕುಲೀಶ ಪಾಶುಪತದಿಂದದಲೇ, ಲಿಂಗಾಯತ ಧರ್ಮವಾಗಿ ಬೆಳೆದಂತೆ ಹಿಂದಿನ ಎಲ್ಲ ಆಚರಣೆಗಳು ಮುಂದಿನದಕ್ಕೆ ಹೊಂದಿಸಿಕೊಂಡು ನಡೆದವು ಎಂಬುದನ್ನು ಸ್ಪಷ್ಟಪಡಿಸುತ್ತಾರೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಲೇಖಕರ ಇನ್ನೆರಡು ಲೇಖನಗಳು ಮಾರ್ಗ ಸಂಪುಟದಲ್ಲಿಯೇ ದೊರೆಯುತ್ತವೆ.

ಒಂದು **"ಇಷ್ಟಲಿಂಗ"** ಎಂಬ ಲೇಖನ(ಇದನ್ನು ಇದೇ ಅಧ್ಯಾಯದ ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ). ಇನ್ನೊಂದು **'ಅಭಿನವ ಪಾಶುಪತ ಮತ್ತು ವೀರಶೈವ'** ಎಂಬ ಲೇಖನ.

**'ಅಭಿನವ ಪಾಶುಪತ ಮತ್ತು ವೀರಶೈವ'** ಎಂಬ ಲೇಖನದಲ್ಲಿ ಜೇಡರದಾಸಿಮಯ್ಯನ ಕುರಿತ ಮತ್ತಷ್ಟು ವಿಚಾರಗಳ ಸ್ಪಷ್ಟೀಕರಣವಿದೆ. ಲೇಖಕರ ಅಭಿಮತದಂತೆ ಲಕುಲೀಶ ಪರಂಪರೆಯ ಗುರು ಮಲೆಯಾಳ ಪಂಡಿತ. ಬೆಣ್ಣೆಕಲ್ಲು ಶಾಸನ ಆತನನ್ನು 'ಮುದಿನೀರ ಮಲೆಯಾಳ ಪಂಡಿತ'ನೆಂದು, ಹೂವಿನಹಡಗಲಿ ಶಾಸನ 'ಮುದಿನೀರ ತೀರ್ಥದ ರಾಮೇಶ್ವರದ ಮಲೆಯಾಳ ಪಂಡಿತ'ನೆಂದು ಕರೆಯುತ್ತವೆ. ಈ ಎರಡೂ ಶಾಸನಗಳು ಮುದಿನೀರ ಅಥವಾ ಮುದಿನೀರ ತೀರ್ಥದ ರಾಮೇಶ್ವರದವನು ಎಂಬುದನ್ನು ಸೂಚಿಸುತ್ತವೆ ಎಂದು ದೃಢೀಕರಿಸುತ್ತಾರೆ. ಕಪಟ್ರಾಳ ಕೃಷ್ಣರಾಯರ ಊಹೆಯಂತೆ "ಮುದಿನೀರ ರಾಮೇಶ್ವರವೆಂದರೆ ಭಾರತದ ದಕ್ಷಿಣಕ್ಕೆ ಹಿಂದೂ ಮಹಾಸಾಗರದ ತೀರದಲ್ಲಿರುವ ರಾಮೇಶ್ವರ"[೫೩] ಎಂಬ ವಾದವನ್ನು ಒಡೆದು ಹಾಕಿ, ಅದು ಈಗಿನ ಗುಲಬರ್ಗ ಜಿಲ್ಲೆಯ ಮುದನೂರು, ದಕ್ಷಿಣ ವಾರಣಾಸಿ ಎಂದು ಹೆಸರಾದ ಊರು ಎಂದು ಸ್ಪಷ್ಟೀಕರಣ ನೀಡುತ್ತಾರೆ. ಕಪಟ್ರಾಳರು ದಾಖಲಿಸಿದ ಜಲಾಶಯದ ತಟದಲ್ಲಿ ನೆಲೆಗೊಂಡ ದೈವ ರಾಮೇಶ್ವರ. ಮುದನೂರಿನಲ್ಲಿಯೂ ರಾಮೇಶ್ವರ ದೇವಾಲಯವಿದೆ. ಇದು ಪ್ರಸಿದ್ಧವಾದ ಸಮುದ್ರ ತೀರದ ರಾಮೇಶ್ವರವಲ್ಲ; ಮುದನೂರಿನ ರಾಮೇಶ್ವರ ಎಂದು ಗುರುತಿಸಿ ಮಲೆಯಾಳ ಪಂಡಿತ ಮುದನೂರಿನವನು ಎಂದು ಗುರುತಿಸುತ್ತಾರೆ.

ಈ ವಾದವನ್ನು ಒಪ್ಪಬಹುದಾದರೆ ಜೇಡರದಾಸಿಮಯ್ಯ ಲಕುಲೀಶ ಪಾಶುಪತದ ಪ್ರಭಾವದಿಂದ ನುಸುಳಿರಲು ಸಾಧ್ಯವಿಲ್ಲ. ಅಂದರೆ ಒಂದಿಷ್ಟಾದರೂ ಅದರ ಪ್ರಭಾವಕ್ಕೆ ಒಳಗಾದವನೇ ಆಗಿರುತ್ತಾನೆಂಬುದು ಸ್ಪಷ್ಟ. ಇದೇ ಆಧಾರವನ್ನು ಹಿಡಿದು ಹೇಳುವುದಾದರೆ, ಜೇಡರ ದಾಸಿಮಯ್ಯನನ್ನು ಉಲ್ಲೇಖಿಸಿರುವ ಶಾಸನಗಳಲ್ಲಿ ಲಕುಲೀಶ ಪಾಶುಪತ ಸೂಚಿತ ಪದಗಳಿದ್ದು ಗುಜ್ಜೇಶ್ವರ, ಲಕ್ಷ್ಮಣೇಶ್ವರ, ಬಲ್ಲಜೀಯ ಮೊದಲಾದವು ಕಂಡು ಬರುತ್ತವೆ ಎಂಬ ಆಧಾರಗಳ ಮೂಲಕ "ಸುಮಾರು ೧೧೧೬ ಪೂರ್ವದಲ್ಲಿಯೇ ಲಕುಲೀಶ ಪಾಶುಪತ ಧರ್ಮ ಅಭಿನತ್ವದ ಕಡೆಗೆ ಹೊರಳಿದ್ದಿತೆಂದು"[೫೪] ಸ್ಪಷ್ಟಪಡಿಸುತ್ತಾರೆ. ಹೀಗೆ ಲಕುಲೀಶ ಪಾಶುಪತದ ಸುಧಾರಣ ಅಂಶಗಳು ಪ್ರಾರಂಭವಾಗಿ ಅಭಿನವ ಪಾಶುಪತವಾಗಿ ಮಾರ್ಪಡುವ ಹೊತ್ತಿಗೆ ಹಲವು ಶರಣರು ತಮ್ಮ ಅಸ್ತಿತ್ವವನ್ನು ಗುರುತಿಸಿಕೊಂಡಿದ್ದರು. ಅವರುಗಳಲ್ಲಿ ಜೇಡರದಾಸಿಮಯ್ಯ, ಏಕಾಂತ ರಾಮಯ್ಯ, ಆದಯ್ಯ, ಚಿಕ್ಕಯ್ಯ ಮೊದಲಾದವರು. ಆದರೆ ಈ ಶರಣರು ಮಾತ್ರ ಕೊನೆಯವರೆಗೂ ಲಕುಲೀಶ ಪಾಶುಪತರಾಗೆ ಉಳಿದಂತೆ ತೋರುತ್ತದೆ ಎಂದು ತಮ್ಮ ಚರ್ಚೆಯನ್ನು ಲೇಖನದಲ್ಲಿ ತಂದಿದ್ದಾರೆ.

ಲೇಖಕರ ಈ ವಾದವನ್ನು ಗಮನಿಸಿದಾಗ ಸ್ಪಷ್ಟವಾಗುವ ಸಂಗತಿಗಳು ಹಲವು. ಒಂದನೆಯದು ಜೇಡರದಾಸಿಮಯ್ಯನ ಊರು ಮುದನೂರು. ಇದು ನಕುಲೀಶ ಪಾಶುಪತ ಪಂಥದ ಕೇಂದ್ರ ಸ್ಥಳ. ಜೇಡರದಾಸಿಮಯ್ಯನು ಈ ಪಂಥದ ಪ್ರಭಾವದಿಂದ ಹೊರತಾದವನಲ್ಲ. ಹಿಂದಿನ ಲೇಖನದ ಆಧಾರದಂತೆ ಇಷ್ಟಲಿಂಗದ ಕಲ್ಪನೆ ರೂಪ ಪಡೆದದ್ದು ಅಭಿನವ ಪಾಶುಪತ ಅಥವಾ ವೀರಶೈವದಲ್ಲಿ ಎಂದಿಟ್ಟುಕೊಳ್ಳಬಹುದು. ಈ ಎಲ್ಲ ಅಂಶಗಳು ಜೇಡರದಾಸಿಮಯ್ಯನ ವ್ಯಕ್ತಿತ್ವದ ಹಲವು ಸಂಗತಿಗಳನ್ನು ತಿಳಿಸಿಕೊಡುತ್ತವೆ. ಎಂ.ಎಂ.ಕಲಬುರ್ಗಿ ಹಾಗೂ ಎಂ.ಚಿದಾನಂದಮೂರ್ತಿ ಯವರ ವಾದದಂತೆ ಜೇಡರದಾಸಿಮಯ್ಯ, ದೇವರದಾಸಿಮಯ್ಯ, ಭಿನ್ನರು ಹಾಗೂ ಈ ಇಬ್ಬರ ಊರು ಮುದನೂರು ಆಗಿರಬಹುದು ಅಥವಾ ದೇವರದಾಸಿಮಯ್ಯನ ಊರು ಮುದನೂರು ಸಮೀಪದ ದೇವೂರು ಆಗಿರಬಹುದು ಎಂಬ ಊಹೆಗಳಿಗೆ ಇಂಬುದೊರೆಯುತ್ತದೆ.

ದೇವರದಾಸಿಮಯ್ಯ ಉತ್ತರ ಕರ್ನಾಟಕದ ಸುರಪುರ ಭಾಗದ ಶೈವ ಶರಣ. ಜೇಡರದಾಸಿಮಯ್ಯನೂ ಇದಕ್ಕೆ ಹೊರತಲ್ಲ. ಮೊದಲಿನಾತ ಸನ್ಯಾಸಿ ಎರಡನೆಯವನು ಸಂಸಾರಿ. ಒಂದು ಪ್ರದೇಶದ ವಿಚಾರಗಳು ಅಥವಾ ಬದಲಾವಣೆಯ ಪ್ರಯತ್ನಗಳು ಆ ಭಾಗದ ಎಲ್ಲ ಜನರ ಮೇಲೆ ಪ್ರಭಾವ ಬೀರುತ್ತವೆ ಎಂಬುದು ಸತ್ಯ. ಹೀಗೆ ನಕುಲೀಶ ಪಾಶುಪತವೆಂಬ ಶೈವ ಶಾಖೆಯ ಪ್ರಭಾವದಿಂದ ಪ್ರತ್ಯೇಕ ವ್ಯಕ್ತಿತ್ವ ಸಾಧಿಸಿದವರು ಈ ಇಬ್ಬರು ಶರಣರು ಎನ್ನಬಹುದು.

**ಎಂ. ಎಂ. ಕಲಬುರ್ಗಿ** ಅವರ ಮಾರ್ಗ-೧ರ ಮತ್ತೊಂದು ಲೇಖನ **'ದೇವರ ದಾಸಿಮಯ್ಯ'**. ಈ ಲೇಖನದಲ್ಲಿ ಲೇಖಕರು ದೇವರದಾಸಿಮಯ್ಯ, ಜೇಡರದಾಸಿಮಯ್ಯರು ಭಿನ್ನರು ಎಂಬುದಕ್ಕೆ ಕೆಲವು ಆಧಾರಗಳ ಸಹಿತ ವಿವರಗಳನ್ನು ಮಂಡಿಸುತ್ತಾರೆ. ಈ ಇಬ್ಬರ ಬಗೆಗಿನ ಚರ್ಚೆಗಳ ಪ್ರಮುಖ ಅಂಶಗಳು ಮುಂದಿನಂತಿವೆ.

- ಒಬ್ಬ ಘಟಸರ್ಪ ಪವಾಡ ಮೆರೆದವ, ಮತ್ತೊಬ್ಬ ತವನಿಧಿ ಪವಾಡ ಮೆರೆದವ ಇಬ್ಬರ ನಡುವೆ ಸುಮಾರು ಒಂದು ನೂರು ವರ್ಷದ ಅಂತರವಿದೆ ಎನ್ನುವುದು ಲೇಖಕರ ಅಭಿಮತ. ವ್ಯಕ್ತಿನಾಮದೊಂದಿಗೆ ವೃತ್ತಿನಾಮ ಮತ್ತು ಗ್ರಾಮನಾಮಗಳು ವಿಶೇಷವಾಗಿ ಬಂದು ಸೇರುವ ಪ್ರಾಚೀನ ಕಾಲದ ನಾಮ ಪರಂಪರೆಯನ್ನು 'ದೇವರು' ಎಂಬ ವಿಶೇಷಣವನ್ನು ಆಧರಿಸಿ ಇಲ್ಲಿ ಚರ್ಚಿಸಿದ್ದಾರೆ. ಅವುಗಳನ್ನು ಹೀಗೆ ಸಾದರಪಡಿಸುತ್ತಾರೆ; ಒಂದು ದೇವಾಲಯ ಅರ್ಥದ ದೇಹಾರ ಅಥವಾ ದೇವಾರ ಎಂಬ ಪದಗಳ ರೂಪಾಂತರ, ದೇವಾರ> ದೇವರ ಎಂದಾಗಿರಬಹುದಾದ ಊಹೆ. ಎರಡನೆಯದು ದೇವೂರು ಎಂಬುದು

ಅಂದರೆ ದೇವೂರ ದಾಸಿಮಯ್ಯ ಎನ್ನುವುದು ದೇವರದಾಸಿಮಯ್ಯ ಎಂದಾಗಿರಬಹುದು ಎಂಬುದು ಮತ್ತೊಂದು ಊಹೆ.

- ಇದಕ್ಕೆ ಆಧಾರವಾಗಿ ಎಂ.ಎಂ. ಕಲಬುರ್ಗಿಯವರು ಸುಗ್ಗಲಾದೇವಿಯ ಶಾಸನದೊರೆತ ದೇವೂರನ್ನು ನೀಡುತ್ತಾರೆ. ಇದು ಆಕೆಯ ಗುರು ದೇವರದಾಸಿಮಯ್ಯನ ಊರಾಗಿದ್ದು ಊರಿನ ದೆಸೆಯಿಂದ ದಾಸಿಮಯ್ಯನಿಗೆ ದೇವೂರ ದಾಸಿಮಯ್ಯ ಎಂಬ ಹೆಸರು ಬಂದಿದ್ದು ನಂತರ ಅದೇ ದೇವರದಾಸಿಮಯ್ಯ ಎಂದಾಗಿರಬಹುದೆಂದು ಸ್ಪಷ್ಟೀಕರಿಸುತ್ತಾರೆ. ಇಬ್ಬರು ದಾಸಿಮಯ್ಯರಲ್ಲಿ ಒಬ್ಬನನ್ನು ಮುದನೂರ ದಾಸಿಮಯ್ಯ(ಜೇಡರದಾಸಿಮಯ್ಯ) ಇನ್ನೊಬ್ಬನನ್ನು ದೇವೂರದಾಸಿಮಯ್ಯ(ದೇವರದಾಸಿಮಯ್ಯ) ಎಂದು ಗ್ರಾಮವಾಚಿಯಾಗಿ ಕರೆಯುವುದು ಹೆಚ್ಚು ವಾಸ್ತವವೆನಿಸುತ್ತದೆ. ಇದು ಸತ್ಯವಾದರೆ ಜೇಡರದಾಸಿಮಯ್ಯ, ದೇವರದಾಸಿಮಯ್ಯ ಇಬ್ಬರೂ ಬೇರೆಯೆಂದು ವಾದಿಸುವವರಿಗೆ ಹೊಸ ಆಧಾರ ಲಭಿಸಿದಂತಾಗಿದೆ[೨೫] ಎಂದು ಹೊಸ ಆಧಾರವನ್ನು ನೀಡುತ್ತಾರೆ. ಇದು ನೈಜತೆಗೆ ಹತ್ತಿರವಾದುದು ಮತ್ತು ಊಹೆಗೆ ನಿಲುಕುವಂತಹದ್ದು ಆಗಿದೆ. ಭಾಷಾ ಬೆಳವಣಿಗೆಯ ಹಂತಗಳನ್ನನುಸರಿಸಿ ಗ್ರಾಮ ನಾಮಗಳು, ಸ್ಥಳನಾಮಗಳು ರೂಢಿ, ಆಚರಣೆಗಳಿಂದ ಬದಲಾದ ಹಲವು ಉದಾಹರಣೆಗಳನ್ನು ನೋಡಲಾಗುತ್ತದೆ. ಅಂತಹದ್ದೆ ಸಾಧ್ಯತೆಯ ಕುರುಹಾಗಿ ಲೇಖಕರು ಸೂಚಿಸಿದ ಆಧಾರವು ಸ್ವೀಕಾರಾರ್ಹವೆಂದು ತೋರುತ್ತದೆ. ಈಗಲೂ ಆ ರೀತಿಯ ಗ್ರಾಮನಾಮಗಳೇ ವ್ಯಕ್ತಿಗಳ ನಾಮಗಳಲ್ಲಿ ಬೆರೆತು ಹೆಸರಿನ ಭಾಗವಾಗಿ ಕರೆಯಲ್ಪಡುತ್ತವೆ. ಈ ಗೊಂದಲದಿಂದಲೇ ಗಂಗಮ್ಮ ಸತ್ಯಂ ಪೇಟೆಯವರು ತಮ್ಮ ಸಂಶೋಧನಾ ಪ್ರಬಂಧದ ಶೀರ್ಷಿಕೆ ಮುದನೂರು ದಾಸಿಮಯ್ಯ ಒಂದು ಅಧ್ಯಯನ ಎಂದು ಇಟ್ಟುಕೊಂಡಿರಬೇಕು.

**ಎಂ. ಎಂ. ಕಲುಬುರ್ಗಿಯವರ ಮಾರ್ಗ ಸಂಪುಟದ 'ಬಸವಣ್ಣನವರು ಗಮನಿಸಿದ ಜೇಡರದಾಸಿಮಯ್ಯನ ಎರಡು ವಿಶೇಷ ಅಂಶಗಳು'** ಎಂಬ ಲೇಖನದಲ್ಲಿ ಬಸವಣ್ಣನು ಜೇಡರದಾಸಿಮಯ್ಯನಲ್ಲಿ ಗುರುತಿಸುವ ಪ್ರಮುಖವಾದ ಎರಡು ಅಂಶಗಳನ್ನು ವಿವರಿಸುತ್ತಾರೆ.

- ಮೊದಲನೆಯದು ಬಸವಣ್ಣನು ಇತರ ವಚನಕಾರರು ಮತ್ತು ಶರಣರೊಂದಿಗೆ ದಾಸಿಮಯ್ಯನನ್ನು ಪ್ರಸ್ತುತ ಪಡಿಸಿರುವುದು. ಅದರಲ್ಲಿಯೂ ಎಲ್ಲ ಭಕ್ತರಂತೆ ದಾಸಿಮಯ್ಯನೂ ಸಹ ಉಗ್ರಭಕ್ತಿಯಿಂದ ದೇವರನ್ನು ಒಲಿಸಿಕೊಂಡದ್ದು ಭಯ ಸ್ವರೂಪದ ಭಕ್ತಿಯ ತೀವ್ರತೆಯಿಂದ ಎಂದು ತೋರುತ್ತದೆ. ಸಿರಿಯಾಳ ಬಲ್ಲಾಳರಂತ ತೀವ್ರ ಭಕ್ತಿ ದಾಸಿಮಯ್ಯನದಾಗಿರಲಿಲ್ಲ. ಆದರೂ ಇವರ ಸಾಲಿನಲ್ಲಿ ದಾಸಿಮಯ್ಯನು ಸ್ಥಾನ ಪಡೆಯಬೇಕಾದರೆ ಆತನದೂ ಕಠೋರ ಭಕ್ತಿಯೇ ಆಗಿರಬೇಕು. ಆತ ಕೊಟ್ಟದು ನೇಯ್ದು ವಸ್ತ್ರವೋ? ತೊಟ್ಟವಸ್ತ್ರವೋ?

ಎಂಬ ಪ್ರಶ್ನೆಯನ್ನಿಟ್ಟುಕೊಂಡು ಚರ್ಚಿಸಿದ್ದಾರೆ. ದಾಸಿಮಯ್ಯನು ವಿಪರೀತಚರಿತನಾಗಬೇಕಾದರೆ ಆತ ಉಟ್ಟಬಟ್ಟೆಯನ್ನು ಶಿವನಿಗೆ ಕೊಟ್ಟು ತಾನು ಬೆತ್ತಲೆಯಾಗುವುದನ್ನು ಯೋಚಿಸಿದ್ದಿರಬೇಕು. ಆದ್ದರಿಂದ ಆತ ಚರಿತ್ರೆಯಲ್ಲಿ ಮಹಾಭಕ್ತನಾಗಿ, ಪವಾಡ ಪುರುಷನಾಗಿ ಕಂಡುಬಂದಿದ್ದಾನೆ. ಇದು ೧೨ನೇ ಶತಮಾನಕ್ಕಾಗಲೇ (ಅಬಲೂರು ಶಾಸನದ ಕಾಲಕ್ಕಾಗಲೆ) ನಿಜ ಚರಿತ್ರೆಯಾಗಿ ಬದಲಾಗಿ ಪೌರಾಣಿಕ ಆಯಾಮವನ್ನು ಪಡೆದುಕೊಂಡಿರಬೇಕು ಎಂಬ ಊಹೆಯನ್ನು ಲೇಖಕರು ಓದುಗರ ಮುಂದಿಡುತ್ತಾರೆ.

- ಎರಡನೆಯದಾಗಿ ದಾಸಿಮಯ್ಯನೊಂದಿಗೆ ಹೆಸರಿಸಿದ ಎಲ್ಲ ಶರಣರು ಕೀಳುಕುಲದವರು. ಅವರೊಂದಿಗೆ ದಾಸಿಮಯ್ಯನನ್ನು ಹೆಸರಿಸುವುದನ್ನು ನೋಡಿದರೆ ಆತನ ಜೇಡ ಕುಲವು ೧೨ನೇ ಶತಮಾನದಲ್ಲಿ ಕೀಳುಕುಲವೇ ಆಗಿದ್ದಿರಬೇಕು. ನಂತರ ಸಾಮಾಜಿಕ ಅಂತಸ್ತು ಸ್ಥಿತ್ಯಂತರಗೊಂಡು ಮೇಲ್ಮೆಯನ್ನು ಪಡೆದಿರಬೇಕೆಂದು ಆಧಾರಗಳನ್ನು ನೀಡಿರುತ್ತಾರೆ. ಇವರ ಆಧಾರಗಳಿಗೆ ಸರಿ ಹೊಂದುವಂತೆ ಬಸವಣ್ಣನ ಒಂದು ವಚನವೂ ಇದೆ. 'ಕೀಳುಕುಲದಲ್ಲಿ ಹುಟ್ಟಿದನೆಂದು ಕಷ್ಟತನದ ಹೊರೆಯ ಹೊರಿಸಿದರಯ್ಯ' ಎಂಬ ವಚನವು ಇದನ್ನೆ ಹೇಳುತ್ತದೆ. ಅಂತೆಯೇ ದಾಸಿಮಯ್ಯನನ್ನು ಪದೇ ಪದೇ ಬಸವಣ್ಣನು ನೆನೆಯುವುದರ ಮೂಲ ಉದ್ದೇಶವೂ ಇದೇ ಆಗಿರಬೇಕು. ವಿಶೇಷವೆಂದರೆ ದಾಸಿಮಯ್ಯ ಉಲ್ಲೇಖಿಸಿದ ಕೆಂಬಾವಿ ಭೋಗಯ್ಯನನ್ನು ಬಸವಣ್ಣ ನೆನೆಯುವುದಿಲ್ಲ. ಭೋಗಯ್ಯ ಮೇಲುಕುಲದವನೇ ಆದುದರಿಂದ ಆತನ ಭಕ್ತಿಯ ಹರವನ್ನು ಬಸವಣ್ಣ ತನ್ನೊಂದಿಗೆ ಸಮನ್ವಯಗೊಳಿಸಿಕೊಂಡು ಆತನನ್ನೂ (ಬಸವಣ್ಣನನ್ನು) ಉನ್ನತ ಮಟ್ಟಕೊಯ್ಯಿ ಎಂದು ಸ್ವತಃ ಪ್ರಾರ್ಥಿಸುತ್ತಾನೆ ಎಂದು ಹೇಳುವ ಮೂಲಕ ಲೇಖಕರು ಬಸವಣ್ಣನು ದಾಸಿಮಯ್ಯನನ್ನು ತನ್ನ ವಚನಗಳಲ್ಲಿ ಉಲ್ಲೇಖಿಸಿದ ಉದ್ದೇಶಗಳನ್ನು ಇಲ್ಲಿ ಸ್ಪಷ್ಟಪಡಿಸುತ್ತಾರೆ.

**'ಇಷ್ಟಲಿಂಗ'** ಎಂಬ ಲೇಖನದಲ್ಲಿ **ಎಂ.ಎಂ.ಕಲಬುರ್ಗಿಯವರು** ಇಷ್ಟಲಿಂಗ ಪರಿಕಲ್ಪನೆ ಬಂದುದು ಲಕುಲೀಶ ಪಾಶುಪತ ಪರಂಪರೆಯಿಂದ. ವಚನಕಾರರು ಅವರನ್ನೇ ಅನುಕರಣೆ ಮಾಡಿದ್ದಾರೆ ಎನ್ನುವ ವಿಚಾರಗಳನ್ನು ಮಂಡಿಸಿದ್ದಾರೆ. ಸ್ಥಾವರಲಿಂಗವೇ ವ್ಯಕ್ತಿಯ ಸ್ಥಳ ಬದಲಾವಣೆ ಯನ್ನನುಸರಿಸಿ ಇಷ್ಟಲಿಂಗವೆನಿಸಿಕೊಂಡಿತು. ಅದೇ ಕೊನೆಗೆ ಶರೀರದ ಮೇಲೆ ನೆಲೆಸಿ, ಕರದಲ್ಲಿಯೂ ಪೂಜಿಸಲ್ಪಟ್ಟಿತು. ಸ್ಥಾವರಲಿಂಗದ ಹೆಸರನ್ನು ವಚನಕಾರರು ಅಂಕಿತವಾಗಿ ಇಟ್ಟುಕೊಂಡು ತಮ್ಮ ಭಕ್ತಿಯ ಪರಾಕಾಷ್ಠೆಯನ್ನು ಮೆರೆಯುತ್ತಿದ್ದರು. ಅಂತೆಯೇ ಹುಳಿಯಮೇಶ್ವರ ಚಿಕ್ಕಯ್ಯ ಪಂಡಿತ, ಜೇಡರದಾಸಿಮಯ್ಯ, ಸಿದ್ದರಾಮ ಮೊದಲಾದವರ ಅಂಕಿತಗಳು ಅವರ

ಊರಿನ ಸ್ಥಾವರಲಿಂಗಗಳು. ಅವರುಗಳ ಸಂಚಾರದಿಂದ ಇಷ್ಟಲಿಂಗಗಳಾಗಿ ಅಂಕಿತ ದೈವಗಳೂ ಆದವು ಎನ್ನುವುದು ಲೇಖಕರ ಅಭಿಪ್ರಾಯ. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಹುಳಿಯಮೇಶ್ವರ ಚಿಕ್ಕಯ್ಯ ಪಂಡಿತ. ಈತ ಒಬ್ಬ ಲಕುಲೀಶ ಪಾಶುಪತ. ಅಂದರೆ ಲಕುಲೀಶ ಪಾಶುಪತರಿಂದಲೇ ಕರ್ನಾಟಕದ ಮಟ್ಟಿಗೆ ಅಂಕಿತ ಪದ್ಧತಿ ಪ್ರಸಾರಗೊಂಡಿತು ಎಂಬುದು ಲೇಖಕರ ವಿಚಾರ. ಈಗಾಗಲೆ ಈ ವಿಚಾರವನ್ನು ಚರ್ಚಿಸಲಾಗಿದ್ದು, ಇಲ್ಲಿ ಪ್ರಧಾನವಾಗುವ ಅಂಶವೆಂದರೆ ವಚನ ಸಾಹಿತ್ಯದ ಉಗಮ, ಅಂಕಿತಪದ್ಧತಿ ಆಚರಣೆ ಎಲ್ಲವೂ ಶೈವಶಾಖೆಯಾದ ನಕುಲೀಶ ಪಾಶುಪತ ಪಂಥದಿಂದ ಎಂಬುದು ಮಾತ್ರ ಸ್ಪಷ್ಟವಾಗುತ್ತದೆ. ಇದೇ ನಿಜವಾದರೆ ಜೇಡರದಾಸಿಮಯ್ಯನು ಪಾಶುಪತಚಾರಣೆಗೆ ಒಳಗಾದವನು. ಆತನ ಊರು ಮುದನೂರು ಸಹ ಪಾಶುಪತದ ಕೇಂದ್ರ. ದೇವರದಾಸಿಮಯ್ಯನಿಗೂ ಈ ಊರಿನ ಸಂಪರ್ಕವಿತ್ತು ಎಂದು ಸ್ಪಷ್ಟಗೊಳ್ಳುತ್ತದೆ. ಒಟ್ಟಾರೆಯಾಗಿ ಎಂ.ಎಂ.ಕಲಬುರ್ಗಿಯವರ ಎಲ್ಲ ಲೇಖನಗಳು ದಾಸಿಮಯ್ಯನ ಕುರಿತಾದ ಸಂಶೋಧನೆಯ ಹೊಸ ಸಾಧ್ಯತೆಗಳನ್ನು ನೀಡುತ್ತವೆ ಎಂದರೆ ತಪ್ಪಾಗಲಾರದು.

**ಪಿ.ವಿ.ನಾರಾಯಣ** ಅವರ ೧೯೮೨ರಲ್ಲಿ ಪಕಟಗೊಂಡ ಕೃತಿ **'ವಚನ ವ್ಯಾಸಂಗ'**. ಈ ಕೃತಿಯಲ್ಲಿ **'ಬಸವಪೂರ್ವಯುಗದ ವಚನಕಾರರು'** ಎಂಬ ಲೇಖನ ಪ್ರಕಟಗೊಂಡಿದ್ದು, ಈ ಲೇಖನದಲ್ಲಿ ಜೇಡರದಾಸಿಮಯ್ಯ-ದೇವರದಾಸಿಮಯ್ಯ ಅಭಿನ್ನರು ಎಂಬ ಚರ್ಚೆಯ ಮೂಲಕವೇ ಜೇಡರದಾಸಿಮಯ್ಯನ ಕುರಿತ ವಿಚಾರಗಳನ್ನು ಮಂಡಿಸುತ್ತಾರೆ. ಲೇಖಕರು ಶಿವಮೂರ್ತಿಶಾಸ್ತ್ರಿಗಳು, ಎಚ್.ದೇವೀರಪ್ಪನವರು, ಎಂ.ಚಿದಾನಂದಮೂರ್ತಿಯವರ ಅಭಿಪ್ರಾಯಗಳನ್ನು ಸಾಧುವೆಂದು ಪರಿಗಣಿಸಿಯೇ ಮುಂದಿನ ವಿಶ್ಲೇಷಣೆಗೆ ಅಡಿಯಿಡುತ್ತಾರೆ. ಇಲ್ಲಿ ಲೇಖಕರು ಜೇಡರದಾಸಿಮಯ್ಯ ಹೆಸರಿಸಿದ ಕೆಲವು ಶರಣರನ್ನು ಪಟ್ಟಿಮಾಡಿ ಅವರಲ್ಲಿ ವಚನಕಾರರನ್ನು ವಿಂಗಡಿಸಿದ್ದಾರೆ. ಕೊಂಡಗೂಳಿ ಶಾಸನವನ್ನಾಧರಿಸಿ ಜೇಡರದಾಸಿಮಯ್ಯನ ಕಾಲವನ್ನು ಈ ಶಾಸನದ ಕಾಲಕ್ಕೆ ಸಮಾನಗೊಳಿಸುತ್ತಾರೆ. ಆದರೆ ದಾಸಿಮಯ್ಯನ ಕಾಲ ಕ್ರಿಶ ೧೧೦೭ ರಿಂದ ಕ್ರಿ.ಶ. ೧೧೩೨ ಎಂದು ಅವಧಿಯ ಅರಹನ್ನು ಗುರುತಿಸಿದ್ದಾರೆ. ಕಕ್ಕಯ್ಯನ ಪ್ರಸಾದದಿಂದ ಚನ್ನಬಸವಣ್ಣ ಹುಟ್ಟಿದ್ದು ಮತ್ತು ಶಂಕರದಾಸಿಮಯ್ಯನ ವಚನಗಳಲ್ಲಿ ಬಸವಣ್ಣ, ಅಲ್ಲಮರನ್ನು ನೆನೆದಿದ್ದನ್ನು ಕಂಡು ಜೇಡರದಾಸಿಮಯ್ಯ ಇವರ ಸಮಕಾಲೀನನೆಂದು ತೀರ್ಮಾನಕ್ಕೆ ಬರುತ್ತಾರೆ. ಗೊಂದಲ ಪ್ರಾರಂಭವಾದುದರ ಮೂಲ ಬಸವಪುರಾಣ ಎಂದು ಸಾಕ್ಷ್ಯ ಮಂಡಿಸುತ್ತಾರೆ. ಲೇಖಕರು ಕೊಡುವ ಎಲ್ಲಾ ಆಕರಗಳನ್ನು ಗಮನಿಸಿದಾಗ ಜೇಡರದಾಸಿಮಯ್ಯ ವಚನಕಾರ ಎಂದು ಒಪ್ಪಿ, ಆತನ ಕಾಲ ಕ್ರಿಶ ೧೧೬೦ ಮತ್ತು ಈತ ಶಂಕರದಾಸಿಮಯ್ಯನ ಸಮಕಾಲೀನ ಎಂದು ನಿರ್ಧರಿಸಬಹುದಾಗಿದೆ.

**ಎನ್. ಬಸವರಾಧ್ಯ** ಅವರ ೧೯೭೮ರಲ್ಲಿನ 'ಲೇಖನ ಸಂಚಯ' ಕೃತಿಯ ಲೇಖನ **'ಬಸವಪೂರ್ವದ ಕೆಲವು ಶರಣರು'**. ಇದರಲ್ಲಿ ಜೇಡರದಾಸಿಮಯ್ಯನ ಕುರಿತು ಮತ್ತು ಶಂಕರದಾಸಿಮಯ್ಯನ ಕುರಿತು ಚರ್ಚೆಗಳಿವೆ. ಇದನ್ನು ಚರ್ಚೆ ಎನ್ನುವುದಕ್ಕಿಂತಲೂ ಆತನ ಜೀವನದ ಘಟನೆಗಳ ವಿವರಣೆ ಎಂದು ತಿಳಿಯುವುದು ಒಳಿತು. ಸಾಮಾನ್ಯವಾಗಿ ಜೇಡರದಾಸಿಮಯ್ಯನ ಜೀವನವನ್ನು ಕುರಿತಂತೆ ಎಲ್ಲಾ ಅಂಶಗಳನ್ನು ಲೇಖಕರು ವಿವರಿಸುತ್ತಾರೆ. ಜೇಡರದಾಸಿಮಯ್ಯನ ಹುಟ್ಟು, ಚಂದ್ರಗುಂಡ ಶಿವಾಚಾರ್ಯರಿಂದ ದೀಕ್ಷೆಹೊಂದಿ ದಾಸಿಮಾರ್ಯನಾದದ್ದು, ನಂದಿ ಮತ್ತು ಗೌಡಗೆರೆ ಗ್ರಾಮಗಳನ್ನು ಹಾಯ್ದು ಮುದನೂರಿಂದ ಬರುವಾಗ ರೈತರಿಗೆ ಜ್ಞಾನ ಭೋದೆ ಮಾಡಿದುದು. ಅಲ್ಲಿಂದ ಪೊಟ್ಟಲಕೆರೆಗೆ ಬಂದು ಜೈನರನ್ನು ಸತ್ಕರಿಸಿದ್ದು. ನಂತರ ಮುದನೂರಿಗೆ ಬಂದು ನೆಲೆಸಿದ್ದು. ಕ್ರಮವನ್ನು ಅನುಸರಿಸಿ ಇಲ್ಲಿ ವಿವರಿಸಿದ್ದಾರೆ. ಮುಂದಿನ ಘಟನೆ ತವನಿಧಿ ಪಡೆದ ಪವಾಡ ಹೀಗೆ ಕಥೆ ಇಲ್ಲಿ ನಿರೂಪಿತವಾಗಿದೆ. ಈ ಕಥೆಯನ್ನೆ ದೇವರದಾಸಿಮಯ್ಯನ ಕುರಿತ ಪುರಾಣಗಳು ನಿರೂಪಿಸಿವೆ.

ಇದೇ ಲೇಖನದಲ್ಲಿ 'ಶಂಕರದಾಸಿಮಯ್ಯನ' ಕುರಿತು ವಿವರಿಸಿದ್ದಾರೆ. "ಬಸವಪೂರ್ವ ಶರಣರಲ್ಲಿ ಶಂಕರದಾಸಿಮಯ್ಯನೂ ಒಬ್ಬ. ಈತನು ದೇವರದಾಸಿಮಯ್ಯನ ಕಿರಿಯ ಸಮಕಾಲೀನನಾಗಿದ್ದನು. ಈತನ ಕಾಲ ಕ್ರಿ.ಶ.ಸು ೧೦೫೦ ಇದ್ದಿರಬಹುದು. ಧರ್ಮಪ್ರಸಾರಕ್ಕೆ ಜೇಡರದಾಸಿಮಯ್ಯ ಮಾಡಿದ ಕಾರ್ಯ ಒಂದು ತೆರನಾದರೆ ಶಂಕರದಾಸಿಮಯ್ಯ ಮಾಡಿದ ಕಾರ್ಯ ಮತ್ತೊಂದು ತೆರನಾದದು"[೫೬] ಎಂದು ವಿವರಿಸುತ್ತಾರೆ. ಮುಂದುವರೆದು ಶಂಕರದಾಸಿಮಯ್ಯನ ಕುರಿತು ಹೇಳುವಾಗ ಮುದನೂರಿನಲ್ಲಿ ಜೇಡರದಾಸಿಮಯ್ಯ ಮತ್ತು ದುಗ್ಗಳೆಯರನ್ನು ಉದ್ಧರಿಸಿ ತವನಿಧಿಯನ್ನು ಮರಳಿ ದಯಪಾಲಿಸಿದನು. ಅಲ್ಲಿ ನೆಲೆಸಿರುವ ವೇಳೆಗೆ "ಕಲ್ಯಾಣದಲ್ಲಿ ಜಯಸಿಂಹ ರಾಜನಾಗಿದ್ದನು. ಆ ರಾಜ್ಯದಲ್ಲಿ ಜೈನರ ಪ್ರಭಾವ ಬಹಳವಾಗಿತ್ತು. ಕಲ್ಯಾಣದಲ್ಲಿನ ಪರಸಮಯಿಗಳು ಶಂಕರದಾಸಿಮಯ್ಯನನ್ನು ಅಪಮಾನಪಡಿಸ ಬೇಕೆಂದು ಯೋಚಿಸಿ, ರಾಜನಲ್ಲಿ ದೂರು ಹೇಳಿ ಆತನನ್ನು ಆಸ್ಥಾನಕ್ಕೆ ಬರಮಾಡುವಂತೆ ಕೇಳಿಕೊಂಡರು. ಅದರಂತೆ ಜಯಸಿಂಹ ಶಂಕರ ದಾಸಿಮಯ್ಯನಿಗೆ ಹೇಳಿಕಳುಹಿಸಿದನು."[೫೭] ಹೀಗೆ ಕಥೆ ಮುಂದುವರೆಯುತ್ತದೆ. ಅಲ್ಲಿ ಶಂಕರದಾಸಿಮಯ್ಯ ಜೈನರನ್ನೂ, ವೈಷ್ಣವರನ್ನೂ ವಾದದಲ್ಲಿ ಸೋಲಿಸುತ್ತಾನೆ. ಆಗಲೂ ನಂಬದ ರಾಜನೆದುರು ನರಸಿಂಹ ವಿಗ್ರಹವನ್ನು ತನ್ನ ಹಣೆಗಣ್ಣಿನಿಂದ ಸುಟ್ಟು ಬೂದಿ ಮಾಡಿದನೆಂದು ತಿಳಿಯುತ್ತದೆ ಎಂದು ಶಂಕರದಾಸಿಮಯ್ಯನ ಚರಿತ್ರೆಯನ್ನು ನೀಡುತ್ತಾರೆ.

ಇವೆಲ್ಲವನ್ನೂ ಗಮನಿಸಿದಾಗ ಲೇಖಕರು ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ ಇಬ್ಬರನ್ನು ಒಂದೇ ಎಂಬಂತೆ ವಿವರಣೆಗೊಳಿಸಿದ್ದಾರೆ. 'ಜೇಡರದಾಸಿಮಯ್ಯ' ಶೀರ್ಷಿಕೆಯಡಿ ದಾಸಿಮಯ್ಯನ ಚರಿತ್ರೆಯನ್ನು ವಿವರಿಸುವಾಗ ಜಯಸಿಂಹನ ರಾಣಿ ಸುಗ್ಗಲೆಯರನ್ನು ಉದ್ಧರಿಸಿದ್ದು ಪೊಟ್ಟಲಕೆರೆಯಲ್ಲಿ ಜೇಡರದಾಸಿಮಯ್ಯನೆಂದು ಹೇಳಿ ಪೊಟ್ಟಲಕೆರೆಯ ಪ್ರಸಂಗದ ನಂತರ ಈತನ ವಿವಾಹ ಪ್ರಸಂಗ ಎಂದು ವಿವರಿಸುತ್ತಾರೆ. ಪೊಟ್ಟಲಕೆರೆಯ ಜಯಸಿಂಹ, ಕಲ್ಯಾಣದ ವಿಷ್ಣುದಹನದ ಜಯಸಿಂಹ ಇಬ್ಬರೂ ಒಂದೇ ಎಂದು ಅಭಿಪ್ರಾಯ ವ್ಯಕ್ತ ಪಡಿಸುತ್ತಾರೆ.

**ಶ್ರೀ ಮಲ್ಲಿಕಾರ್ಜುನ ದೇಶಿಕರು** ಬರೆದ ಲೇಖನ **'ಶ್ರೀ ಪಂಚಚಾರ್ಯರ ಸಂಕ್ಷಿಪ್ತ ಪರಿಚಯ'**. ಈ ಲೇಖನವು ಶರಣಸಾಹಿತ್ಯ ಸಂಪುಟ ೬, ಸಂಚಿಕೆ ೯ರಲ್ಲಿ ಪ್ರಕಟವಾಗಿದೆ. ಈ ಲೇಖನದಲ್ಲಿ ಪಂಚಚಾರ್ಯರ ಕುರಿತು ವಿಸ್ತಾರವಾದ ವಿಷಯಗಳಿವೆ. ಲೇಖಕರ ಮಾತುಗಳಲ್ಲಿ ಚರಿತ್ರೆಯ ಪ್ರಧಾನತೆ ಮತ್ತು ಆಧಾರಗಳ ಪ್ರಾಮುಖ್ಯತೆ ಹೀಗೆ ವ್ಯಕ್ತವಾಗಿದೆ. "ಆವುದೆ ವ್ಯಕ್ತಿಯ ಇತಿಹಾಸ ಅರಿಯಲು ಅವನ ಚರಿತ್ರೆಯೇ ಮುಖ್ಯವಾದಂತೆ, ಬಸವಾದಿಗಳ ಮತ್ತು ರೇವಣಸಿದ್ಧಿಗಳ ಇತಿಹಾಸ ಅರಿಯಲು ಅವರ ಚರಿತ್ರೆಗಳೇ ಮುಖ್ಯನಾದ ಆಧಾರವೆನ್ನಬಹುದು"[೫೮] ಎಂಬ ಲೇಖಕರ ಮಾತು ವಾಸ್ತವವೆನಿಸುತ್ತವೆ.

ಇಲ್ಲಿ ಪಂಚಚಾರ್ಯರೆನಿಸಿದ ಮರುಳಸಿದ್ದೇಶ್ವರ, ಪಂಡಿತಾರಾಧ್ಯ, ರೇವಣಸಿದ್ಧರಲ್ಲಿ ಏಕೋ ರಾಮಾರಾಧ್ಯರು ಒಬ್ಬರು. ಈ ಏಕೋರಾಮರು ದೇವರದಾಸಿಮಯ್ಯ ದುಗ್ಗಲೆಯರ ಮಗ. ಈತನ ಜನ್ಮ ಭೂಮಿ ಚನ್ನಮುದ್ರಾಪುರ. ಅಂದರೆ ಮೂಗಲಾಯಿ ಪ್ರಾಂತದ ಮುದನೂರು ಎಂದು ದಾಖಲಿಸಿದ್ದಾರೆ. ಏಕೋರಾಮರು ದಾಸಿಮಯ್ಯ ದಂಪತಿಗಳಿಗೆ ಮರುಳಸಿದ್ಧರ ಅನುಗ್ರಹದಿಂದ ಜನಿಸಿದವರು ಎಂದು ಹೇಳುವ ಮೂಲಕ ಶಿಷ್ಯ ಪರಂಪರೆಯನ್ನು ಗುರುತಿಸುತ್ತಾರೆ. ಇಲ್ಲಿ ಲೇಖಕರು ಹೇಳುವಂತೆ ರೇವಣಸಿದ್ಧರ ಶಿಷ್ಯ ಮರುಳಸಿದ್ಧ, ಮರುಳಸಿದ್ಧರ ಶಿಷ್ಯ ಏಕೋರಾಮ. ಈ ಏಕೋರಾಮನು ವಿರೂಪಾಕ್ಷನೆಂಬ ನಾಮದಿಂದ ಪ್ರಸಿದ್ದಿ ಪಡೆದನೆಂದು ಕನ್ನಡ ವಚನ ಶ್ರೀದೇವಾಂಗ ಪುರಾಣವು ಸಾಕ್ಷಿ ಒದಗಿಸುತ್ತದೆ. ವಿರೂಪಾಕ್ಷ ದೇಶಿಕನ ದೇವರದಾಸಿಮಯ್ಯ ಪುರಾಣವನ್ನೊಳಗೊಂಡಂತೆ ಹಲವು ಕೃತಿಗಳು ದಾಸಿಮಯ್ಯ ದಂಪತಿಗಳಿಗೆ ಮಗನಿದ್ದುದಾಗಿ ದಾಖಲಿಸಿವೆ. ಆದರೆ ಈ ಎಲ್ಲಾ ಆಧಾರಗಳು ನಿಜವೇ ಎಂಬುದು ಸ್ಪಷ್ಟಗೊಳ್ಳಬೇಕಿದೆ.

**ಅನ್ನಪೂರ್ಣ ಜಾಲವಾದಿಯವರ** **'ವೀರಶೈವ ಸಾಹಿತ್ಯದಲ್ಲಿ ತವನಿಧಿ ಕಲ್ಪನೆ'** ಲೇಖನವು ೧೯೯೯ರಲ್ಲಿ ಬಸವಪಥ ಮಾಸಪತ್ರಿಕೆಯ ಸಂಪುಟ ೨೦, ಸಂಚಿಕೆ ೧೨ರಲ್ಲಿ ಪ್ರಕಟಗೊಂಡಿದೆ. ಈ ಲೇಖನದಲ್ಲಿ 'ತವನಿಧಿ'ಯನ್ನು ವೈಜ್ಞಾನಿಕವಾಗಿ ಮತ್ತು ತಾತ್ವಿಕವಾಗಿ ನಿರ್ವಚಿಸಲಾಗಿದೆ.

ಲೇಖಕರು ಹೇಳುವಂತೆ, "ತವನಿಧಿ'ಯ ಪರ್ಯಾಯ ಕಲ್ಪನೆಗಳು ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿಯಾಗಿದ್ದು, ಇದರ ಕಾಲ್ಪನಿಕ ರೂಪವೇ ತವನಿಧಿ. ವಾಸ್ತವದಲ್ಲಿ ಇದು ಕಲ್ಪನೆಯ ಸ್ವರೂಪದ್ದೆಂದು ಹೇಳುತ್ತಾರೆ. ಇಲ್ಲಿ 'ತವನಿಧಿ' ಪದ ನಿರ್ವಚನದಿಂದ ಕೆಲವು ಸ್ಥಳೀಯ ನೈಸರ್ಗಿಕ ಅಂಶಗಳನ್ನು ಚರ್ಚಿಸಿರುವುದು ಅಧ್ಯಯನಕ್ಕೆ ಪೂರಕವಾಗಿದೆ. ತವನಿಧಿ ಪದಶಃ ಅರ್ಥ; 'ತವ' ಎಂದರೆ ಕ್ಷೀಣಿಸು, ಕ್ಷಯಿಸಿದ ಎಂಬ ಅರ್ಥವನ್ನು ಕೊಡುತ್ತದೆ. ಹಾಗೆಯೇ ನಿಧಿ ಎಂದರೆ ಸಂಪತ್ತು ಎಂದರ್ಥ. ಕ್ಷಯಿಸಲಾರದ ಸಂಪತ್ತನ್ನು ತವೆಯದ ನಿಧಿ> ತವನಿಧಿ ಎಂದು ಕರೆಯಬಹುದಾಗಿದೆ. ತವನಿಧಿಯು ಧನ–ಕನಕ, ದವಸ–ಧಾನ್ಯಾದಿ ರೂಪದಲ್ಲಿದ್ದಿರ ಬಹುದಾಗಿದೆ"[೫೯] ಎಂದು ತವನಿಧಿಯ ಕಲ್ಪನೆಯನ್ನು ಲೇಖಕಿಯು ವಿಸ್ತರಿಸುತ್ತಾರೆ. ತಾತ್ವಿಕವಾಗಿ 'ತವನಿಧಿ' ಈ ಅರ್ಥವನ್ನು ಪಡೆದಿದ್ದರೆ, ವೈಜ್ಞಾನಿಕವಾಗಿ ಮುದುನೂರಿನ ಸುತ್ತಲು ಇರುವ ಪ್ರದೇಶ ನೀರಾವರಿ ಅಥವಾ ಭಾವಿಗಳಿಂದ ಕೂಡಿದ್ದೂ ಸಮೃದ್ಧಿಯ ಬೆಳೆಗೆ ತುಂಬಾ ಅನುಕೂಲಕರವಾದುದಾಗಿದೆ. ಯಾವುದೋ ಸಂದರ್ಭದಲ್ಲಿ ದಾಸಿಮಯ್ಯನಿಗೆ ದೇವರು ಕೊಟ್ಟ ವರ ಈ ಸಮೃದ್ಧಿಯದಾಗಿರಬೇಕು ಎಂದೂ ಲೇಖಕಿಯು ಊಹಿಸುತ್ತಾರೆ. ಈ ಎರಡು ನೆಲೆಗಳಲ್ಲಿ ತವನಿಧಿಯನ್ನು ನಿರ್ವಚಿಸಿರುವುದು ಸೂಕ್ತವಾದುದಾಗಿದ್ದು, ತವನಿಧಿಯ ಕಲ್ಪನೆಯ ಹೊಸ ಆಯಾಮದ ಅಧ್ಯಯನವೆಂದು ಹೇಳಬಹುದು.

**ಕೆ.ಜಿ. ನಾಗರಾಜಪ್ಪ** ಅವರ **'ದೇವರ ದಾಸಿಮಯ್ಯ ಮರುಚಿಂತನೆ'** ಲೇಖನವು ೨೦೦೫ರಲ್ಲಿ ಪ್ರಕಟಗೊಂಡ **ತವನಿಧಿ** ಎಂಬ ಲೇಖನಗಳ ಸಂಪಾದನಾ ಕೃತಿಯಲ್ಲಿದೆ. ಈ ಲೇಖನದಲ್ಲಿ ದೇವರ ದಾಸಿಮಯ್ಯನ ಕುರಿತ ವಿಚಾರಗಳನ್ನು ಲೇಖಕರು ಚರ್ಚಿಸಿದ್ದಾರೆ. ದಾಸಿಮಯ್ಯ ಯಾರು? ಎಂಬ ಪ್ರಶ್ನೆಯಿಂದ ಲೇಖನ ಮೊದಲುಗೊಂಡು ಅತನ ಕುಲ, ವಚನಗಳು, ಆತನ ವಿಪರೀತ ಚರಿತವಾದ ಬದುಕನ್ನು ವಾಸ್ತವದ ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ.

"ಆಧುನಿಕ ಶರಣ ಸಾಹಿತ್ಯ ಸಂಶೋಧಕರು ಪುರಾಣ ಮತ್ತು ವಚನಗಳನ್ನು ದಾಸಿಮಯ್ಯನ ವ್ಯಕ್ತಿತ್ವವನ್ನು ರೂಪಿಸುವುದಕ್ಕೆ ಬಳಸಿದ್ದಾರೆ. ಆದರೆ ವಚನಗಳಲ್ಲಿ ಪುರಾಣದ, ಪುರಾಣಗಳಲ್ಲಿ ವಚನಗಳ ಆಂಶವನ್ನು ಆಧಾರವಾಗಿ ತೆಗೆದುಕೊಳ್ಳುವುದರಿಂದ ಮತ್ತಷ್ಟು ಗೊಂದಲವೇ ಆಗಿದೆ ಎನ್ನಬೇಕು"[೬೦] ಎಂಬ ಇವರ ಮಾತು ನಿಜವಾದುದು. ಹಾಗೆಯೇ ಆಧಾರಗಳ ಪರಿಷ್ಕರಣೆಯೂ ಆಗಿ ಹೋಗುವ ಸಂಭವವಿರುವ ಕಾರಣ ಪುರಾಣಗಳನ್ನು, ವಚನಗಳನ್ನು, ಶಾಸನಗಳನ್ನು ಬೇರೆ ಬೇರೆಯಾಗಿಯೇ ಇಟ್ಟು ನೋಡಬೇಕು. ಆದರೆ ಈ ಎಲ್ಲವೂ ಚರಿತ್ರೆ ನಿರ್ಮಾಣದಲ್ಲಿ ಪ್ರಮುಖ ಸ್ಥಾನವನ್ನು ವಹಿಸುತ್ತವೆ ಎಂಬುದನ್ನು ಮರೆಯುವಂತಿಲ್ಲ.

ಜೇಡರದಾಸಿಮಯ್ಯನನ್ನು ಕುರಿತು ಲೇಖಕರು ಹೀಗೆ ಹೇಳುತ್ತಾರೆ. "ವಚನಕಾರರ ದೃಷ್ಟಿಯಿಂದ ದಾಸಿಮಯ್ಯನ ವ್ಯಕ್ತಿತ್ವವನ್ನು ಪರಿಶೀಲಿಸಿದಾಗ, ಅವನು ಪುರಾತನರ ಗುಂಪಿಗೆ

ಸೇರಿದವನು. ಶಿವನಿಂದ ಪದವಿ ಬಯಸಿದವನು. ಅಂದರೆ ಸ್ಥಾವರ ಲಿಂಗ ಪೂಜಕ ಎಂಬ ಸೂಚನೆಯನ್ನು ಅಲ್ಲಗಳೆಯುವುದು ಕಷ್ಟ. ಅವನ ವಚನಗಳಲ್ಲಿ ಇಷ್ಟಲಿಂಗದ ವಿಷಯವೂ ಬರುತ್ತದೆ. ಅದೂ ಅಲ್ಲದೆ ಲಿಂಗವನ್ನು ಮುಡಿಗೆ ಮಡಿಲಿಗೆ ಧರಿಸುತ್ತಿದ್ದ ಅಂಶವೂ ಬರುತ್ತದೆ. ಇಷ್ಟಲಿಂಗ ರೂಢಿ ವೀರಶೈವದ್ದೋ ಅಥವಾ ಪೂರ್ವದಿಂದಲೂ ರೂಢಿಯಲ್ಲಿತ್ತೋ ಎಂಬುದು ಸ್ಪಷ್ಟವಾಗಬೇಕಿದೆ. ಅಂದರೆ ಇಷ್ಟ ಲಿಂಗ ಪೂಜೆಗೆ ಮಹತ್ವ ಬಂದದ್ದು ಮಾತ್ರ ವೀರಶೈವರ ಕಾಲದಲ್ಲಿ ಎನ್ನಬಹುದು. ದಾಸಿಮಯ್ಯನ ವಚನಗಳಲ್ಲಿ ಪಂಚಾಚಾರ, ಷಟ್ಸ್ಥಲ ಮತ್ತು ತ್ರಿವಿಧ ದೀಕ್ಷೆ ಮುಂತಾದ ತಾತ್ವಿಕ ವಿವರ ಅಷ್ಟಾಗಿ ಬರುವುದಿಲ್ಲ. ಅಂದ ಮೇಲೆ ದಾಸಿಮಯ್ಯನಿಗೆ ವೀರಶೈವ ದೀಕ್ಷೆಯಾಗಿತ್ತೋ ಅಥವಾ ವೀರಶೈವಕ್ಕಿಂತ ಭಿನ್ನವಾದ ಯಾವುದೋ ಒಂದು ಶೈವ ಪಂಥದವನೋ ಎಂಬ ಸಮಸ್ಯೆ ಕಾಡುತ್ತದೆ. ಆದರೆ ಅವನೊಬ್ಬ ಶಿವಭಕ್ತನಾಗಿದ್ದ ಎಂಬುದಂತೂ ಸ್ಪಷ್ಟ"[೬೧] ಎಂದು ಹೇಳುತ್ತಲೇ ಅಂದಿನ ಮತದ ಸಂಕ್ರಮಣದ ಕಾಲವನ್ನು ವಿವರಿಸುತ್ತಾರೆ.

ಮುಂದುವರೆದು ವಿವರಿಸುತ್ತಾ, "ಬಸವಣ್ಣನು ಈ ಬಗ್ಗೆ ತನ್ನ ವಚನಗಳಲ್ಲಿಯೂ ಹೇಳಿದ್ದಾನೆ. ಉತ್ತಮ ಕುಲ, ಕೀಳುಕುಲದ ಪರಾಮರ್ಶೆಯನ್ನು ಮಾಡುತ್ತಾನೆ ಎಂದು ಉದಾಹರಣೆಗಳನ್ನು ನೀಡುತ್ತಾರೆ. ಲೇಖಕರು ಉತ್ತಮ ಕುಲದ ಹಾಗೂ ಕೆಳವರ್ಗದಿಂದಲೂ ಶಿವಭಕ್ತರಾಗಿ ಹಲವರು ಮತಾಂತರವಾದುದಾಗಿ ದಾಖಲಿಸುತ್ತಾರೆ. 'ಜೇಡರದಾಸಿಮಯ್ಯ' ದಲಿತ ಅಥವಾ ಕೆಳವರ್ಗದ ವಚನಕಾರನಿದ್ದಿರಬೇಕು ಎಂಬ ಚಿಂತನೆಗಳು ಈಗಗಲೇ ನಡೆದಿವೆ, ನಡೆಯುತ್ತಲೂ ಇವೆ. ಲೇಖಕರು ಜೇಡರದಾಸಿಮಯ್ಯ ದೇವರದಾಸಿಮಯ್ಯನಾದ ಬಗೆಯನ್ನು ಇಲ್ಲಿ ವಿವರಿಸುತ್ತಾ, ದಾಸಿಮಯ್ಯನಿಗೆ ನೇಯ್ಗೆ ವೃತ್ತಿಯೇ ಪ್ರವೃತ್ತಿಯಾಯಿತು, ಆ ಪ್ರವೃತ್ತಿಯೇ ಸಾಧನೆಗೆ ಸೋಪಾನವಾಯಿತು. ವೃತ್ತಿ ಆಧ್ಯಾತ್ಮೀಕರಣವಾಯಿತು. ಜೇಡರ ವೃತ್ತಿ ದೇವರ ವೃತ್ತಿಯಾಯಿತು."[೬೨] ಜೇಡರದಾಸಿಮಯ್ಯ ದೇವರದಾಸಿಮಯ್ಯನಾದನು ಎಂಬ ಒಂದು ಫ್ಯಾಂಟಸಿಯಲ್ಲಿ ಇದನ್ನು ಗ್ರಹಿಸುತ್ತಾರೆ. ಮುಂದುವರಿದಂತೆ ಲೇಖನದ ಕೊನೆಯಲ್ಲಿ "ದೇವರದಾಸಿಮಯ್ಯನ ಪುರಾಣಗಳಲ್ಲಿ ಹುಟ್ಟಿಕೊಂಡ ಕತೆಗಳು ಆಧಾರವಿಲ್ಲದವು. ತವನಿಧಿ ಬಗೆಗಿನ ಶಂಕರದಾಸಿಮಯ್ಯನ ಕಥೆಯೂ ವಿದ್ವಾಂಸರ ಕಟ್ಟು ಕತೆ ಎಂದು ಸಾಧಿಸುತ್ತಾರೆ. ಚರಿತ್ರೆಯ ವ್ಯಕ್ತಿಯನ್ನು ಪುರಾಣ ವ್ಯಕ್ತಿಯನ್ನಾಗಿಸಿ ಅಘಟಿತ ಘಟನೆಯ ವಿಪರೀತ ಪುರುಷನನ್ನಾಗಿಸುವುದು ನಮ್ಮ ಧಾರ್ಮಿಕ ಪುರಾಣಗಳ ಇತಿಹಾಸ. ಚರಿತ್ರೆಯನ್ನು ಪುರಾಣ ಮಾಡುವ, ಪುರಾಣವನ್ನು ಚರಿತ್ರೆ ಮಾಡುವ ನಮ್ಮ ವಿದ್ವಾಂಸರ ಕುಟಿಲೋಪಾಯದ ಪವಾಡಗಳು

ಶಿಷ್ಟ ಮತ್ತು ಜಾನಪದ ಸಂಸ್ಕೃತಿಯ ಅಂತರವನ್ನು ನಿರಂತರವಾಗಿ ರಕ್ಷಿಸಿಕೊಂಡು ಬರುವ ಒಂದು ತಂತ್ರ. ಅಂತಹ ಒಂದು ತಂತ್ರಕ್ಕೆ ದೇವರದಾಸಿಮಯ್ಯನ ಬದುಕು ತುತ್ತಾದುದರಲ್ಲಿ ಆಶ್ಚರ್ಯವಿಲ್ಲ. ದೇವರದಾಸಿಮಯ್ಯನನ್ನು ಅಧ್ಯಯನದಿಂದ ಪುರಾಣದಿಂದ ಬಂಧಿತನಾಗಿರುವ ವಿಚಾರವಂತ ದಾಸಿಮಯ್ಯನ್ನನ್ನು ಬಿಡುಗಡೆ ಮಾಡಬೇಕಾಗಿದೆ"[೩] ಎನ್ನುವ ವಿಚಾರವನ್ನು ಮಂಡಿಸುತ್ತಾರೆ.

ಜೇಡರದಾಸಿಮಯ್ಯನೇ ದೇವರದಾಸಿಮಯ್ಯನೆಂದು ಹೇಳುತ್ತಾ, ಸೌಮ್ಯ ಭಾವದಿಂದಲೇ ಈ ವಿವಾದದಿಂದ ಹೊರಗುಳಿಯುವ ಪ್ರಯತ್ನವನ್ನು ಲೇಖಕರು ಇಲ್ಲಿ ಮಾಡಿದ್ದಾರೆನ್ನಬಹುದು. ಪುರಾಣಾಧಾರಗಳನ್ನು, ಕಾವ್ಯಾಧಾರಗಳನ್ನು ಹೊರತು ಪಡಿಸಿ ಒಂದು ಊಹೆಯಲ್ಲಿ ಒಬ್ಬ ಶರಣ ಚರಿತ್ರೆಯನ್ನು ಕಟ್ಟುವುದು ಅಸಾಧ್ಯ. ಜೇಡರ, ದೇವರವಾದಂತೆಯೇ, ಇತರ ಪ್ರಭಾವಿ ಶರಣರು ಹಲವರಿದ್ದು ಅವರ ವೃತ್ತಿಗಳು ದೇವರ ಕಾಯಕಗಳೆನಿಸಲಿಲ್ಲವೆ. ಈ ಬದಲಾವಣೆ ಜೇಡರದಾಸಿಮಯ್ಯನಿಗೆ ಮಾತ್ರ ಸಂಬಂಧಿಸಿತೆ? ಎಂಬ ಮರು ಪ್ರಶ್ನೆಗಳು ಮೂಡುತ್ತವೆ. ಆದ್ದರಿಂದ ಲೇಖಕರ ವಾದ ನಿಜವಿರುವ ಸಾಧ್ಯತೆ ಇದ್ದರೂ ಸ್ಪಷ್ಟೀಕರಣ ಸಿಗದೆ ಹಾಗೆ ಉಳಿಯುತ್ತದೆ.



'ಜೇಡರ ದಾಸಿಮಯ್ಯ: ಒಂದು ಅಧ್ಯಯನ' ವಿಷಯಕ್ಕೆ ಪೂರಕವೆನಿಸಿದ ಹಲವು ಆಕರಗಳನ್ನು ಈ ಅಧ್ಯಾಯನದಲ್ಲಿ ಚರ್ಚಿಸಲಾಗಿದ್ದು. ಪ್ರತಿಯೊಂದು ಹೊಸ ವಿವೇಚನೆಯನ್ನು ಒದಗಿಸುತ್ತವೆ. ಪ್ರಧಾನ ವಿಷಯಗಳಾದ ಜೇಡರದಾಸಿಮಯ್ಯನ ಕಲ, ಮತ, ತವನಿಧಿ ಕಲ್ಪನೆ, ಸಮಕಾಲೀನರು ಮೊದಲಾದ ಗೊಂದಲಗಳಿಗೆ ಹೆಚ್ಚಿನ ಸ್ಪಷ್ಟತೆ ಇಲ್ಲದಿದ್ದರೂ ಮುಂದಿನ ಅಧ್ಯಯನಕ್ಕೆ ಹಲವು ದಾರಿಗಳನ್ನು ತೋರಿವೆ ಎಂಬುದರಲ್ಲಿ ಸಂದೇಹವಿಲ್ಲ. ಫ.ಗು.ಹಳಕಟ್ಟಿ, ನಂದೀಮಠ. ಎಸ್.ಸಿ, ದೇವಿರಪ್ಪ.ಹೆಚ್, ಮೊದಲಾದವರಿಂದ ಹಿಡಿದು ಈವರೆಗೂ ಮೇಲ್ಕಂಡ ವಿಷಯದ ಕುರಿತು ಅಧ್ಯಯನಗಳು ನಡೆಯುತ್ತಲೇ ಇವೆ. ಅವು ಹೆಚ್ಚು ಪ್ರಚಲಿತವೆನಿಸುತ್ತವೆ. ಆದ್ದರಿಂದ ಅಧ್ಯಯನದ ಸಾಧ್ಯತೆಗಳನ್ನನುಸರಿಸಿ ಈ ಸಮೀಕ್ಷೆಯು ಅಗತ್ಯವೆನಿಸಿದೆ.

**ಅಡಿಟಿಪ್ಪಣಿ**

೧. ಗಂಗಮ್ಮ ಎಚ್.ಎಸ್., ಮುದನೂರು ದಾಸಿಮಯ್ಯ: ಒಂದು ಅಧ್ಯಯನ. ಪು.೧

೨. ನಂದೀಮಠ ಎಸ್.ಸಿ., ಎ ಹ್ಯಾಂಡ್ ಬುಕ್ ಆಫ್ ವೀರಶೈವಿಸಮ್, ಪು.೨೩

೩. ಅದೇ ಪು.೨೪

೪. ಶಾಂತರಸ, ಬಸವ ಪೂರ್ವ ಯುಗದ ಶರಣರು ಕೃತಿ, ಪು.೩

೫. ಅದೇ, ಪು.೨೨

೬. ಅದೇ, ಪು.೨೨

೭. ಅದೇ, ಪು.೨೩

೮. ಬಸವರಾಜು ಎಲ್., ದೇವರ ದಾಸಿಮಯ್ಯನ ವಚನಗಳು, ಪೀಠಿಕೆ ಭಾಗ, ಪು.೧

೯. ಅದೇ, ಪು.೨೫

೧೦. ದೇವೀರಪ್ಪ ಎಚ್., ರಾಚಪ್ಪ ಆರ್., ಜೇಡರದಾಸಿಮಯ್ಯನ ವಚನಗಳು, ಪ್ರಸ್ತಾವನೆ, ಪು.೨೯

೧೧. ಅನ್ನಪೂರ್ಣ ಜಾಲವಾದಿ, ಶಂಕರ ದಾಸಿಮಯ್ಯ ಒಂದು ಪುರಾಣ: ಒಂದು ಅಧ್ಯಯನ, ಪು.೧೦೬

೧೨. ಅದೇ, ಪು.೩೨

೧೩. ಅದೇ, ಪು.೩೨

೧೪. ತಿಪ್ಪೇರುದ್ರಸ್ವಾಮಿ ಎಚ್., ವೀರಶೈವ ದೀಪ್ತಿ, ಪು.೭೧

೧೫. ಅದೇ, ಪು.೭೨

೧೬. ಅದೇ, ಪು.೨–೩

೧೭. ಅದೇ, ಪು.೪೪–೪೫

೧೮. ಅದೇ, ಪು.೪೭

೧೯. ರಾಮರೆಡ್ಡಿ ಎಸ್. ರಡ್ಡೇರ, ದೇವರ ದಾಸಿಮಯ್ಯನ ಜೀವನ ಮತ್ತು ಸಾಹಿತ್ಯ. ಪು.೨

೨೦. ನಾವಲಗಿ ಕೆ.ಸಿ., ಜೇಡರ ದಾಸಿಮಯ್ಯ, ಪು.೧೦

೨೧. ಅದೇ, ಪು.೧೨

೨೨. ಅದೇ, ಪು.೫

೨೩. ಅದೇ, ಪು.೫

೨೪. ಚಿದಾನಂದಮೂರ್ತಿ ಎಂ., ದೇವರ ದಾಸಿಮಯ್ಯ ಶಂಕರ ದಾಸಿಮಯ್ಯ ಜೇಡರ ದಾಸಿಮಯ್ಯ, ಲೇಖಕರ ಮಾತು.

೨೫. ಅದೇ, ಲೇಖಕರ ಮಾತು

೨೬. ಅದೇ, ಪು.೩೨-೩೩

೨೭. ಅದೇ, ಪು.೩೭

೨೮. ಅದೇ, ಪು.೩೯

೨೯. ಮೃತ್ಯುಂಜಯ ರುಮಾಲೆ, ಜೇಡರ ದಾಸಿಮಯ್ಯ, ಪು.೨೪

೩೦. ವಸಂತ ಕುಮಾರ್ ಬಿ.ವಿ., ದೇವರ ದಾಸಿಮಯ್ಯ, ಜೇಡರ ದಾಸಿಮಯ್ಯ ಬೇರೆ ಬೇರೆಯಲ್ಲ, ಮುನ್ನುಡಿ

೩೧. ಅದೇ, ಮುನ್ನುಡಿ

೩೨. ಕಲಬುರ್ಗಿ ಎಂ.ಎಂ., ಮಾರ್ಗ ಸಂಪುಟ ೧, ಪು.೧೭೧

೩೩. ವಸಂತ ಕುಮಾರ್ ಬಿ.ವಿ., ದೇವರ ದಾಸಿಮಯ್ಯ, ಜೇಡರ ದಾಸಿಮಯ್ಯ ಬೇರೆ ಬೇರೆಯಲ್ಲ, ಪು.೧೧೧

೩೪. ಅದೇ, ಪು.೧೨೨

೩೫. ವಿದ್ಯಾಶಂಕರ ಎಸ್., ಬಸವ ಪಥ, ಏಪ್ರಿಲ್ ೧೯೮೦, ಸಂಪುಟ ೨, ಸಂಚಿಕೆ ೩, ಪು. ೧೦೯

೩೬. ಅದೇ, ಪು.೧೦೯. ಅಡಿ ಟಿಪ್ಪಣಿಯಲ್ಲಿದೆ.

೩೭. ಜ.ಚ.ನಿ, ಫ.ಗು ಹಳಕಟ್ಟಿ ಸಮಗ್ರ ಸಂಪುಟ ೧೨, ಪು.೪೨೭

೩೮. ಅದೇ, ಪು.೪೨೭

೩೯. ಗೋವಿಂದ ಪೈ ಎಂ., ಫ.ಗು.ಹಳಕಟ್ಟಿ ಸಮಗ್ರ ಸಂಪುಟ, ಪು.೫೪೨

೪೦. ಅದೇ, ಪು.೫೪೨

೪೧. ಅದೇ, ಪು.೫೪೯

೪೨. ಅದೇ, ಪು.೫೫೦

೪೩. ಅದೇ, ಪು.೬೨೭

೪೪. ಅದೇ, ಪು.೬೩೧

೪೫. ಅದೇ, ಪು.೬೩೧

೪೬. ಮುಗಳಿ ರಂ.ಶ್ರೀ., ಕನ್ನಡ ಸಾಹಿತ್ಯ ಚರಿತ್ರೆ, ಪು.೮೬

೪೭. ಸಿದ್ಧಯ್ಯ ಪುರಾಣಿಕ, ಶರಣ ಚರಿತಾಮೃತ, ಮುನ್ನುಡಿ, ಪು.೧೧೪

೪೮. ಅದೇ, ಪು.೪೧೪

೪೯. ಅದೇ, ಪು.೩೬

೫೦. ಅದೇ, ಪು.೩೭

೫೧. ಅದೇ, ಪು.೬೪

೫೨. ಕಲಬುರ್ಗಿ ಎಂ.ಎಂ., ಮಾರ್ಗ ಸಂಪುಟ ೧, ಪು.೧೭೫

೫೩. ಅದೇ, ಪು.೧೭೦

೫೪. ಅದೇ, ಪು.೧೭೧

೫೫. ಅದೇ, ಪು.೧೫೫

೫೬. ಬಸವರಾಧ್ಯ ಎನ್., ಬಸವಪೂರ್ವದ ಕೆಲವು ಶರಣರು, ಪು.೭

೫೭. ಅದೇ, ಪು.೯

೫೮. ಶ್ರೀ ಮಲ್ಲಿಕಾರ್ಜುನ ದೇಶಿಕರು, ಶರಣ ಸಾಹಿತ್ಯ, ಸಂಪುಟ ೬, ಸಂಚಿಕೆ ೯, ಪು.೪೨೭

೫೯. ಅನ್ನಪೂರ್ಣ ಜಾಲವಾದಿ, ಬಸವ ಪಥ, ಸಂಪುಟ ೨೦, ಸಂಚಿಕೆ ೧೦, ೧೯೯೯ ಜನವರಿ

೬೦. ನಾಗರಾಜಪ್ಪ ಕೆ.ಜಿ., ತವನಿಧಿ, ಪು.೦೩

೬೧. ಅದೇ, ಪು.೫

೬೨. ಅದೇ, ಪು.೯

೬೩. ಅದೇ, ಪು.೧೭

# ಅಧ್ಯಾಯ: ಮೂರು

## ಜೇಡರದಾಸಿಮಯ್ಯ–ದೇವರದಾಸಿಮಯ್ಯ: ಒಂದು ಚರ್ಚೆ

೩.೧. ಜೇಡರದಾಸಿಮಯ್ಯ

೩.೨. ದೇವರದಾಸಿಮಯ್ಯ

೩.೩. ವಿದ್ವಾಂಸರ ದೃಷ್ಟಿಯಲ್ಲಿ ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ

# ಅಧ್ಯಾಯ: ಮೂರು

## ಜೇಡರದಾಸಿಮಯ್ಯ–ದೇವರದಾಸಿಮಯ್ಯ: ಒಂದು ಚರ್ಚೆ

'ಅನುಭವ' ಹಾಗೂ 'ಅನುಭಾವ' ಪದಗಳ ವಿಶ್ಲೇಷಣೆಯಲ್ಲಿ ಆಧ್ಯಾತ್ಮಿಕ ಸ್ಪರ್ಶವಿರುವುದು ಅನುಭಾವ ಪರಿಭಾಷೆಯಲ್ಲಿ ವಚನಸಾಹಿತ್ಯವನ್ನು ಅನುಭಾವ ಸಾಹಿತ್ಯವಾಗಿಯೇ ಗುರುತಿಸುವುದು ಸಾಮಾನ್ಯ ಸಂಗತಿ. ಪೂರ್ವದಿಂದಲೂ ಕನ್ನಡ ಸಾಹಿತ್ಯವು ಧರ್ಮವನ್ನಾಧರಿಸಿದಂತೆ ವಚನಸಾಹಿತ್ಯವು ಹನ್ನೆರಡನೇ ಶತಮಾನದಲ್ಲಿ ಹೊಸದಾಗಿ ರೂಪು ಪಡೆದ ಲಿಂಗಾಯತ (ವೀರಶೈವ) ಧರ್ಮವನ್ನಾಧರಿಸಿದ್ದು ಕಾಲಕಾರ್ಯವೇ ಸರಿ. ಒಂದು ಧರ್ಮದ ಎಲ್ಲಾ ಆಶಯಗಳು ಅದರ ಆಶ್ರಿತ ಸಾಹಿತ್ಯದಲ್ಲಿ ವ್ಯಕ್ತವಾಗಿರುವುದು ಇದೆ. ಎಂತಹ ಧರ್ಮವೇ ಆದರೂ ಪ್ರಸಾರಕಾರ್ಯದಲ್ಲಿ ತೊಡಗಿದಾಗ ಅದರ ಧ್ಯೇಯ ಆಶಯಗಳನ್ನು ಇಟ್ಟುಕೊಂಡೇ ಮುನ್ನಡೆಯುತ್ತದೆ. ಇದಕ್ಕೆ ಸಾಹಿತ್ಯ ಕೃತಿಗಳೇ ಉದಾಹರಣೆಗಳೂ ಆಗಿವೆ. ಹೀಗೆ ಈ ಎಲ್ಲಾ ಆಶಯಗಳ ಪ್ರಸಾರಕವಾಗಿ ಸಾಹಿತ್ಯ ಕಾರ್ಯನಿರ್ವಹಿಸುತ್ತದೆ.

ಆದ್ಯ ಪುರುಷರ ಪ್ರಭಾವ ಅಥವಾ ಧರ್ಮದ ಪ್ರಕರ್ಶಸ್ಥಿತಿಯ ಹಂತದಲ್ಲಿ ಸರಾಗವಾಗಿ ನಡೆಯುವ ಈ ಕಾರ್ಯ ಧರ್ಮದ ಅನತಿ–ಅವನತಿಯ ಪ್ರಶ್ನೆ ಎದುರಾದಾಗ ಎಲ್ಲವನ್ನು ತಮ್ಮೊಳಗೆ ಸೇರಿಸಿಕೊಂಡು ಅಥವಾ ಎಲ್ಲಕ್ಕೂ ಮಿಗಿಲಾಗುವ ಪ್ರಯತ್ನದಿಂದಲೋ ಹೋರಾಟಕ್ಕೆ ಎಡೆಮಾಡಿಕೊಟ್ಟಿರುವುದು ಕಂಡುಬರುತ್ತದೆ. ಈ ಎಲ್ಲಾ ಗೊಂದಲಗಳ ಹೊರತಾಗಿ ಶರಣರನ್ನು ಅವರ ವ್ಯಕ್ತಿತ್ವವನ್ನು ಗ್ರಹಿಸುವುದಾದರೆ ಬಸವ ಪೂರ್ವದ ವಚನಕಾರರು ಪ್ರಮುಖವಾಗುತ್ತಾರೆ. ಅಂತಹವರಲ್ಲಿ ಪ್ರಮುಖರು ಜೇಡರದಾಸಿಮಯ್ಯ, ಮಾದರಚೆನ್ನಯ್ಯ, ಡೋಹರ ಕಕ್ಕಯ್ಯ ಮುಂತಾದವರು. ಸಮಾಜವನ್ನು ವೈಚಾರಿಕ ದೃಷ್ಟಿಯಿಂದ ಕಾಣುತ್ತಲೇ ತಮ್ಮ ಆಧ್ಯಾತ್ಮಿಕ ಸಾಧನೆಯಲ್ಲಿ ಉನ್ನತ ಮಟ್ಟವನ್ನು ಏರುವುದು ವಚನಕಾರರ ಅದ್ವಿತೀಯ ವಿವೇಚನೆಯಾಗಿದೆ. ಇಂತಹ ವಚನಕಾರರಲ್ಲಿ ಪ್ರಮುಖ ಹಾಗೂ ಆದ್ಯನಾದವನು ಜೇಡರದಾಸಿಮಯ್ಯ. ಜೇಡರ ದಾಸಿಮಯ್ಯನನ್ನು ಆರಂಭಿಕ ಪ್ರತಿನಿಧಿಯಾಗಿಯೂ ಪರಿಗಣಿಸಬಹುದು. ಇಂತಹ ಓರ್ವ

ಶರಣನ ಜೀವನ ಸಾಧನೆಯು ಇನ್ನೋರ್ವ ಶರಣನ ಸಾಧನೆಯೊಂದಿಗೆ ಬೆರೆತು ಹೋಗಿದ್ದು, ಆ ಇಬ್ಬರು ವ್ಯಕ್ತಿಗಳ ವ್ಯಕ್ತಿತ್ವಕ್ಕೆ ವೈಯಕ್ತಿಕವಾಗಿ ನ್ಯಾಯ ಒದಗಿಸಲಾರದ ಸ್ಥಿತಿ ಏರ್ಪಟ್ಟಿದೆ. ದೇವರದಾಸಿಮಯ್ಯ ವಚನಕಾರನಲ್ಲದಿದ್ದರೂ, ಒಬ್ಬ ಅನುಭಾವಿಕ ಶರಣ. ವೀರಶೈವ ಧರ್ಮದ ಅಥವಾ ಶೈವಧರ್ಮದ ಪ್ರಭುದ್ದ ಪ್ರಚಾರಕ್ಕೆ ಆತನ ಸಾಧನೆ ಅತ್ಯಂತ ಶ್ರೇಷ್ಠವೆಂದೇ ಅನಿಸುತ್ತದೆ.

ಈ ಇಬ್ಬರ ಸಾಧನೆಯ ಪರಾಕಾಷ್ಠೆ ಅರಿಯಬೇಕಾದರೆ ಅವರನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡಬೇಕಾಗಿದೆ. ಅವರ ಕುರಿತಾಗಿ ಇಬ್ಬರು ಒಂದೇ ಅಥವಾ ಭಿನ್ನರು ಎಂಬ ಗೊಂದಲಗಳನ್ನೂ ಬಿಡಿಸಬೇಕಾಗಿದೆ. ಇಂತಹದೇ ಚರ್ಚೆಗಳು ಅನೇಕ ಶಿವಶರಣರ ಬಗ್ಗೆ ಇರುವುದನ್ನು ಕಾಣುತ್ತೇವೆ. ಆದರೆ ಒಂದೇ ಅನುಭಾವ ಕೇಂದ್ರದ ಪ್ರತಿನಿಧಿಗಳಾಗಿ ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ ಇಬ್ಬರೂ ಪ್ರಮುಖರೆನಿಸುತ್ತಾರೆ. ಈ ವಿಚಾರಗಳನ್ನಾಧರಿಸಿ ಯಾವುದೋ ಒಂದು ಸಮುದಾಯದ ಪ್ರತಿನಿಧಿಗಳಂತೆ ನೋಡುತ್ತಿರುವ ಇಂದಿನ ದೃಷ್ಟಿಕೋನದ ಚೌಕಟ್ಟನ್ನು ಮೀರಿ ಅಧ್ಯಯನಗಳಾಗುವ ಅವಶ್ಯಕತೆ ಇದೆ. ಅಂತಹ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಜೇಡರದಾಸಿಮಯ್ಯ ಹಾಗೂ ದೇವರ ದಾಸಿಮಯ್ಯ ಈ ಇಬ್ಬರ ಸಂಪೂರ್ಣ ವಿವರಗಳನ್ನು ಈ ಅಧ್ಯಾಯ ಒಳಗೊಂಡಿದ್ದು, ಈವರೆಗಿನ ವಿದ್ವಾಂಸರ ಅಭಿಪ್ರಾಯ ಹಾಗೂ ಅಧ್ಯಯನಗಳ ಸಂಪೂರ್ಣ ಚಿತ್ರಣ ಹೊಂದಿದೆ. ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯರು ಪೌರಾಣಿಕ ಹಾಗೂ ಚಾರಿತ್ರಿಕ ವ್ಯಕ್ತಿಗಳಾಗಿ ಚರಿತ್ರೆ ಮತ್ತು ಸಾಹಿತ್ಯ ದೃಷ್ಟಿಯಿಂದ ಪ್ರಮುಖರೆನಿಸುತ್ತಾರೆ. ಆದ್ದರಿಂದ ಇಲ್ಲಿ ಇವರ ಚರ್ಚೆ ಅವಶ್ಯಕವೆನಿಸುತ್ತದೆ.

### ೩.೧. ಜೇಡರದಾಸಿಮಯ್ಯ

ಕನ್ನಡ ಸಾಹಿತ್ಯದ ಜೀವರತ್ನಗಳೆನಿಸಿದ ವಚನಗಳ ರಚನೆ, ಶೈಲಿ, ಆಕೃತಿ ಮೊದಲಾದವು ಗಳೊಂದಿಗೆ ಅವುಗಳ ರಚನೆಯ ಹಿಂದಿನ ಸಾಮಾಜಿಕ ಆಯಾಮದ ಹಿನ್ನೆಲೆಯಿಂದ ನೋಡಿದರೆ ಅತ್ಯಂತ ವಿಶಿಷ್ಟವೆನಿಸುತ್ತವೆ. ಮುನ್ನಿನ ಚಂಪೂ, ವೃತ್ತ, ಕಂದಗಳಂತೆ ಇವು ಛಂದೋಬಂಧ ರಚನೆಗಳಲ್ಲ. ಒಂದು ಸಾಮಾಜಿಕ ಸ್ತರದ ದಿವ್ಯವಾಣಿಯಾಗಿಯೂ ಕಾರ್ಯನಿರ್ವಹಿಸಿವೆ. ಇವುಗಳ ರಚನೆಯ ಮೊದಲಿಗ ಜೇಡರದಾಸಿಮಯ್ಯ. ಜೇಡರ ದಾಸಿಮಯ್ಯನ ವಚನಗಳು ಶಿಷ್ಟತೆಗೂ ಮೊದಲು ಬಂದ ಜನವಾಣಿಯಂತೆ ಕಂಡು ಬರುತ್ತವೆ. ಇವುಗಳನ್ನು ಜಾನಪದ ವಿವರಣೆಗಳಾಗಿಯು ನೋಡಬಹುದು. "ಜೇಡರದಾಸಿಮಯ್ಯನ ವಚನಗಳಲ್ಲಿ ವಿಚಾರವಿದೆ, ಕ್ರಾಂತಿ ಇದೆ, ಹರಿತವಾದ ಶಕ್ತಿಯಿದೆ. ಕಾವ್ಯದ ಲಯವಿದೆ, ನಮಗೆ ಪ್ರಸಕ್ತವಾದದ್ದು ಕೊನೆಯದು ಈ ಲಯ ಹುಡುಕಿದರೆ ಮಾತ್ರ ಸಿಕ್ಕುವ ಸ್ಥಿತಿಯಲ್ಲಿಲ್ಲ, ಅಷ್ಟೊಂದು ಎಚ್ಚರಿಕೆಯಿಂದ ಓದದವನಿಗೂ

ಕೂಡ ಅದು ಥಟ್ಟನೆ ಗೊತ್ತಾಗಬಲ್ಲದು. ಅಷ್ಟೇ ಅಲ್ಲ ಕೆಲವು ವಚನಗಳು ಕೂಡ ಪದ್ಯಗಳೋ ಏನೋ ಎಂಬ ಭ್ರಾಂತಿಯನ್ನು ಬರಿಸಬಲ್ಲವು"[೧] ಇದರಿಂದಾಗಿ ಸಾಮಾಜಿಕ ಹರಿಕಾರನಾಗಿ ನಾವು ಬಸವಣ್ಣನನ್ನು ಗುರುತಿಸಿದರೂ ಅವನಿಗೂ ಪ್ರೇರಕ ಶಕ್ತಿಯಾಗಿ ಜೇಡರದಾಸಿಮಯ್ಯನನ್ನು ಪರಿಗಣಿಸಬೇಕಾಗುತ್ತದೆ. ಸೃಷ್ಟಿಲಯದ ಎಲ್ಲಾ ಸ್ಥರಗಳನ್ನು ತನ್ನ ವಚನಗಳ ಮೂಲಕ ಶ್ರೇಷ್ಠರಿಂದ ಸಾಮಾನ್ಯರವರೆಗೂ ಮುಟ್ಟುವಂತೆ ಮಾಡಿದಾತ ಇವನು. ಇಂತಹ ಶರಣನ ವ್ಯಕ್ತಿ ವಿವರಗಳ ಬಗೆಗಿನ ಚರ್ಚೆಗಳನ್ನು ನೋಡಿದರೆ ಹೆಚ್ಚಿನ ಅಭ್ಯಾಸದ ಅಗತ್ಯವಿದೆ ಎನಿಸುತ್ತದೆ.

**ಜೇಡರದಾಸಿಮಯ್ಯನ ಕಾಲ, ಸ್ಥಳ ವಿಚಾರ**

ಗೋವಿಂದ ಪೈಯವರು ಈತನ ಕಾಲವನ್ನು ಕ್ರಿಶ ಸುಮಾರು ೯೮೦ ರಲ್ಲಿ ಹುಟ್ಟಿ ೧೦೪೦ ರಲ್ಲಿ ನಿಧನ ಹೊಂದಿರಬಹುದಾಗಿ ಹೇಳುತ್ತಾರೆ. ರಂ.ಶ್ರೀ.ಮುಗಳಿ, ಫ.ಗು. ಹಳಕಟ್ಟಿ, ಡಾ.ಎಲ್ ಬಸವರಾಜ ಅವರು ಕ್ರಿಶ ೧೦೧೫ರಿಂದ ೧೦೪೦ ಎಂದು ಗುರುತಿಸುತ್ತಾರೆ. ಚಿದಾನಂದಮೂರ್ತಿ, ಶಾಂತರಸ, ಎಂ.ಎಂ ಕಲಬುರ್ಗಿ ಮುಂತಾದವರು ಕ್ರಿಶ ೧೧೪೦ರ ಗಡುವನ್ನು ಸೂಚಿಸುತ್ತಾರೆ. ಈ ಮೂರರಲ್ಲಿ ಸಂಶೋಧನೆಯ ಸಾಧಿತ ಸತ್ಯವನ್ನು ಮೂರನೆಯ ತಲೆಮಾರು ಪ್ರತಿನಿಧಿಸುವುದರಿಂದ ಜೇಡರದಾಸಿಮಯ್ಯನ ಕಾಲ ಕ್ರಿಶ ೧೧೪೦ ಎಂದು ಇಟ್ಟು ಕೊಳ್ಳಬಹುದು. ಜೇಡರದಾಸಿಮಯ್ಯನ ಹೆಸರನ್ನು ತಿಳಿಸುವ ಎಲ್ಲಾ ಶಾಸನಗಳು ನಮಗೆ ದೊರೆಯುವುದು ಕ್ರಿಶ ೧೧೪೦ರ ಆಸುಪಾಸಿನಲ್ಲಿಯೇ. ಮೇಲಿನ ವಿದ್ವಾಂಸರುಗಳು ಜೇಡರ ದಾಸಿಮಯ್ಯನ ಕಾಲವನ್ನು ಕ್ರಿಶ ೧೦೪೦ ಎಂದು ಗುರುತಿಸಲಾಗಿದ್ದು, ಅದಕ್ಕೆ ಆಧಾರವಾಗಿ ಚಾಲುಕ್ಯ ಜಯಸಿಂಹನನ್ನೇ ನೀಡುತ್ತಾರೆ. ಆದರೆ ಚಾಲುಕ್ಯ ವಂಶದಲ್ಲಿ ಒಟ್ಟು ನಾಲ್ಕು ಜನ ಜಯಸಿಂಹ ಹೆಸರಿನವರಿರುವುದಾಗಿ ತಿಳಿದು ಬರುತ್ತದೆ.

೧. ಒಂದನೆಯವನು- ಕಲ್ಯಾಣಿ ಚಾಲುಕ್ಯರ ಮೂಲಪುರುಷರಲ್ಲಿ ಒಬ್ಬ. ಈತನ ಕಾಲ ಕ್ರಿಶ ೫೦೦-೫೨೦. ಈತನಿಗೂ ದೇವರದಾಸಿಮಯ್ಯನಿಗೂ, ಶಂಕರ ದಾಸಿಮಯ್ಯನಿಗೂ ಯಾವುದೇ ಸಂಬಂಧವಿಲ್ಲ.

೨. ಎರಡನೆಯವನು-೨ನೇ ಜಯಸಿಂಹ. ಈತನ ಕಾಲ ಕ್ರಿಶ ೧೦೧೫-೧೦೪೨ ಈತನು ಪೊಟ್ಟಲಕೆರೆಯನ್ನು ರಾಜಧಾನಿಯಾಗಿಸಿಕೊಂಡು ಆಳ್ವಿಕೆ ಮಾಡಿದವನು. ಮತ್ತು ಸುಗ್ಗಲದೇವಿಯ ಗಂಡ. ಈಕೆ ದೇವರ ದಾಸಿಮಯ್ಯನ ಶಿಷ್ಯೆ. ಆತನಿಂದ ಲಿಂಗದೀಕ್ಷೆ ಪಡೆದು ವೀರಶೈವ ಆಚರಣೆಗಳನ್ನು ಪಾಲಿಸಿದಳು. ಎರಡನೆ ಜಯಸಿಂಹನಿಗೆ ಒಂದನೇ ಸೋಮೇಶ್ವರ ಹಾಗೂ ದಾಸರಸ ಎಂಬ ಮಕ್ಕಳೊಂದಿಗೆ ಕುಮಾರ ಜಯಸಿಂಹ ದೇವ

ಎಂಬ ಮತ್ತೊಬ್ಬ ಮಗನಿದ್ದುದ್ದಾಗಿ ಕಲಾರಟ್ಟಿ ಶಾಸನದಿಂದ ತಿಳಿಯುತ್ತದೆ. ಈತನ ಕಾಲದಲ್ಲಿ ಕಲ್ಯಾಣ ರಾಜಧಾನಿಯಾಗಿರಲಿಲ್ಲ.

೩. ಮೂರನೆಯವನು–ಇಮ್ಮಡಿ ಜಯಸಿಂಹನ ಮಗ ಮುಮ್ಮಡಿ ಜಯಸಿಂಹ ಈತನಿಗೆ 'ಸಮರೈಕ ಮಲ್ಲ' ಎಂಬ ಬಿರುದು ಇದ್ದದ್ದು ತಿಳಿದುಬರುತ್ತದೆ.

೪. ನಾಲ್ಕನೆಯವ–ಒಂದನೇ ಸೋಮೇಶ್ವರನ ಮೂರನೆಯ ರಾಜಕುಮಾರ ನಾಲ್ಕನೆಯ ಜಯಸಿಂಹ. ಈತನ ಕಾಲ ಕ್ರಿ.ಶ ೧೦೬೪–೧೧೯೬. ಕ್ರಿ ಶ ೧೦೭೬ ರಲ್ಲಿ ಕಲ್ಯಾಣದಲ್ಲಿ ಅಣ್ಣ ಆರನೇ ವಿಕ್ರಮಾದಿತ್ಯನು ಚಕ್ರವರ್ತಿಯಾಗಿದ್ದಾಗ ಈತನು ಯುವರಾಜನಾಗಿದ್ದನಂತೆ (ಡಾ.ಜೆ.ನಾಗಯ್ಯ, ಆರನೇ ವಿಕ್ರಮಾದಿತ್ಯನ ಶಾಸನಗಳು ಪು.ಸಂ. ೪೯) ಶಾಸನಗಳಿಂದ ತಿಳಿದು ಬರುತ್ತದೆ.

ಇವರಲ್ಲಿ ಮೊದಲಿನವನನ್ನು ಬಿಟ್ಟು ಮೂವರು ಪ್ರಮುಖರಾಗುತ್ತಾರೆ. ಎರಡನೆಯವ ೨ನೇ ಜಯಸಿಂಹ. ಇವನ ಕಾಲದಲ್ಲಿಯೇ ದೇವರದಾಸಿಮಯ್ಯನಿದ್ದುದು. "ಒಂದನೇ ಜಗದೇವ ಮಲ್ಲನೆಂಬ ಬಿರುದಾಂಕಿತನಾದ ೨ನೇ ಜಯಸಿಂಹನು ಕಲ್ಯಾಣಿ, ಪೊಟ್ಟಲಕೆರೆ, ಕೊಲ್ಲಿಪಾಕಿಗಳನ್ನು ರಾಜಧಾನಿಗಳನ್ನಾಗಿ ಮಾಡಿಕೊಂಡು ಆಳುತ್ತಿದ್ದನು".[೨] ಆದರೆ ಆತನ ವಾಸ್ತವ್ಯ ಪೊಟ್ಟಲಕೆರೆಯಲ್ಲಿದ್ದುದಾಗಿ ತಿಳಿದು ಬರುವುದರಿಂದ ಕಲ್ಯಾಣಿ ಹಾಗೂ ಕಲ್ಲಿಪಾಕಿಗಳಲ್ಲಿ ಇನ್ನಾರೋ ದಂಡನಾಯಕರು ಈತನ ಅಧೀನದಲ್ಲಿ ಆಳ್ವಿಕೆ ನಡೆಸುತ್ತಿದ್ದಿರಬಹುದು. ಪಿ.ಬಿ ದೇಸಾಯಿಯವರು ತಮ್ಮ ಕೃತಿಯಾದ ಹಿಸ್ಟರಿ ಆಫ್ ಕರ್ನಾಟಕದದಲ್ಲಿ "ಇಮ್ಮಡಿ ಜಯಸಿಂಹನ ಕಾಲದಲ್ಲಿ ಕಲ್ಯಾಣ ಆತನ ರಾಜಧಾನಿಯಾಗಿತ್ತೆಂಬುದಕ್ಕೆ ಯಾವುದೇ ಶಾಸನಾಧಾರಗಳು ಸಿಗುವುದಿಲ್ಲ. ಬದಲಾಗಿ ಮಾನ್ಯಖೇಡ, ಪೊಟ್ಟಲಕೆರೆ, ಯಾದಗಿರಿಗಳು ಆತನ ರಾಜಧಾನಿಗಳಾಗಿದ್ದವು"[೩] ಎಂದು ಹೇಳುತ್ತಾರೆ. ಇದನ್ನು ಡಾ.ಎಂ.ಎಂ ಕಲಬುರ್ಗಿಯವರು "ಇಮ್ಮಡಿ ಜಯಸಿಂಹನ ಕಾಲದಲ್ಲಿ ಕಲ್ಯಾಣಪಟ್ಟಣವು ಚಾಲುಕ್ಯರ ರಾಜಧಾನಿಯಾಗಿರಲಿಲ್ಲ. ಅದು ರಾಜಧಾನಿಯಾಗಿದ್ದುದು ಇವನ ಮಗ ಮೊದಲನೆಯ ಸೋಮೇಶ್ವರನ ಕಾಲದಲ್ಲಿ (ಕ್ರಿ.ಶ ೧೦೪೫)"[೪]ಎಂದು ಖಚಿತಪಡಿಸುತ್ತಾರೆ.

ಎರಡನೇ ಜಯಸಿಂಹನಿಗೂ–ದೇವರದಾಸಿಮಯ್ಯನಿಗೂ ನೇರ ಸಂಬಂಧವಿದ್ದುದು ಶಾಸನ ಮತ್ತು ಕಾವ್ಯಗಳಿಂದ ತಿಳಿಯುತ್ತದೆ. ಶಂಕರದಾಸಿಮಯ್ಯನಿಗೂ ಮತ್ತೋರ್ವ ಜಯಸಿಂಹನಿಗೂ ನೇರಸಂಬಂಧವಿದ್ದು ಅವನು ಯಾರು ಎಂಬ ಪ್ರಶ್ನೆ ಏಳುತ್ತದೆ. ಮುಮ್ಮಡಿ ಜಯಸಿಂಹನ (ಕ್ರಿ.ಶ ೧೦೬೪–೧೦೮೦)ಎದುರು ಶಂಕರದಾಸಿಮಯ್ಯನು ಕಲ್ಯಾಣದಲ್ಲಿ ವಿಷ್ಣುವಿನ ವಿಗ್ರಹ

ಸುಟ್ಟು ಹಾಕಿರುವ ಸಾಧ್ಯತೆ ಇದೆ[೫] ಎನ್ನುವುದು ಡಾ.ಎಂ.ಎಂ ಕಲಬುರ್ಗಿಯವರ ಅಭಿಪ್ರಾಯ. ಈ ಅಭಿಪ್ರಾಯವನ್ನೆ ಮತ್ತಷ್ಟು ಪುಷ್ಟಿಗೊಳಿಸುವಂತೆ ಅನ್ನಪೂರ್ಣ ಜಾಲವಾದಿಯವರು "ಕಲ್ಯಾಣಿ ಚಾಲುಕ್ಯರ ವಂಶಾವಳಿಯಲ್ಲಿ ಇಮ್ಮಡಿ ಜಯಸಿಂಹನಿಗೆ ಮೊದಲನೆಯ ಸೋಮೇಶ್ವರ, ದಾಸರಸ ಎಂಬ ಇಬ್ಬರು ಮಕ್ಕಳಿದ್ದುದಲ್ಲದೇ ಕುಮಾರ ಜಯಸಿಂಹ ದೇವನೆಂಬ ಇನ್ನೊಬ್ಬ ಮಗನಿದ್ದುದು ೧ನೇ ಸೋಮೇಶ್ವರನ ಕಲಾರಟ್ಟಿ ಶಾಸನದಿಂದ ತಿಳಿದು ಬರುತ್ತದೆ. ಇವನೇ ಮೂರನೇ ಜಯಸಿಂಹನಾಗಿದ್ದು, ಇವನಿಗೆ 'ಸಮರೈಕಮಲ್ಲ' ಎಂಬ ಬಿರುದಿದ್ದುದು ಗೊತ್ತಾಗುತ್ತದೆ"[೬] ಎಂಬ ಚರ್ಚೆಯನ್ನು ಮಂಡಿಸುತ್ತಾರೆ.

ಆದರೆ ಇಲ್ಲಿ ಮುಮ್ಮಡಿ ಜಯಸಿಂಹನೆಂದು ಕರೆಯಲ್ಪಡುತ್ತಿದ್ದದ್ದು ಇಮ್ಮಡಿ ಜಯಸಿಂಹನ ಮಗ ೧ನೇ ಸೋಮೇಶ್ವರನೋ(ಶಾಂತರಸರು ಹೇಳುವಂತೆ ಜೇಡರದಾಸಿಮಯ್ಯನ ಕಾಲದಲ್ಲಿದ್ದಾತ ೧ನೇ ಸೋಮೇಶ್ವರ) ಅಥವಾ ಇನ್ನೋರ್ವ ಮೂರನೇ ಜಯಸಿಂಹ ಹೆಸರಿನವನೋ ತಿಳಿಯುವುದಿಲ್ಲ. ಇನ್ನು ನಾಲ್ಕನೆಯ ಜಯಸಿಂಹ ೧ನೇ ಸೋಮೇಶ್ವರನ ೨ನೇ ರಾಜಕುಮಾರ ಹಾಗೂ ಆರನೇ ವಿಕ್ರಮಾದಿತ್ಯನ ತಮ್ಮ ಎಂಬುದು ತಿಳಿಯುತ್ತದೆ. ೬ನೇ ವಿಕ್ರಮಾದಿತ್ಯನು ಚಕ್ರವರ್ತಿಯಾದಾಗ ಈತನು ಯುವರಾಜನಾಗಿದ್ದುದು ತಿಳಿಯುತ್ತದೆ. ಯುವರಾಜನಾದವನು ಚಕ್ರವರ್ತಿ ಹಾಗೂ ಮುಖ್ಯ ರಾಜಧಾನಿಯೊಡನೆ ಸಂಪರ್ಕವಿಟ್ಟುಕೊಳ್ಳುತ್ತಿದ್ದುದು ಸಹಜ. ಅದರಂತೆ ಅಣ್ಣನಿಂದ ಕೊಡಲ್ಪಟ್ಟ ಬನವಾಸಿ ಮುಂತಾದ ಪ್ರದೇಶಗಳನ್ನು ಆಳುತ್ತಿದ್ದು, ನಾಲ್ಕನೆಯ ಜಯಸಿಂಹನ ಮುಖ್ಯ ರಾಜಧಾನಿ ಕಲ್ಯಾಣವಾಗಿದ್ದು, ಅಲ್ಲಿನ ರಾಜಕೀಯದಲ್ಲಿ ಅಣ್ಣನಿಗೆ ಸಕ್ರಿಯವಾಗಿ ಸಹಕರಿಸುತ್ತಿದ್ದಿರಬೇಕು. ಈತನು ಕ್ರಿ.ಶ ೧೦೮೦–೧೦೮೨ ವರೆಗೆ ರಾಜಧಾನಿ ಕಲ್ಯಾಣವನ್ನು ನೆಲೆವೀಡನ್ನಾಗಿ ಮಾಡಿಕೊಂಡಿದ್ದನೆಂಬುದು ೬ನೇ ವಿಕ್ರಮಾದಿತ್ಯನಿಗೆ ಸಂಬಂಧಿಸಿದ ದಾಖಲೆಗಳಿಂದಲೇ ಸ್ಪಷ್ಟವಾಗುತ್ತದೆ.[೭] ಇವನ ಕಾಲದಲ್ಲಿ ವಿಷ್ಣುದಹನ ಘಟನೆ ನಡೆದಿರುವುದಾದರೆ ಈ ಘಟನೆಯ ಕಾಲ ಕ್ರಿ.ಶ ೧೦೭೫ ಎಂದು ಇಟ್ಟುಕೊಳ್ಳಬಹುದು.[೮] ಅನ್ನಪೂರ್ಣ ಜಾಲವಾದಿಯವರು ಹೇಳುವಂತೆ "ಜೇಡರದಾಸಿಮಯ್ಯನಂಥವನ ಗರ್ವವನ್ನು ಮಾರ್ಮಿಕವಾಗಿ ಭಂಗಿಸುವ ಪ್ರೌಢಿಮೆ, ಭಕ್ತಿ ಪರಿಪಕ್ವತೆಗಳನ್ನು ಮೈಗೂಡಿಸಿಕೊಂಡ ಶಂಕರದಾಸಿಮಯ್ಯನಿಗೆ ಈ ಹೊತ್ತಿಗೆ ಸುಮಾರು ೪೫–೫೦ವರ್ಷ ವಯಸ್ಸಾದರೂ ಆಗಿರಬೇಕು"[೯] ಈ ಎರಡು ಅಂಶಗಳನ್ನು ಗಮನಿಸಿದರೆ ಜೇಡರ ದಾಸಿಮಯ್ಯ ಇವನ ಕಿರಿಯನಿರಬೇಕು ಎನಿಸುತ್ತದೆ ಮತ್ತು ಶಂಕರದಾಸಿಮಯ್ಯನ ಕಾಲದಲ್ಲಿ ವಿಷ್ಣು ವಿಗ್ರಹ ದಹನದ ಸಂದರ್ಭದಲ್ಲಿ ಇದ್ದ ಜಯಸಿಂಹ ೨ನೇ ಜಯಸಿಂಹನಂತೂ ಅಲ್ಲ ಎಂಬುದು ಸ್ಪಷ್ಟಗೊಳ್ಳುತ್ತದೆ. ಹಾಗೆ ಅವರು ಹೇಳುವ ಮತ್ತೊಂದು ಪ್ರಮುಖವಾದ ಅಂಶವೆಂದರೆ ಜೇಡರದಾಸಿಮಯ್ಯನಿಗೆ ಶಂಕರದಾಸಿಮಯ್ಯನು

ಅಹಂನ್ನು ಕಳೆದಂತೆ ಢಕ್ಕೆಯ ಬೊಮ್ಮಣ್ಣನು ಶಂಕರದಾಸಿಮಯ್ಯನ ಗರ್ವಭಂಗಮಾಡಿದನು ಎನ್ನಲಾಗುತ್ತದೆ. ಅದರ ಕಾಲ ಸುಮಾರು ಕ್ರಿ.ಶ.೧೧೨೦[೧೦] ಎನ್ನುವುದಾದರೆ, ಇವರು ಸಮಕಾಲೀನರಾಗಿದ್ದುದ ಸ್ಪಷ್ಟ. ಶಂಕರದಾಸಿಮಯ್ಯನಿಗಿಂತಲೂ ಬೊಮ್ಮಣ್ಣ ಹಿರಿಯನಿರಬಹುದು ಎಂಬ ಗ್ರಹಿಕೆ ಇಲ್ಲಿ ಪ್ರಧಾನವಾಗಿತ್ತದೆ. ಇನ್ನು ಶಂಕರದಾಸಿಮಯ್ಯನ ಮರಣ ಕ್ರಿ.ಶ ೧೧೨೫–೩೦ ಎನ್ನುವುದಾದರೆ, ಜೇಡರದಾಸಿಮಯ್ಯನ ಕಾಲ ಕ್ರಿ.ಶ ೧೦೪೦ ನಂತರದಿಂದ ೧೧೪೦ ಎಂದು ಗುರುತಿಸಬಹುದು.

ಜೇಡರದಾಸಿಮಯ್ಯನ ಊರು ಇಂದಿನ ಯಾದಗಿರಿ ಜಿಲ್ಲೆಯ ಸುರಪುರ ತಾಲ್ಲೂಕಿನ ಮುದನೂರು ಎಂದು ಗುರುತಿಸಲಾಗಿದೆ. ಜೇಡರದಾಸಿಮಯ್ಯನ ಊರು ಮುದನೂರೇ ಎಂದು ಕಾವ್ಯಗಳು ಹಾಗೂ ಶಾಸನಗಳು ದೃಢಪಡಿಸುತ್ತವೆ. ಈ ಊರಿನ ಮಧ್ಯದಲ್ಲಿ ಒಂದು ಹಳ್ಳ ಹರಿಯುವುದರಿಂದ ಇದು ಚಿಕ್ಕಮುದನೂರು ಹಾಗೂ ಹಿರೇಮುದನೂರು ಎಂದು ಭಾಗವಾಗಿದೆ. ಮುದನೂರನ್ನು ರಾಮದತ್ತಿ ಅಗ್ರಹಾರ, ಸರ್ವನಮಸ್ಯದಗ್ರಹಾರ, ಆಮೋದಪುರ, ಮುದ್ರಾಪುರ, ಮಹಾಗ್ರಹಾರ, ಮುದಿನೀರು ಎಂದು ಕರೆಯುತ್ತಿದ್ದುದಾಗಿ ಉಲ್ಲೇಖಗಳಿವೆ. ಬಹುಶಃ ಇದು ಆಗಿನ ಕಾಲದ ಶಿಕ್ಷಣ ಕ್ಷೇತ್ರವೋ ಅಥವಾ ಧಾರ್ಮಿಕ, ಸಾಂಸ್ಕೃತಿಕ ನೆಲೆಯೋ ಆಗಿದ್ದಂತೆ ಕಾಣುತ್ತದೆ. ಈ ಸ್ಥಳವು ಶಾಸನಗಳಲ್ಲಿ, ಕಾವ್ಯಗಳಲ್ಲಿ 'ದಕ್ಷಿಣ ವಾರಣಾಸಿ' ಎಂತಲೂ, 'ದಕ್ಷಿಣದ ಕಾಶಿ' ಎಂತಲೂ ಹೆಸರಾಗಿತ್ತೆಂದು ತಿಳಿದು ಬರುತ್ತದೆ. ಇದು ಸಿಂಹಪರ್ಷೆಯ ಲಕುಳೇಶ ಪರಂಪರೆಯ ಇತಿಹಾಸವನ್ನು ಹೊಂದಿದ ಸ್ಥಳವೂ ಆಗಿದೆ ಎಂದು ವಿದ್ವಾಂಸರು ಗುರುತಿಸುತ್ತಾರೆ.[೧೧] ಮುದನೂರು ಪಾಶುಪತ ನಕುಲೀಶ ಪರಂಪರೆಯ ಮಲೆಯಾಳಪಂಡಿನ ತಾಣವೂ ಆಗಿದ್ದು, ಮುಂದೆ ಈ ಪರಂಪರೆ ಜೇಡರದಾಸಿಮಯ್ಯ ಹಾಗೂ ಇತರ ಶರಣರ ಕಾಲಕ್ಕೆ ಅಭಿನವಪಾಶುಪತ ಅಥವಾ ವೀರಶೈವವಾಗಿ ರೂಪಗೊಂಡುದ್ದು ಇಲ್ಲಿಯೇ ಇರಬೇಕು ಎಂದು ಎಂ.ಎಂ ಕಲಬುರ್ಗಿಯವರು ಅಭಿಪ್ರಾಯಿಸಿದ್ದಾರೆ. ಈ ಅಭಿಪ್ರಾಯದ ಮೇರೆಗೆ ಮುದನೂರು ಒಂದು ಶಿಕ್ಷಣ ಕೇಂದ್ರವೂ ಹಾಗೂ ಸಾಂಸ್ಕೃತಿಕ, ಧಾರ್ಮಿಕ ಚಟುವಟಿಕೆಗಳ ತಾಣವೂ ಆಗಿತ್ತೆನ್ನಲು ಭಿನ್ನಮತವಿಲ್ಲ. ಹಾಗಿದ್ದಲ್ಲಿ ಇದನ್ನು ಅಗ್ರಹಾರವೆನ್ನಲು ವಿರೋಧವಿಲ್ಲವೆಂದಾಗಿದೆ. ಮುದನೂರಿನ ಶಾಸನಗಳಲ್ಲಿಯೇ ದೊರೆಯುವಂತೆ ಇದನ್ನು 'ರಾಮದತ್ತಿ ಅಗ್ರಹಾರ', 'ಸರ್ವಸಮಸ್ಯದಗ್ರಹಾರ' ಎಂದು ಕರೆಯಲಾಗುತ್ತದೆ.

ಮುದನೂರು ಅಥವಾ ಮುದೇನೂರು ಎಂಬ ಸ್ಥಳ ನಾಮವನ್ನು ಎಂ ಚಿದಾನಂದಮೂರ್ತಿಯವರು ಭಾಷಿಕವಾಗಿ ಚರ್ಚಿಸಿದ್ದಾರೆ. "ಮುದ ಅಥವಾ ಮುತ್ ಎಂದರೆ ಹಿಂದಿನ, ಹಳೆಯ ಹಿರಿಯ ಎಂಬರ್ಥಗಳಿವೆ ಎಂದು ಹೇಳುತ್ತಲೇ, 'ಮುದನೂರು' ಅಥವಾ ಮುದೇನೂರಿನ

ಹಿಂದಿನ ಹೆಸರು ಮೊದೆಯ ನೀರ್ (ಇದು ಶಾಸನಗಳಲ್ಲಿ ದಾಖಲಾಗಿದೆ.) ಹೆಸರು ಬರಲಿಕ್ಕೆ ಕಾರಣ ಹೀಗಿದೆ. To advance in growth ಎಂದರೆ ನಿರಂತರ ಬೆಳವಣಿಗೆ. 'ಮೊದೆಯ ನೀರ್' ನಿರಂತರವಾಗಿ ಹರಿಯುತ್ತದೆ ಅಥವಾ ಎಂದೂ ಕಡಿಮೆಯಾಗದ ನೀರಿನ ಚಿಲುಮೆ ಎಂಬರ್ಥವೂ ಆ ಊರ ಹೆಸರಿಂದ ಸೂಚಿತವಾಗುತ್ತದೆ. ಮೂದನೂರಿನಲ್ಲಿ ಒಂಬತ್ತಕ್ಕೆ ಮೇಲ್ಪಟ್ಟು ದೊಡ್ಡ ಬಾವಿಗಳಿಗೆ. ಅಲ್ಲಿಂದ ಜನರು ತೋಟ, ಗದ್ದೆಗಳಿಗೆ ಎಷ್ಟೋ ನೀರು ಹಾಯಿಸಿದರೂ ನೀರು ಬೇಸಿಗೆಯಲ್ಲಿ ಕಡಿಮೆಯಾಗುವುದಿಲ್ಲ. ನೀರಿನ ಒಳ ಹರಿವೂ, ಚಿಲುಮೆಗಳಿದ್ದ ಜಾಗಗಳಲ್ಲಿ ಆ ಬಾವಿಗಳು ನಿರ್ಮಾಣವಾಗಿವೆ. ಮುದು, ಮೊದೆಯ ಎಂದರೆ ಹಿಂದಿನ ಅಥವಾ ನಿರಂತರವಾದ ನೀರಿನ ಕೇಂದ್ರವಾಗಿರುವುದರಿಂದ ಮೊದೆಯ ನೀರ್ ಎಂಬ ಹೆಸರು ಆ ಊರಿಗೆ ಬಂದಿದೆ"[೧೨] ಎಂದು ಭೌಗೋಳಿಕವಾಗಿಯೂ ನಿರೂಪಿಸುತ್ತಾರೆ.

ಎಂ.ಎಂ. ಕಲಬುರ್ಗಿಯವರು ಮಲೆಯಾಳ ಪಂಡಿತನ ಬಗ್ಗೆ ಚರ್ಚಿಸುವಾಗ ಶ್ರೀಕಪಟ್ರಾಳ ಅವರು ಹೇಳಿರುವಂತೆ "ಮುದನೀರು ಎಂದರೆ ಮೊದಲಿನಿಂದಲೂ ಇದ್ದ ನೀರು ಅಂದರೆ 'ಸಮುದ್ರ' ಎಂದು ಅರ್ಥೈಸಿದ್ದನ್ನು ಸಮರ್ಥಿಸಿ ಅದು ಹಿಂದೂ ಮಹಾಸಾಗರದ ತೀರ ರಾಮೇಶ್ವರವಾಗಿರದೆ, ಚಿಕ್ಕ ಮುದನೂರು ಶಾಸನ ಪಾಠದಂತೆ ದಕ್ಷಿಣವಾರಣಾಸಿ ಶಾಸನದ ಮನೆಮುದಿನೀರಲು. ಶ್ರೀ ರಾಮೇಶ್ವರ ದೇವರ್ಗ...... ಬಿಟ್ಟರು"[೧೩] ಎಂಬ ವಾಕ್ಯವನ್ನು ಆಧರಿಸಿ ಮುದಿನೀರು ಎಂದರೆ ಇಲ್ಲಿನ 'ಪವಿತ್ರ ಜಲ' ವೆಂದು ಹೇಳುತ್ತಾರೆ.

ಮುಂದುವರಿದು 'ಜೇಡರ ದಾಸಿಮಯ್ಯನ ಗ್ರಾಮ : ಮುದನೂರು? ಗೊಬ್ಬೂರು?'ಲೇಖನದಲ್ಲಿ ಎಂ.ಎಂ ಕಲಬುರ್ಗಿಯವರು 'ಲಂಡನ್ ರಾಯಲ್ ಏಷ್ಯಾಟಿಕ್ ಸೊಸೈಟಿ'ಯಲ್ಲಿನ ಎಲಿಯಟ್ ಶಾಸನ ಸಂಪುಟವನ್ನಾಧರಿಸಿ ಸುರಪುರ ತಾಲ್ಲೂಕಿನ ಚಿಕ್ಕಮುದನೂರು ಗೋಪಾಲಸ್ವಾಮಿ ದೇವಾಲಯದ ಸ್ತಂಭ ಶಾಸನದಲ್ಲಿ ಮುದನೂರು ದಾಸಯ್ಯಗಳು ಎಂದಿರುವುದಾಗಿ ಡಾ.ಎಸ್.ಸಿ. ನಂದಿಮಠ ಇವರು ತಿಳಿಸಿದ್ದರು. ಆದರೆ ಅದು ಮೂದಿನೀರೂರೊಡೆಯ ಎಂಬ ಪಠ್ಯವಿರುವುದಾಗಿ ಎಂ.ಎಂ ಕಲಬುರ್ಗಿಯವರು ಅನುಮಾನಿಸಿರುವಂತೆ ಕಂಡುಬರುತ್ತದೆ ಎಂದು ಡಾ.ಹನುಮಾಕ್ಷಿ ಗೋಗಿಯವರು ತಮ್ಮ ಸುರಪುರ ತಾಲ್ಲೂಕಿನ ಶಾಸನಗಳು' ಕೃತಿಯಲ್ಲಿ ಸ್ಪಷ್ಟಪಡಿಸಿದ್ದಾರೆ. ಇತ್ತೀಚಿನ ಈ ಹೊಸಪಾಠವನ್ನಾಧರಿಸಿ "ಮುದನೂರುನಲ್ಲಿದ್ದ ಈ ಶಾಸನವು ದಾಸಿಮಯ್ಯನನ್ನು ಪ್ರಸ್ತಾಪಿಸುವುದಿಲ್ಲವೆಂದು ತಿಳಿದು ಬಂದಿದೆಯಾಗಿ, ಇದು ಈತನ ಗ್ರಾಮವಾಗಿರಲಿಕ್ಕಿಲ್ಲ ಎಂದೂ 'ರಾಯಚೂರು ಜಿಲ್ಲೆಯ ಹಿರಿಯ ಗೊಬ್ಬೂರಿನ(ಗಬ್ಬೂರು) ಎರಡು ಶಾಸನಗಳಲ್ಲಿ ಜೇಡರ ದಾಸಿಮಯ್ಯನ ಮತ್ತು ರಾಮನಾಥ ದೇವಾಲಯದ ಉಲ್ಲೇಖ ಬರುವುದರಿಂದ ಇವನ

ಸ್ವಗ್ರಾಮ ಈ ಗೊಬ್ಬೂರು ಗ್ರಾಮವೇ ಆಗಿರಬಹುದು"[೧೪] ಎಂಬ ಚನ್ನಬಸವಯ್ಯ ಹಿರೇಮಠ ಅವರ ತೀರ್ಮಾನವನ್ನು ಎಂ.ಎಂ. ಕಲಬುರ್ಗಿಯವರು ಚರ್ಚಿಸಿ ಅದನ್ನು ಹೀಗೆ ವಿವರಿಸುತ್ತಾರೆ. "ಒಬ್ಬ ವ್ಯಕ್ತಿಯ ಸ್ವಗ್ರಾಮವನ್ನು ನಿರ್ಧರಿಸಲಿಕ್ಕೆ ಅಲ್ಲಿ ಶಾಸನವಿರಲೇ ಬೇಕೆಂಬ ನಿಯಮವಿಲ್ಲ. ಮುದನೂರಿಗೂ ಜೇಡರದಾಇಮಯ್ಯನಿಗೂ ಸ್ವಗ್ರಾಮ ಸಂಬಂಧವಿದ್ದ ಬಗ್ಗೆ ಹಲವಾರು ಕಾವ್ಯ ಪುರಾಣಗಳು ಆಧಾರ ನೀಡುವುದರಿಂದ, ಅಲ್ಲಿಯೂ ರಾಮನಾಥ ದೇವಾಲಯ ಇತ್ಯಾದಿ ಆಧಾರಗಳಿರುವುದರಿಂದ ಮುದನೂರು ಜೇಡರದಾಸಿಮಯ್ಯನ ಸ್ವಗ್ರಾಮವೆಂದು ಒಪ್ಪಬೇಕಾಗುತ್ತದೆ."[೧೫] ಗೊಬ್ಬೂರು ಜೇಡರದಾಸಿಮಯ್ಯನ ಪತ್ನಿ ದುಗ್ಗಳೆಯ ಊರು ಆತನ ಪ್ರಭಾವ ಅಲ್ಲಿಯೂ ಆಗಿರಬಹುದು. ಸಹಜವಾಗಿಯೇ ಆತನ ಬಗೆಗಿನ ಪ್ರಸ್ತಾಪ ಗೊಬ್ಬೂರು ಶಾಸನದಲ್ಲಿ ಬಂದಿರಲು ಸಾಧ್ಯವಿದೆ. ಹರಿಹರ ಶಂಕರದಾಸಿಮಯ್ಯನ ರಗಳೆ, ಭೀಮಕವಿಯ ಬಸವಪುರಾಣ, ರಾಘವಾಂಕನ ದೇವಾಂಗ ದಾಸಿಮಯ್ಯನ ಪುರಾಣ, ಅಯ್ಯಪ್ಪ ಕವಿಯ ದೇವಾಂಗಪುರಾಣಗಳು ಜೇಡರ ದಾಸಿಮಯ್ಯನ ಊರು ಮುದನೂರು ಎಂದೇ ಸಾದರಪಡಿಸುತ್ತವೆ. ಈತನು ಗೊಬ್ಬೂರಿನ ಮಲ್ಲಯ್ಯ ಮಹಾದೇವಿಯರ ಮಗಳು ದುಗ್ಗಳೆಯನ್ನು ವಿವಾಹವಾಗಿ, ಪವಾಡಗಳನ್ನು ಮೆರೆದು, ಒಂದಿಷ್ಟು ಕಾಲ ಅಲ್ಲಿಯೇ ವಾಸವಿದ್ದು ನಂತರ ಮತ್ತೆ ಮುದನೂರಿಗೆ ಬಂದಿರುವುದಾಗಿ ರಾಘವಾಂಕನ ದೇವಾಂಗ ದಾಸಿಮಯ್ಯ ಪುರಾಣವನ್ನಾಧರಿಸಿ ಸಮರ್ಥಿಸುತ್ತಾರೆ.

ಈ ಎಲ್ಲಾ ಅಂಶಗಳನ್ನು ಗಮನಿಸಿ ಮುದನೂರು ಒಂದು ಶೈವ ಕೇಂದ್ರವಾಗಿದ್ದು, ಸಾಂಸ್ಕೃತಿಕ ಹಾಗೂ ಧಾರ್ಮಿಕವಾಗಿ ಪ್ರೌಢಿಮೆಯುಳ್ಳ ಗ್ರಾಮವಾಗಿತ್ತು. ಜೇಡರದಾಸಿಮಯ್ಯನ ವಚನಗಳು ಹಾಗೂ ಜೀವನವನ್ನು ಗಮನಿಸಿದಾಗ ಈತ ಇಲ್ಲಿಯೇ ಜನಿಸಿ ಬೆಳೆದು ನಂತರ ತನ್ನ ಜ್ಞಾನದ ಹಿರಿಮೆಯನ್ನು ಸಾಧಿಸಲು ಲೋಕಸಂಚಾರ ಮಾಡಿರಬೇಕು. ಹೀಗೆ ಸಂಚರಿಸುವಾಗ ಗೊಬ್ಬೂರಿನ ಮಲ್ಲಯ್ಯ ಮಹಾದೇವಿಯರ ಮಗಳು ದುಗ್ಗಳೆಯನ್ನು ವಿವಾಹವಾಗಿ ಮತ್ತೆ ತನ್ನ ಸ್ವಗ್ರಾಮ ಮುದನೂರಿಗೆ ಬಂದು ವಾಸವಾಗಿರಬೇಕು. ಆತನ ವಚನಗಳ ಅಂಕಿತ 'ರಾಮನಾಥ'. ಈ ದೇವಾಲಯ ಮೂದನೂರಿನಲ್ಲಿ ಇದೆ. ತನ್ನ ಬಾಲ್ಯದಿಂದಲೂ ಕಂಡು, ಅರಿತು, ಪ್ರೇರಣೆ ಪಡೆದ ದೈವವನ್ನೇ ತಾನು ಅಂಕಿತವಾಗಿ ಇಟ್ಟುಕೊಂಡಿರಬೇಕು. ಈ ಎಲ್ಲಾ ಆಧಾರಗಳಿಂದ ಜೇಡರದಾಸಿಮಯ್ಯನ ಊರು "ಮುದನೂರು" ಎಂದು ನಿರ್ಧರಿಸಲಾಗಿದೆ.

**'ರಾಮನಾಥ' ಅಂಕಿತ ಚರ್ಚೆ**

ಈವರೆಗೆ ನಮಗೆ ಜೇಡರ ದಾಸಿಮಯ್ಯನ ಅನೇಕ (ಸುಮಾರು ೧೭೫) ವಚನಗಳು ದೊರೆತಿದ್ದು, ಆ ಎಲ್ಲಾ ವಚನಗಳ ಅಂಕಿತ 'ರಾಮನಾಥ'

ಇಳೆ ನಿಮ್ಮ ದಾನ ಬೆಳೆನಿಮ್ಮ ದಾನ
ಸುಳಿದು ಬೀಸುವವಾಯು ನಿಮ್ಮದಾನ
ನಿಮ್ಮ ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳನೇನೆಂಬೆ, 'ರಾಮನಾಥ'.[೧೬]

"ಈ ಸೀರೆಯ ನೇಯ್ಯುವ ನಾನೊ ನೀನೋ ? ರಾಮನಾಥ"[೧೭]

"ಗುರು ಚರಣದ ಮೇಲೆ ತನುತೃಣವನಿರಿಸಿದಡೆ-
ಆ ತನುವೆಲ್ಲ ಲಿಂಗಮಯ ಕಾಣಾ! ರಾಮನಾಥ"[೧೮]

ಇಲ್ಲಿ 'ರಾಮನಾಥ' ಎಂಬ ಅಂಕಿತನಾಮದ ಚರ್ಚೆ ಅವಶ್ಯವೇ? ಎಂಬ ಪ್ರಶ್ನೆ ಪ್ರಮುಖವಾಗುತ್ತದೆ. ಹೌದು 'ರಾಮನಾಥ' ಅಂಕಿತದಲ್ಲಿ ವಚನಗಳನ್ನು ಬರೆದಾತ ಜೇಡರದಾಸಿಮಯ್ಯ ಆದರೆ ಕೆಲವೆಡೆಗಳಲ್ಲಿ ದೇವರದಾಸಿಮಯ್ಯನ ಅಂಕಿತವೂ 'ರಾಮನಾಥ' ಎಂದೇ ಇರಬಹುದಾಗಿ ಅನುಮಾನಿಸಲಾಗಿದೆ. ಆದರೆ ದೇವರದಾಸಿಮಯ್ಯ ವಚನಕಾರನಾಗಿರದೆ, ರಾಮನಾಥನ ಆರಾಧಕನಾಗಿರಬಹುದು. ಹಾಗಾಗಿ ಇಬ್ಬರ ದೈವ ಒಂದೇ ಅದು ರಾಮನಾಥ. ಕನ್ನಡದ ವಚನ ಸಾಹಿತ್ಯ ಹಾಗೂ ಶರಣರ ಇತಿಹಾಸವನ್ನು ಗಮನಿಸಿದಾಗ ವಚನಕಾರನಾಗಿ ಅದರಲ್ಲೂ ಆದ್ಯವಚನಕಾರ ಎಂದು ಗುರುತಿಸಲ್ಪಟ್ಟವನು, ರಾಮನಾಥ ಅಂಕಿತವುಳ್ಳ ಜೇಡರ ದಾಸಿಮಯ್ಯ. ಉತ್ತರೇಶ್ವರ ಲಿಂಗಕ್ಕೆ ಸಂಬಂಧಿಸಿದವನು ದೇವರದಾಸಿಮಯ್ಯ, ಈ ಇಬ್ಬರೂ ರಾಮನಾಥನ ಭಕ್ತರೇ ಆದರೆ ಒಬ್ಬ ಅದನ್ನು ಅಂಕಿತವಾಗಿಸಿಕೊಂಡರೆ, ಮತ್ತೊಬ್ಬ ಅದನ್ನು ಬದುಕಿನ ಧ್ಯೇಯವಾಗಿಸಿಕೊಂಡವನು. ಬಸವ ಪುರಾಣದಲ್ಲಿ[೧೯] ಇದು ಸಾಂದರ್ಭಿಕವಾಗಿ ಉಲ್ಲೇಖಗೊಂಡಿದೆ.

**ಜೇಡರದಾಸಿಮಯ್ಯನ ವೃತ್ತಿ, ವಿವಾಹ, ತವನಿಧಿಗಳ ವಿವರ**

ಸಾಮಾನ್ಯರನ್ನು ಅವರ ಸಾಧನೆಯಿಂದ ವಿಪರೀತಚರಿತರನ್ನಾಗಿಯೂ, ಸಂತರನ್ನಾಗಿಯೂ, ಪವಾಡಪುರಷನನ್ನಾಗಿಯೂ ಜನರು ಕಾಣುತ್ತಿದ್ದು, ಅವುಗಳನ್ನು ಅವರ ಕಾವ್ಯ, ಪುರಾಣಗಳಲ್ಲಿಯೂ ದಾಖಲಿಸುವ ಕಾರ್ಯ ನಡೆಸಿದುದ್ದು ಕಂಡು ಬರುತ್ತದೆ. ಈ ರೀತಿಯ ಪುರಾಣಗಳನ್ನು ಕಾವ್ಯಗಳಲ್ಲಿನ ಪವಾಡ ದಾಖಲೆಗಳನ್ನು ಆಧುನಿಕಕ್ಕೆ ಮುಖಾಮುಖಿಯಾಗಿ ಸಮನ್ವಯಗೊಳಿಸುವ ಸಂವಾದವೂ ನಡೆಯುತ್ತಿದೆ. ಇದಕ್ಕೆ ಸರಿ ಎಂಬಂತೆ ಅನೇಕ ಅಧ್ಯಯನಗಳು ನಡೆದಿದ್ದು, ಅದರ ಮುಂದುವರಿದ ಅಧ್ಯಯನದ ಸಾಧ್ಯತೆಗಳನ್ನು ಹಿರಿಯ ತಲೆಮಾರಿನವರು ಬಿಟ್ಟು ಹೋಗಿದ್ದಾರೆ. ಈ ಎಲ್ಲವುಗಳ ಸರಿಸಮನಿಕೆಗಳ ಜೋಳಿಯಲ್ಲಿ ಹೊಸ ಶೋಧಗಳಿಗೆ ಬೆಳಕು ಪ್ರಸರಿಸುತ್ತಿದೆ ಅದರಲ್ಲಿ ಪ್ರಮುಖರೆನಿಸಿರುವುದು ವೀರಶೈವ ಶರಣರ ಕುರಿತಾದ ಸಾಹಿತ್ಯ

ಹಾಗೂ ಇದರ ನೆಲೆಯಲ್ಲಿ ಕಂಡುಕೊಳ್ಳಬಹುದಾದ ಸತ್ಯ. ಇಲ್ಲಿ ಪುರಾಣ ಹಾಗೂ ಚರಿತ್ರೆಯು ಬಿಡಿಸಲಾಗದಂತೆ ಸೇರಿಹೋಗಿರುವುದು ಇವುಗಳ ಕುರಿತ ಅಧ್ಯಯನಗಳ ಸವಾಲಾಗಿ ಕಂಡು ಬಂದಿದೆ. ಆದಾಗ್ಯೂ ಪುರಾಣ ಕಾವ್ಯಗಳನ್ನು ಅಂದಿನ ಸಾಮಾಜಿಕತೆಯನ್ನಾಧರಿಸಿ ಪ್ರಸ್ತುತಗೊಳಿಸುವ ಕಾರ್ಯ ನಡೆಯುತ್ತಿದೆ. ಈ ಹಿನ್ನೆಲೆಯಲ್ಲಿಯೇ ಜೇಡರದಾಸಿಮಯ್ಯನ ವೈಯಕ್ತಿಕ ವಿವರಗಳ ಅಧ್ಯಯನ ಪ್ರಮುಖವಾಗುತ್ತದೆ.

ಕಾಯಕ ಪರಿಕಲ್ಪನೆಯನ್ನು ಪರಿಚಯಿಸಿಕೊಟ್ಟವರು ಶರಣರು. ಕಾಯಕ ಎಂಬದು ಸಂಸ್ಕೃತದ 'ಕಾಯ' ಎಂಬ ಪದದಿಂದ ಬಂದುದಾಗಿದೆ. ವಚನಕಾರರು ತಂದ ಸಂಸ್ಕೃತ ಪದಗಳ ಹೊಸ ಅರ್ಥದಲ್ಲಿ ಚಲಾವಣೆಗೊಂಡ ಪದಗಳಲ್ಲಿ ಇದೂ ಒಂದು. ವಚನಕಾರರಲ್ಲಿ ಅಥವಾ ಶರಣರಲ್ಲಿ ಕಾಯಕ ತತ್ವ ವಿಶಿಷ್ಟ ಅರ್ಥವನ್ನು ಪಡೆದುಕೊಂಡಿದೆ. 'ಕಾಯಕ' ಎಂಬುದು 'ದೇಹಕ್ಕೆ ಸಂಬಂಧಿಸಿದ ಪದ. ಆಚರಣೆಗಳಲ್ಲಿ ಹೊಸದನ್ನು ಹಾಗೂ ಸಂಪ್ರದಾಯದ ಹೆಸರಿನಲ್ಲಿ 'ಕಾಯಕ' ತತ್ವವನ್ನು ಸಾಧಿಸಿದ್ದನ್ನು ನೈತಿಕ ಹೊಣೆ ಹೊತ್ತು ಆಚರಣೆಗೆ ತಂದವರು ವಚನಕಾರರು.

"ಪ್ರತಿಯೊಬ್ಬ ಮನುಷ್ಯನೂ ಈ ಲೋಕದಲ್ಲಿ ಬದುಕಲು ಅರ್ಹನಾಗಬೇಕಾದರೆ ತನಗೆ ಅನುಗುಣವಾದ ಅಥವಾ ಸಾಧ್ಯವಾದ ವೃತ್ತಿಯೊಂದನ್ನು ಅವಲಂಬಿಸಲೇ ಬೇಕು. ಇಡೀ ವಿಶ್ವವನ್ನೇ ಸೃಷ್ಟಿಸಿರುವ ಭಗವಂತನೂ ಒಂದು ವೃತ್ತಿಯನ್ನು ಅವಲಂಬಿಸಿದವನೇ ಆಗಿದ್ದಾನೆ! ತಾನು ವಾಸ್ತವವಾಗಿ ಕಷ್ಟಪಡದೆ, ಪರಾವಲಂಬಿಯಾಗುವುದನ್ನು ಅಥವಾ ಇತರರ ಕ್ರಮವನ್ನು ತನ್ನ ಸುಖಕ್ಕೆ ತಿರುಗಿಸಿಕೊಳ್ಳುವ ಜಾಣತನವನ್ನು ಕಾಯಕ ತತ್ವ ಒಪ್ಪುವುದಿಲ್ಲ".[೨೦] 'ವೃತ್ತಿ' ಕಾಯಕವಾಗಿ ಬದಲಾಗುವಲ್ಲಿ ವಚನಕಾರರ ಆಧ್ಯಾತ್ಮಿಕ ಸಾಧನೆಯೂ ಅಷ್ಟು ಮುಖ್ಯವಾಗುತ್ತದೆ. "ಆಧ್ಯಾತ್ಮ ಸ್ಪರ್ಷವಿಲ್ಲದ್ದರೆ ವೃತ್ತಿ ವೃತ್ತಿಯಾಗಿ ಉಳಿಯುವುದೇ ಹೊರತು ಕಾಯಕವೆಂಬ ಹೆಸರಿಗೆ ಅರ್ಹವಾಗಲಾರದು"[೨೧] ಈ ಕಾರಣಕ್ಕಾಗಿ ವಚನಕಾರರು ವೃತ್ತಿಗೆ ಅತಿ ಹೆಚ್ಚು ಪ್ರಾಮುಖ್ಯತೆ ನೀಡುತ್ತಿದ್ದು, ಇದು ಸಾಮಾಜಿಕ ನಡುಗೆಗೂ ಅವಶ್ಯಕವಾಗಿದ್ದಿತು. ಪ್ರತಿಯೊಬ್ಬರೂ ಒಂದು ವೃತ್ತಿಯನ್ನು ಅವಲಂಬಿಸಿದ್ದು ಆ ವೃತಿಯನ್ನಾಧರಿಸಿಯೇ ಅವರ ಹೆಸರುಗಳು ಉದ್ಗಾರ ಗೊಳ್ಳಲಾರಂಭಿಸಿದವು. ಅಂತೆಯೇ ಮಾದರ ಚೆನ್ನಯ್ಯ, ಗಣದಾಸಿ ವೀರಣ್ಣ, ಮಡಿವಾಳ ಮಾಚಿದೇವ, ಅಂಬಿಗರ ಚೌಡಯ್ಯ, ಸೂಳೆ ಸಂಕವ್ವೆ, ಡೋಹಾರ ಕಕ್ಕಯ್ಯ ಇವರುಗಳನ್ನು ನೋಡಬಹುದು. ಜೇಡರದಾಸಿಮಯ್ಯನೇ ಹೇಳಿಕೊಂಡಿರುವಂತೆ ಈತನ ವೃತ್ತಿ ನೇಕಾರಿಕೆ.

'ಉಂಕೆಯ ನಿಗುಚಿ ಸರಿಗೆಯ ಸಮಗೊಳಿಸಿ' ಎಂಬ ವಚನವು ಆತನ ವೃತ್ತಿಯನ್ನಾಧರಿಸಿದ ಅನುಭಾವ ಪ್ರಜ್ಞೆಯ ದ್ಯೋತಕವಾಗಿದೆ. ಶಾಸನಗಳಲ್ಲಿ ಸಿಗುವಂತೆ ಜೇಡರನ್ನು ಸಾಲಿಗರು, ಸಾಲೆ ಸಾಸಿರ್ವರು, ಪಟ್ಟ ಸಾಲಿಗರು, ಪಟ್ಟಗಾರರು ಎಂದು ಕರೆಯುತ್ತಿದ್ದು, ಇವುಗಳೊಂದಿಗೆ

ದೇವಾಂಗರು ಎಂಬ ಪದವೂ ಇದೆ(ದೇವಾಂಗ ಎಂಬ ಋಷಿಯ ವಂಶಸ್ಥರು ಎಂಬ ನಂಬಿಕೆ). ಇದನ್ನೆ ಎಂ.ಚಿದಾನಂದಮೂರ್ತಿಯವರು ಮುಂದುವರೆದು 'ದೇವರ' ವಿಶೇಷಣಕ್ಕೆ ಮೂಲವಾಗಿ ಆಂಧ್ರ ಪ್ರದೇಶದಲ್ಲಿ ದೇಡರು, ತೇಡರು ಎಂದು ಕರೆಯುವುದಾಗಿ ವಿವರಿಸುತ್ತಾರೆ. ಮತ್ತು ಜೇಂಡ್ರ, ದೇಂಡ್ರ ಎಂಬ ವಿಶೇಷಣಗಳ ಬಳಕೆ ತೆಲುಗಿನಲ್ಲಿದೆ ಎನ್ನುತ್ತಾರೆ. ಜೇಡರದಾಸಿಮಯ್ಯ ಇದೆ ಕಾಯಕದವನ್ನೆನ್ನಲು ಅನೇಕ ಆಧಾರಗಳಿವೆ. ಮುದನೂರಿನ ರಾಮನಾಥ ದೇವಾಲಯದ ಪಕ್ಕದಲ್ಲಿಯೇ ನೇಯ್ಗೆಗೆ ಬೇಕಾದ ಅವಶ್ಯಕ ಪರಿಕರಣಗಳ ಕೋಣೆ ಆತನ ವೃತ್ತಿಯನ್ನು ತಿಳಿಸುತ್ತದೆ. ಇದು ಆತನ ಕಾಯಕ ನಿಷ್ಠೆಯ ಪ್ರತೀಕವೂ ಹೌದು.

ಜೇಡರದಾಸಿಮಯ್ಯನ ದಾಂಪತ್ಯ ಅತ್ಯಂತ ಆದರ್ಶಪ್ರಾಯವೆಂಬುದಕ್ಕೆ ಆತನೇ ತನ್ನ ಒಂದು ವಚನದಲ್ಲಿ ಹೀಗೆ ಹೇಳಿದ್ದಾನೆ.

ಬಂದುದನರಿದು ಬಳಸುವಳು
ಬಂದುದ ಪರಿಣಾಮಿಸುವಳು
ಬಂಧು ಬಳಗವ ಮರಸುವಳು
ದುಗ್ಗಳೆಯ ತಂದು ಬದುಕಿದೆನು ಕಾಣ! ರಾಮನಾಥ॥

ಇದನ್ನು ಎಂ.ಚಿದಾನಂದಮೂರ್ತಿಯವರು ಹೀಗೆ ವಿವರಿಸುತ್ತಾರೆ. "ತನ್ನ ಬದುಕಿನ ಆಶಯವನ್ನು ತನ್ನ ಪತ್ನಿ ಈಡೇರಿಸಿದಳು. ಅಂತಹ ದುಗ್ಗಳೆಯನ್ನು ತಂದು ಬದುಕಿದೆ ಎಂದಿದ್ದಾನೆ. 'ತಂದು' ಎನ್ನುವ ಮಾತು ಧ್ವನಿಪೂರ್ಣವಾದುದು. ದುಗ್ಗಳೆ ಅವಳ ತಂದೆ ತಾಯಂದಿರು ಹುಡುಕಿಕೊಟ್ಟು ಮದುವೆ ಮಾಡಿದ ಹೆಣ್ಣಲ್ಲ ತಾನು 'ತಂದು' ಎಂದರೆ ತಾನೇ ಆಯ್ಕೆ ಮಾಡಿ ಮದುವೆಯಾದ ಪತ್ನಿ ಎಂದಿದ್ದಾರೆ. 'ತಂದು' ಮಾತನ್ನು ಗಮನಿಸಿದರೆ ಜೇಡರದಾಸಿಮಯ್ಯ ಮುದನೂರಿನವನು. ದುಗ್ಗಳೆ ಬೇರೆ ಊರಿನವಳು ಎಂಬುದು ಸೂಚಿತವಾಗುತ್ತದೆ".[೨೨] ಹೌದು ದುಗ್ಗಳೆಯ ತವರು ಅಥವಾ ಊರು ಹತ್ತಿರದ ರಾಯಚೂರು ಜಿಲ್ಲೆಯ ಗೊಬ್ಬೂರು(ಗುಲ್ಬರ್ಗಾ ಜಿಲ್ಲೆಯ ಅಫಜಲಪುರ ತಾಲ್ಲೂಕಿನ ಗೊಬ್ಬೂರು[೨೩])ನ ಮಲ್ಲಿನಾಥ ಮತ್ತು ಮಹಾದೇವಿ ದಂಪತಿಗಳ ಮಗಳಾದ ದುಗ್ಗಳೆಯೊಂದಿಗೆ ವಿವಾಹವಾದುದಾಗಿ ತಿಳಿದು ಬರುತ್ತದೆ. ಗೊಬ್ಬೂರು ದುಗ್ಗಳೆಯ ತವರು ಎಂಬುದಂತು ಸತ್ಯ. ಮುದನೂರಿಗೆ ಸಮೀಪವೆಂಬ ಕಾರಣಕ್ಕೆ ಗುಲ್ಬರ್ಗ ಜಿಲ್ಲೆಯ ಗೊಬ್ಬುರನ್ನು ದುಗ್ಗಳೆಯ ಊರು ಎಂದಿರುವ ಸಾಧ್ಯತೆ ಗಳಿವೆಯಾದರೂ, ರಾಯಚೂರಿನ ಗೊಬ್ಬೂರಿನಲ್ಲಿ ದೊರೆತ ಶಾಸನಗಳಲ್ಲಿ ಜೇಡರದಾಸಿಮಯ್ಯನ ಉಲ್ಲೇಖಗಳಿವೆ. ಈ ಆಧಾರಗಳನ್ನು ಅನುಸರಿಸಿ ದುಗ್ಗಳೆಯ ಊರು ಗೊಬ್ಬೂರು ಎಂದು ನಿರ್ಧರಿಸಬಹುದಾಗಿದೆ.

ಜೇಡರದಾಸಿಮಯ್ಯನು ತಾನು ಜ್ಞಾನ ಸಂಪಾದನೆಗಾಗಿ ಲೋಕ ಸಂಚಾರ ಕೈಗೊಂಡು ನಂತರ ವಿವಾಹದ ಕಾರ್ಯ ನಿರ್ಧಾರ ಮಾಡುತ್ತಾನೆ. ಆತನ ವಚನದಲ್ಲಿ ನಿರೂಪಿಸಿದಂತಹ ಪತ್ನಿಗಾಗಿ ಅನ್ವೇಷಣೆ ನಡೆಸುತ್ತಾನಾದರು ಬೇಗ ದೊರೆಯುವುದಿಲ್ಲ. ತನ್ನ ಮನಸ್ಸನ್ನು ಅರ್ಥಮಾಡಿಕೊಂಡು ನಡೆಯುವ ಹೆಣ್ಣಿಗಾಗಿಯೇ ಕಾಯುತ್ತಾನೆ. ಹೀಗೆ ಊರೂರು ಅಲೆಯುತ್ತಿರುತ್ತಾನೆ. ಬುದ್ಧಿವಂತ ಹೆಣ್ಣನ್ನು ತಾನು ವಿವಾಹವಾಗುವ ಪಣತೊಡುತ್ತಾನೆ. ಅಂತಹ ಹೆಣ್ಣಿನ ಪರೀಕ್ಷೆಗಾಗಿ ಮಳಲಕ್ಕಿ (ಮರಳು+ಅಕ್ಕಿ) ಬೆರೆಸಿದ್ದು, ಅದರಿಂದ ಪಾಯಸ ಮಾಡಿ ಬಡಿಸಬೇಕಾಗಿ ಷರತ್ತು ಒಡ್ಡುತ್ತಾನೆ. ಇದು ಸುಲಭವೇ ಆಗಬಹುದು. ಆದರೆ ಜೇಡರದಾಸಿಮಯ್ಯನ ಷರತ್ತು ಈ ಮರಳಕ್ಕಿ ಪಾಯಸವನ್ನು ನೀರು ಹಾಗೂ ಸೌದೆ ಮುಟ್ಟದಂತೆಯೇ ಮಾಡುವುದಾಗಿತ್ತು. ಹೀಗೆ ಒಂದು ಊರಿಗೆ ಹೋಗಿ ಒಂದಿಷ್ಟು ಮರಳು ಬೆರೆಸಿದ ಅಕ್ಕಿ ಒಂದು ಕಟ್ಟು ಕಬ್ಬು ಕೊಟ್ಟು, ಕಟ್ಟಿಗೆ ಮುಟ್ಟದೆ ನೀರಿಲ್ಲದೇ ಇಷ್ಟರಿಂದಲೇ ಮರಳಕ್ಕಿ ಪಾಯಸ ಮಾಡಿದ ಹೆಣ್ಣನ್ನು ಮದುವೆಯಾಗುತ್ತೇನೆ ಎಂದು ಹೇಳುತ್ತಾನೆ. 'ಎನ್ನ ಮನದ ಮರ್ಮವ ಬಲ್ಲ ಸ್ತ್ರೀಯನಲ್ಲದೊಲ್ಲೆ' ಎಂದು ವಧುವಿಗಾಗಿ ಅಲೆಯುವಾಗ ಗೊಬ್ಬೂರಿನ[೨೪]ಮಲ್ಲಿನಾಥ (ಮಲ್ಲಯ್ಯ ಮತ್ತು ಮಹಾದೇವಿ ಎಂಬ ದಂಪತಿಯ ಮಗಳು ದುಗ್ಗಳೆ ಆತನ ಪರೀಕ್ಷೆಗೆ ಒಪ್ಪಿ ಮುಂದೆ ಬಂದಳು, ಇನ್ನಷ್ಟು ಕಬ್ಬನ್ನು ತಂದು ಕೊಡಲು ಕೇಳುತ್ತಾಳೆ. ಅದಕ್ಕೆ ಸಹಕಾರವೆಂಬಂತೆ ದಾಸಿಮಯ್ಯ ತಂದು ನೀಡಲು, ಆಕೆ ಕಬ್ಬಿನ ರಸವನ್ನು ಅಕ್ಕಿಗೆ ಬೆರೆಸಿ ಬೇಯಿಸಲು ಪಾಯಸ ಕುದಿಯುತ್ತದೆ. ನಂತರ ಅಕ್ಕಿಯೆಲ್ಲ ಮೇಲೆ ಬಂದು ಮರಳು ಕೆಳಗುಳಿಯುತ್ತದೆ. ಹೀಗೆ ಅದರ ಮೇಲಿನ ದ್ರವವನ್ನು ತಾಟಿಗೆ ಬಸಿಯಲು ಮರಳು ಮತ್ತು ಅಕ್ಕಿಗಳು ಬೇರೆಗೊಳ್ಳುತ್ತವೆ. ಹೀಗೆ ಆಕೆಯು ಜಾಣ್ಮೆಯನ್ನು ಪ್ರದರ್ಶಿಸಿ ದಾಸಿಮಯ್ಯನ ಸವಾಲನ್ನು ಗೆಲ್ಲುತ್ತಾಳೆ. ದಾಸಿಮಯ್ಯ ದುಗ್ಗಳೆಯನ್ನು ವಿವಾಹವಾಗಿ ಸ್ವಲ್ಪಕಾಲದ ನಂತರ ಮುದನೂರಿಗೆ ಬಂದು ನೆಲೆಸಿದಂತೆ ಕಾಣುತ್ತದೆ. ದಾಸಿಮಯ್ಯ ಹಾಗೂ ದುಗ್ಗಳೆಯ ವೈವಾಹಿಕ ಬದುಕಿನ ಅನ್ಯೋನ್ಯತೆಯನ್ನು, ಆದರ್ಶ ದಾಂಪತ್ಯವೆಂಬಂತೆಯೇ ಗೌರವಿಸುತ್ತಿರುವುದನ್ನು ಅಂದಿನ ವಚನಕಾರರಿಂದ ಇಂದಿನ ಸಂಶೋಧಕರವರೆಗೂ ಕಾಣುತ್ತೇವೆ. ಈ ದಂಪತಿಗಳ ಬಗ್ಗೆ ಇನ್ನೂ ಒಂದು ಕತೆ ಪ್ರಚಲಿತವಿದೆ. ಒಮ್ಮೆ ಇಬ್ಬರು ಜಂಗಮರಲ್ಲಿ ವಾಗ್ವಾದವಾಗಲು 'ಸನ್ಯಾಸ ಹೆಚ್ಚೋ ಸಂಸಾರ ಹೆಚ್ಚೊ' ಎಂದು ಆಮಿಷವಾಗಿ ತಿರ್ಮಾನ ಕೇಳಲು ದಾಸಿಮಯ್ಯನ ಬಳಿಗೆ ಬರುತ್ತಾರೆ. ಬಂದ ಜಂಗಮರನ್ನು ಆತ ಪ್ರೀತಿ ಆದರಗಳಿಂದ ಬರಮಾಡಿಕೊಂಡು ಮನೆಯಲ್ಲಿ ಕುಳ್ಳಿರಿಸಿ ಅವರ ಎದುರಿಗೆ ದಾಸಿಮಯ್ಯನು ದುಗ್ಗಳೆಯನ್ನು ಕರೆದು ಮಧ್ಯಾನ ಚೆನ್ನಾಗಿ ಬಿಸಿಲು ಬೆಳಕು ಇರುವ ಸಂದರ್ಭದಲ್ಲಿ ದೀಪವನ್ನು ತಾ ಎಂದು ಕೇಳುತ್ತಾನೆ. ಆಕೆ ಮರುಮಾತನಾಡದೇ ತಂದು ಕೊಡುತ್ತಾಳೆ. ಮತ್ತೊಮ್ಮೆ ಕರೆದು ತನ್ನ

ತಲೆಯ ಮೇಲೆ ಕೈಯಂತರದಲ್ಲಿ ಸಿಗುವ 'ಕುಂಚಿಗೆ'ಯನ್ನು ತೆಗೆದುಕೊಡು ಎಂದು ಕೇಳುತ್ತಾನೆ. ಆಕೆ ಬಂದು ನಿಂತು ಬೇಸರಿಸಿಕೊಳ್ಳದೇ ಕೈಗಿಟ್ಟು ಹೋಗುತ್ತಾಳೆ. ನಂತರ ಬಂದ ಚರಮೂರ್ತಿಗಳೊಂದಿಗೆ ಪ್ರಸಾದ ತೆಗೆದು ಕೊಳ್ಳುವಾಗ 'ಮೊನ್ನೆ ಅಟ್ಟ ಅಂಬಳಕ ಕೈಸುಟ್ಟೀತು ಆರಿಸೆನಲು' (ಮೊನ್ನೆ ಮಾಡಿದ ಅಂಬಳಕಲ್ಲ) ಮೊರವನ್ನು ತಂದು ಆ ಬಿಸಿಯಲ್ಲದ ಅಂಬಲಿಯನ್ನೇ ಆರಿಸುತ್ತಾಳೆ. ಚರಮೂರ್ತಿಗಳಿಗೆ ನಡೆಯುತ್ತಿರುವುದೇನೆಂದು ಅರ್ಥವಾಗದ ಕಾರಣ ಅವರು ದಾಸಿಮಯ್ಯನನ್ನು ಕೇಳಲು ಮಾತಿಗೆ ಎದುರಾಡದ ಇಂತಹ ಹೆಂಡತಿ ಇರಲು ಸಂಸಾರವೇ ಲೇಸು, ಇಲ್ಲವಾದಲ್ಲಿ ಸನ್ಯಾಸವೇ ಲೇಸು ಎಂದು ಉತ್ತರಿಸುತ್ತಾನೆ.

ಇವರ ದಾಂಪತ್ಯದ ಇನ್ನೊಂದು ಪ್ರಮುಖ ಘಟನೆ ಎಂದರೆ ದಾಸಿಮಯ್ಯ, ಶಿವನಿಗೆ (ಜಂಗಮ) ೧೨ವರ್ಷ[೨೫] ನೇಯ್ದ ಬಟ್ಟೆಯನ್ನು ಕೊಡಲು, ಆತ ಅದನ್ನು ಅಲ್ಲಿಯೇ ಹರಿದು ಚೂರಾಗಿಸುವುದನ್ನು ಕಂಡಾಗಲೂ ದುಗ್ಗಳೆ ತನ್ನ ಸತಿಧರ್ಮವನ್ನು ಬಿಟ್ಟುಕೊಡುವುದಿಲ್ಲ. ಈ ಇಬ್ಬರ ಜೋಡಿ ಕನ್ನಡ ನಾಡಿನ ಚರಿತ್ರೆಯಲ್ಲಿ ಬಂದಂತಹ ಅಪೂರ್ವ ದಾಂಪತ್ಯ ಜೋಡಿಗಳಲ್ಲಿ ಒಂದು ಎಂದರೂ ತಪ್ಪಾಗಲಾರದು.

### ತವನಿಧಿ ಪ್ರಸಂಗ

'ತವನಿಧಿ' ಎಂದರೆ–ತವೆ ಎಂದರೆ ಕ್ಷೀಣಿಸು, ಕ್ಷಯಿಸು ಎಂದಾಗುತ್ತದೆ. 'ತವೆಯದ' ಎಂಬುದು ಕ್ಷೀಣಿಸದ, ಕ್ಷಯಿಸದ ಎಂಬ ಅರ್ಥದ್ದು, ಕ್ಷಯಿಸಲಾರದ ಸಂಪತ್ತು ಎಂಬರ್ಥದಲ್ಲಿ 'ತವನಿಧಿ'ಯನ್ನು ಬಳಸಲಾಗುತ್ತದೆ. ಕನ್ನಡ ನಿಘಂಟುವಿನಲ್ಲಿರುವಂತೆ ತವನಿಧಿಯನ್ನು ಬಿಡಿಸಿದ ಪದವಾದ ತವು ಮತ್ತು ತವೆ ಪದಗಳಿಗೆ–ಕುಗ್ಗು, ಕ್ಷಯಿಸು, ಅಳಿ, ಸೊರಗು, ಕೃಶಗೊಳು ಕಡಿಮೆಯಾಗು ಎಂಬರ್ಥಗಳಿವೆ. ತವೆ ಪದಕ್ಕೆ ವಿರೋಧಾಭಾಸವೆಂಬಂತೆ ಅತಿಶಯವಾಗಿ, ಹೆಚ್ಚಾಗಿರುವುದು ಎಂಬರ್ಥಗಳೂ ಇವೆ. ತವನಿಧಿಯ ಸಮಾನಾರ್ಥ ಪದ ಅಕ್ಷಯ ಪಾತ್ರೆ–ಒಳಗಿರುವ ಆಹಾರ ಅಥವಾ ಪದಾರ್ಥಗಳು ಮುಗಿದು ಎಂದೂ ಬರಿದಾಗದ ಪಾತ್ರೆ, ತವದೋಣಿ ಎಂಬ ಪದವೂ ಬರಿದಾಗದುದು ಎಂಬುದನ್ನೇ ಸೂಚಿಸುತ್ತದೆ. ಪಾಂಡವರಿಗೆ ಅರಣ್ಯವಾಸದ ವೇಳೆಗೆ ಸೂರ್ಯನು ಅಕ್ಷಯ ಪಾತ್ರೆ ನೀಡಿದುದು, ಸಿರಿಯಾಳನಿಗೆ ಶಿವ ಅಕ್ಷಯ ಪಾತ್ರೆ ನೀಡಿದುದು ಇವೆಲ್ಲವೂ 'ತವನಿಧಿ' ಪಾರಿಭಾಷಿಕವನ್ನೇ ಧ್ವನಿಸುತ್ತವೆ.

"ವೀರಶೈವ ಕಾವ್ಯಗಳಲ್ಲಿ ಶರಣರಿಗೆ ಭಿನ್ನಭಿನ್ನ ರೂಪದ ತವನಿಧಿ ಇದ್ದುದರ ಪ್ರಸ್ತಾಪವಿದೆ. ಶಿವಭಕ್ತ ಭೈರವಾಂಕನು ಶಿವನಿಗೆ ಅಂಗಿಯೊಂದನ್ನು ಹೊಲಿದುಕೊಟ್ಟು, ತವನಿಧಿ ಪಡೆದನೆಂದು ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರನು ಹೇಳುತ್ತಾನೆ. ಅದೇ ರೀತಿ ಭಕ್ತ ಕೋಟಿಯ ಶಿವದೇವನು ಶಿವನಿಂದ ಹದಿನೆಂಟು ಧಾನ್ಯದ ತವನಿಧಿ, ಚಿರಮುಲಿಯರು ರತ್ನದ ತವನಿಧಿ,

ಸೌರ್ಯ ನಂಬಿ ಹಾಗೂ ಚೋಲರಾಜ ಮತ್ತು ಸಿರುಪಲ್ಲಿ ಕಾಮಯ್ಯಗಳು ಹೊನ್ನಿನ ತವನಿಧಿ, ಉಪಮನ್ಯು ಹಾಲಿನ ತವನಿಧಿ, ವಾಗೀಶ್ವರನು ಕಾಸಿನ ತವನಿಧಿ ಪಡೆದಿದ್ದರೆಂದು ಪುರಾಣಗಳು ಬಣ್ಣಿಸುತ್ತದೆ. ಹಾಗೆಯೇ ಭಕ್ತ ರೇವಣಸಿದ್ದನು ಮಂಗಳವಾಡದ ಗಾಣಿಗನಿಗೆ ತವನಿಧಿಯನ್ನಿತ್ತು ಕರುಣಿಸಿದನೆಂದು, ಅಂತೆಯೇ ಭಕ್ತ ಜೇಡರದಾಸಿಮಯ್ಯನಿಗೆ ಶಿವನು ಭತ್ತದ ತವನಿಧಿಯನ್ನು ಆಶೀರ್ವದಿಸಿದನೆಂದು ತಿಳಿದು ಬರುತ್ತದೆ".[೨] ತವನಿಧಿ ಯಾವುದಾದರೂ ಆಗಿರಬಹುದು. ಧಾನ್ಯದ್ದು, ರತ್ನದ್ದು, ಹೊನ್ನಿನದ್ದು, ಹಾಲಿನದು ಯಾವುದಾದರೂ ಆಗಿರಬಹುದು, ಒಟ್ಟು ತವನಿಧಿ ಎಂಬುದನ್ನು ಅಕ್ಷಯ ನಿಧಿ ಅಥವಾ ಅಕ್ಷಯ ಪಾತ್ರೆ ಎಂಬಂತೆ ಕಂಡರೂ ತಪ್ಪಿಲ್ಲ. ಜೇಡರ ದಾಸಿಮಯ್ಯನಿಗೆ ತವನಿಧಿ ದೊರೆತ್ತಿದ್ದುದು ಆತನ ಶ್ರದ್ದೆ, ಕಾಯಕ ನಿಷ್ಠೆ, ಪ್ರತಿಫಲಾಪೇಕ್ಷೆ ಇಲ್ಲದ ಭಕ್ತಿಯ ಒರತೆಯಿಂದ ಆತನು ತವನಿಧಿಯನ್ನು ಪಡೆದದ್ದು. ಇದರ ಬಗ್ಗೆ ತ್ರಿಭುವನ ತಾತನದೆನ್ನಲಾದ 'ಜೇಡರದಾಸಿಮಯ್ಯನ ರಗಳೆ' ಹೀಗೆ ಹೇಳಿದೆ.

ಜೇಡರದಾಸಿಮಯ್ಯನು ನೇಯ್ಗೆ ಕಾಯಕವನ್ನು ಆರಂಭಿಸಿ ತನ್ನ ಜೀವನವನ್ನು ನಡೆಸುತ್ತಿದ್ದನು. ಸತಿ ಪತಿಗಳು ಒಂದಾಗಿ ಗುರು, ಜಂಗಮ ದಾಸರಾಗಿರಲು, ಒಮ್ಮೆ ದುಗ್ಗಳೆ ಆರು ವರ್ಷಗಳ ಕಾಲ ತಾನು ನೇಯ್ದ ನೂಲನ್ನು ದಾಸಿಮಯ್ಯನಿಗೆ ನೀಡಿದಳು. ಅದನ್ನು ದಾಸಿಮಯ್ಯ ಪ್ರೀತಿಯಿಂದ ಹಾಡುತ್ತಾ ಶಿವಶರಣರ ಚಿತ್ರಣವನ್ನು ಬಿಡಿಸುವ ಯೋಚನೆಮಾಡಿ ಮೊದಲು ಶೈವ ಮಹಾ ಕ್ಷೇತ್ರಗಳನ್ನೂ, ಶಿವನ ವಿವಿಧ ಅವತಾರಗಳನ್ನೂ, ಪವಾಡಗಳನ್ನೂ, ಶರಣ ಕಥೆಗಳನ್ನು ಅವರ ಮಹಿಮೆಗಳನ್ನು ಆ ವಸ್ತ್ರದಲ್ಲಿ ಬಿಡಿಸಿ ತಯಾರಿಸಿದ. ಆ ವಸ್ತ್ರ ಕಣ್ಣಿಗೆ ಮಂಗಳಕರವಾಗಿ ಕಂಡು ಬರುವ ಅದ್ಭುತ ಶಿಲ್ಪದಂತಿತ್ತು 'ಶಿವನಲ್ಲದೆ ಅನ್ಯರಿದನ್ನು ಕೊಳ್ಳಲಾರರು' ಎಂದು ದಂಪತಿಗಳು ತಮ್ಮಲ್ಲಿಯೇ ನೆನೆಯುತ್ತಾ, ಹೆಮ್ಮೆ ಪಟ್ಟರು. ಆ ವಸ್ತ್ರವನ್ನು ಸಂತೆಯಲ್ಲಿ ಮಾರಲು ಹೋದಾಗ, ಸೀರೆಯನ್ನು ಕಂಡು ಜನ ಬೆರಗಾದರು. ಅಷ್ಟು ಬೆಲೆ ತೆರುವ ಧನವಂತರು ಯಾರು ಸಿಗಲಿಲ್ಲವೆನ್ನುವುದೇ ಸರಿ. ಸಂತೆ ಮುಗಿಯುವ ವೇಳೆಗೆ ಒಬ್ಬ ಜಂಗಮ ಬಂದು ಆ ವಸ್ತ್ರವನ್ನು ಕಂಡು ಮೊಳಹಾಕಿ ನೋಡಿ, ಈ ವಸ್ತ್ರವನ್ನೇಕೆ ನೇಯ್ದೆ? ಯಾರು ಕೊಳ್ಳುವರು? ಮನೆಗೆ ತಿರುಗಿ ಒಯ್ದರೆ ಇಲಿ ಕಡಿಯುತ್ತವೆ ಎನ್ನುತ್ತಾ ನನಗೆ ಕೊಡು ಸಂತಸದಲ್ಲಿ ಹೊದ್ದುಕೊಳ್ಳುವೆ ಎಂದು ಕೇಳಲು ದಾಸಿಮಯ್ಯನು ವಸ್ತ್ರನ್ನು ಆತನಿಗೆ ನಿಡಿದನು.

ವಸ್ತ್ರವನ್ನು ಕೊಟ್ಟೊಡನೆ ಆತ ಅದನ್ನು ಹರಿದು ತನ್ನ ಜಡೆಗೆ, ಕೊರಳಿಗೆ, ಕೈಯಿಗೆ ಕಟ್ಟಿಕೊಂಡನು, ಅದಕ್ಕೆ ಬದಲಾಗಿ ದಾಸಿಮಯ್ಯನನ್ನು ನಿತ್ಯನಾಗು ಎಂದು ಹರಸುತ್ತ ಒಂದಷ್ಟು ಧಾನ್ಯ, ಉಪ್ಪು, ಮೆಣಸು, ಸಾಂಬಾರುಗಳನ್ನು ಕೊಟ್ಟು ಹೋದನು(ಈ ದಾನ ನಿತ್ಯದ ಆಹಾರಕ್ಕೆ ಬೇಕಾದ ವಸ್ತುಗಳನ್ನು ಹೊಂದಿದೆ. ಇದಕ್ಕೆ ಕಾರಣ ಎಂದಿಗೂ ಹೊಟ್ಟೆಗೆ ಕಡಿಮೆಯಾಗದಂತೆ ನಡೆಯಲ್ಲಿ ಎಂಬುದಾಗಿರಬಹುದು). ಅದನ್ನು ಮನೆಗೆ ತಂದು ದುಗ್ಗಳೆಗೆ ತೋರುತ್ತಾ ನಡೆದುದನು

ದಾಸಿಮಯ್ಯ ಹೇಳಿದನು. ಆ ಗಂಟನ್ನು ಆಕೆ ಹಳೆಯ ಮಗ್ಗದಲ್ಲಿ ಉಳಿದುದನ್ನು ಮಡಿಕೆಯಲ್ಲಿ ಹಾಕಿ ಇಡಲು, ಬೆಳಗಾಗುತ್ತಲೇ ಹಳೆ ಮನೆ ಹೊಸದಾಗಿತ್ತು, ಮಗ್ಗದ ಗುಳಿ ಮತ್ತು ಮಡಿಕೆ ಕುಡಿಕೆಗಳೆಲ್ಲ ತವನಿಧಿಗಳಾಗಿದ್ದವು. ಹೀಗೆ ತವನಿಧಿ ಮಹತ್ವವನ್ನು ಪಡೆದಿದೆ.

ಶಂಕರ ದಾಸಿಮಯ್ಯ ಪುರಾಣದ ಕರ್ತೃ ಮಲ್ಲಿಕಾರ್ಜುನನು ತವನಿಧಿಯ ಸಂಭ್ರಮವನ್ನು ಹೀಗೆ ಹೇಳಿದ್ದಾನೆ.

"ಬಹ।
ತಂಡ ತಂಡದಿ ನೆಲ್ಲ ತುಂಬಿಹ।
ಬಂಡಿಗಳ ತಲೆಹೊರೆಯ ಹೆಡಗೆತ ತೋರಮೋಳಿಗೆಯ।
ಮಂಡಿಸಿದ ಹೇರುಗಳ ಬೆನ್ನೋಳುಕೊಂಡು
ಬಹ ಹೇಸರದ ಕುದುರೆಯ
ಒಡು ಜೀವಧನಗಳು[೨೭]

ಜನರು ಅದನ್ನು ಹೀಗೆ ಒಯ್ಯುತ್ತಿದ್ದರು. ರಾಜ್ಯದ ತುಂಬೆಲ್ಲಾ ಧಾನ್ಯದ ಸುಗ್ಗಿಯಾಗಿದ್ದು ಸಮಯ-ಸಂದರ್ಭದಮಿತಿ ಇಲ್ಲದೇ ತವನಿಧಿಯು ಸರ್ವಕಾಲದ್ದಾಗಿತ್ತು ಎಂಬುದು ಕಾವ್ಯ ಪುರಾಣಗಳಲ್ಲಿ ಬರುವ ಸಂಗತಿಯಾಗಿದೆ. ಈ ತವನಿಧಿಯ ಬಗ್ಗೆ ವಿದ್ವಾಂಸರು ಆಧುನಿಕವಾಗಿಯೂ, ವೈಜ್ಞಾನಿಕವಾಗಿಯೂ ಚರ್ಚಿಸುತ್ತಾರೆ. "ಜೇಡರದಾಸಿಮಯ್ಯನು ತಾನು ಶಿವನಿಗೆ ನೀಡಿದ ವಸ್ತ್ರಕ್ಕೆ ಪ್ರತಿಯಾಗಿ ತವನಿಧಿಯನ್ನು ನಿಜವಾಗಿಯೂ ಪಡೆದನು ಎಂದು ಬಗೆಯುವುದು ಶರಣರ ಕಾಯಕ ತತ್ವಕ್ಕೆ ಹೊಂದುವುದಿಲ್ಲ ವೆನಿಸುತ್ತದೆ. ಅದಕ್ಕೆ ಪ್ರತಿಯಾಗಿ ಜೇಡರದಾಸಿಮಯ್ಯನು ತನ್ನ ಕಾಯಕದಿಂದ ಮತ್ತು ಪರಿಶ್ರಮದಿಂದ ಮುದನೂರಿನ ಹದವಾದ ನೆಲದಲ್ಲಿ ಉತ್ತಿ, ಬಿತ್ತಿ ಸಮೃದ್ಧವಾಗಿ ಬೆಳೆದ ಧಾನ್ಯವನ್ನು ಜಂಗಮರಿಗೆ ಸಮರ್ಪಿಸುತ್ತಿದ್ದಿರಬೇಕೆಂಬುದು ಸೂಕ್ತವಾದುದೆ ಸುತ್ತದೆ"[೨೮] ಎಂದು ಅನ್ನಪೂರ್ಣ ಜಾಲವಾಗಿಯವರು ಆತನ ವಚನಗಳಲ್ಲಿ ಬರುವ ಕೃಷಿ ಸಂಬಂಧಿ ಆಯಾಮಗಳನ್ನು ಉದಾಹರಿಸುತ್ತಾರೆ.

ತವನಿಧಿಯನ್ನು ವಾಸ್ತವದೊಂದಿಗೆ ಪ್ರಸ್ತುತಪಡಿಸಿದ ಎಚ್.ಚಂದ್ರಶೇಖರವರ ಲೇಖನ[೨೯] ಇಲ್ಲಿ ಮುಖ್ಯವೆನಿಸುತ್ತದೆ. "ಮುದನೂರಿನಲ್ಲಿ ಸಿಗುವ ಕಲ್ಲು ಸುಣ್ಣದ ಕಲ್ಲು, ಈ ಕಲ್ಲು ಭೇದಗಳಿಂದ ಕೂಡಿದ್ದು ಸಂದುಗಳಿಂದ ಕೂಡಿದೆ. ಈ ಭೇದ ಹಾಗೂ ಸಂದುಗಳ ಸೇರ್ಪಡೆಯಿಂದ ಬಿಲಗಳುಂಟಾಗುತ್ತವೆ. ಈ ಬಿಲಗಳೇ ಅಂತರ್ಜಲ ಸಂಗ್ರಾಹಕಗಳು ಇಂತಹ ಸ್ಥಳಗಳನ್ನು ನೋಡಿ ಸೂಕ್ತ ಸ್ಥಳಗಳದಲ್ಲಿ ಬಾವಿ ತೋಡಿದರೆ, ಒತ್ತಡ ಹೆಚ್ಚಾದರೆ ನೀರು ಹೊರಹೊಮ್ಮುತ್ತದೆ ಎಂದು ಹೇಳುತ್ತಾ, ವೈಮಾನಿಕ ಛಾಯಾ ಚಿತ್ರಗಳ ಅಧ್ಯಯನದ ವೈಜ್ಞಾನಿಕ ನಕಾಶೆಯ ಪ್ರಕಾರ

ಮುದನೂರಿನಲ್ಲಿ ಸುಣ್ಣದ ಕಲ್ಲು ಸಿಗುತ್ತದೆ ಎನ್ನುವುದು ತಿಳಿಯುತ್ತದೆ. ಉತ್ತರದಲ್ಲಿ ಜ್ವಾಲಾಮುಖಿ ಶಿಲೆ ಡೆಕ್ಕನ್ ಟ್ರಯಾಪ್ ಪೂರ್ವದಲ್ಲಿ ಗ್ರಾನೈಟಶಿಲೆ ಇದ್ದು, ಇಲ್ಲಿ ಪ್ರಮುಖ ಸ್ತರಭಂಗ ರೇಖೆಯನ್ನು ಗುರುತಿಸಲಾಗಿದೆ ಈ ಶಿಲಾರಚನೆಯ ಅಂತರ್ಜಾಲದ ಸಂಗ್ರಹಕ್ಕು ಮತ್ತು ಅದರ ಸ್ವ ಚಲನೆಗೆ ಪ್ರಮುಖ ಕಾರಣ ಆ ಪರಿಸರ ಮುದನೂರಿನಲ್ಲಿದೆ. ಇಂದಿಗೂ ಅಲ್ಲಿ ತೋಡುವ ಬಾವಿಗಳಲ್ಲಿ ನೀರು ಸದಾ ಇರುತ್ತದೆ"[೩೦] ಎಂಬುದನ್ನು ಚಂದ್ರಶೇಖರವರು ಜೇಡರ ದಾಸಿಮಯ್ಯನ ತವನಿಧಿ ಜಲಗೋಳದ ಸುಂದರ ರೂಪಕ ವೆಂದೇ ಹೆಸರಿಸುತ್ತಾರೆ. ಎಸ್.ವಿದ್ಯಾಶಂಕರ ಅವರು ಇದನ್ನೇ ಸಮರ್ಥಿಸುತ್ತಾ 'ಸದಾ ನೀರಿನ ಒರತೆ ಇರುವ ಪ್ರದೇಶದಲ್ಲಿ ಭತ್ತ ಹೇರಳವಾಗಿದ್ದು, ಭತ್ತದ ಬೆಳೆಗೆ ಪ್ರಮುಖವಾಗಿದೆ. ಮನೆಮನೆಯ ಕಣಜ ಭತ್ತದ ಬೆಳೆಯಿಂದ ಸಮೃದ್ಧವಾಗಿ ತುಂಬಿರುತ್ತದೆ. ಇದೇ ತವನಿಧಿ' ಎಂದು ತವನಿಧಿಗೆ ಹೊಸ ಅರ್ಥ ಕಲ್ಪಿಸಿದ್ದಾರೆ.

"ಶ್ರೀಶೈಲ ಪರಿಸರದಲ್ಲಿ ಒತ್ತಡದ ನೀರಿನ ಬಾವಿಯಿದ್ದುದನ್ನು ಲಕ್ಷಿಸಿದ ಜೇಡರದಾಸಿಮಯ್ಯನು (ವಿದ್ಯಾಭ್ಯಾಸಕ್ಕಾಗಿ ತೆರಳಿದಾಗ) ಮುದನೂರಿನ ನನ್ನ ಪ್ರದೇಶದ ವಿಷಯದಲ್ಲಿ ಕೂಡ ಅಂತಹದೇ ಪರಿಸರವನ್ನು ಸೂಕ್ಷ್ಮವಾಗಿ ಗಮನಿಸಿರಬೇಕು. ಅಲ್ಲಿ ಒತ್ತಡ ಬಾವಿಗಳನ್ನು ತೋಡಿಸಿರಬೇಕು. ಅಲ್ಲಿ ನೀರಿನ ಬುಗ್ಗೆ ಹೊರಹೊಮ್ಮಿ ಆ ಪ್ರದೇಶದ ಬರಹಿಂಗಿ ಅದು ಬತ್ತಲಾರದ ಭತ್ತದ ಕಣವಾಗಿರಬೇಕು. ದಾಸಿಮಯ್ಯನು ಅದನ್ನು ಶಿವನಿತ್ತ ಧಾನ್ಯ ಎಂದು ಭಾವಿಸಿರಬೇಕು. ಇಂಥ ವಾಸ್ತವ ಸ್ಥಿತಿಯೇ ಮುಂದಿನ ಪೀಳಿಗೆಯಲ್ಲಿ ಜೇಡರದಾಸಿಮಯ್ಯನು ಶಿವನಿಂದ ತವನಿಧಿ ಪಡೆದನೆಂಬ ಪವಾಡದ ಕಥೆಗೆ ಆಸ್ಪದ ಮಾಡಿ ಕೊಟ್ಟಿರಬೇಕು. ಮುದನೂರಿನ ಜಲ ಭೂವೈಜ್ಞಾನಿಕ ಅಧ್ಯಯನ ಮಾತ್ರ, ಈ ತವನಿಧಿ ಅಲ್ಲಿರುವ ಅಕ್ಷಯ ಅಂತರ್ಜಲ ಸಂಪತ್ತನ್ನು ಸೂಚಿಸುತ್ತದೆ."[೩೧] ಎಂಬ ಎಚ್.ಚಂದ್ರಶೇಖರ ಅವರ ದೃಷ್ಟಿ ವಾಸ್ತವಿಕ ಹಾಗೂ ಕಾಲ್ಪನಿಕ ನೆಲೆಯನ್ನೊಳಗೊಂಡಿದ್ದ ರಿಂದ ಅವರ ನಿರ್ಣಯ ಹೆಚ್ಚು ಸೂಕ್ತವೆಂದೆನಿಸುತ್ತದೆ. ಇದನ್ನೇ ಡಾ.ಅನ್ನಪೂರ್ಣ ಜಾಲವಾದಿ ಯವರು ಒಪ್ಪಿದರೂ, ಇದರೊಂದಿಗೆ ವಾಸ್ತವಿಕ ದೃಷ್ಟಿಯನ್ನು ಒಪ್ಪುವುದು ತೀರ ಸಹಜವೆನಿಸಿದರೂ ಯೋಗಿಗಳ ಶರಣರ ಸಾಧನೆ ಹಾಗೂ ಅವರು ಪಡೆದಿರುತ್ತಿದ್ದ ಅತೀಂದ್ರಿಯ ಶಕ್ತಿ ಸಾಮರ್ಥ್ಯದ ಬಗೆಗೆ ಸಂದೇಹಿಸುವುದು ಕಷ್ಟವಾಗುತ್ತದೆ ಎನ್ನುವ ಮಾತನ್ನು ಪ್ರಸ್ಥಾಪಿಸುತ್ತಾರೆ.

ಅದೇನೆ ಇದ್ದರೂ ತವನಿಧಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಜೇಡರದಾಸಿಮಯ್ಯನನ್ನು ಪವಾಡ ಪುರುಷನನ್ನಾಗಿಸಿದ್ದಂತು ಸತ್ಯ. ಕೃಷಿ ಈತನ ಉಪಕಸುಬು ಎಂಬುದು ಕಾವ್ಯಗಳಲ್ಲಿ[೩೨] ಬಂದಿರುವುದರಿಂದ ಮೇಲಿನ ಎಲ್ಲಾ ಊಹೆಗಳನ್ನು ಒಪ್ಪಬಹುದಾಗಿದೆ. ಈತ ನೇಯ್ಗೆಕಾಯಕ ದೊಂದಿಗೆ ಕೃಷಿಯನ್ನೂ ಉಪಕಸುಬಾಗಿಸಿಕೊಂಡಿದ್ದ ಎಂಬುದಕ್ಕೆ ಪುರಾಣಗಳೂ ಸಾಕ್ಷಿ

ಒದಗಿಸುತ್ತವೆ. ಮುದನೂರಿನ ಸಮೃದ್ಧ ಪರಿಸರ, ನೀರಿನ ತೊರೆ, ತೀರ್ಥಗಳೆಲ್ಲವೂ ಈ ಅಭಿಪ್ರಾಯಕ್ಕೆ ಪುಷ್ಟಿ ಒದಗಿಸುತ್ತವೆ.

**ತವನಿಧಿ ಬಯಲಾದುದು**

ತವನಿಧಿ ಬಯಲಾದುದು ಜೇಡರದಾಸಿಮಯ್ಯನ ಬದುಕಿನ ಮಹತ್ವದ ಘಟನೆ ಹರಿಹರನ ರಗಳೆ ಹಾಗೂ ಶಂಕರದಾಸಿಮಯ್ಯನ ಪುರಾಣ, ಬಸವಪುರಾಣಗಳಲ್ಲಿ ಜೇಡರದಾಸಿಮಯ್ಯ ಶಿವನಿಂದ ಪಡೆದ ತವನಿಧಿಯನ್ನು ಶಂಕರದಾಸಿಮಯ್ಯ ಬಯಲಾಗಿಸಿದ(ಶೂನ್ಯವಾಗಿಸಿದ) ಎನ್ನುವುದು ತಿಳಿದು ಬರುತ್ತದೆ.

ಶಿವನಿಂದ ತವನಿಧಿ ಪಡೆದ ಮೇಲೆ ಜೇಡರದಾಸಿಮಯ್ಯನಿಗೆ ತನ್ನಂತೆ ತವನಿಧಿ ಪಡೆದು ದಾಸೋಹ ಗೈಯುವ ಭಕ್ತ ಇನ್ನೊಬ್ಬನಿಲ್ಲ ಎಂಬ ಅಹಂ ಬಂದಿತು. ಇಂತಹ ದುರ್ಭಾವದ ರಕ್ತ ಪರಿಶುದ್ದತೆಗಾಗಿ ಪುನಃ ಆತನಲ್ಲಿ ಭಕ್ತಿಯ ಭವ್ಯತೆ ಕಾಣಲು, ಪರಿಶುದ್ದ ಭಕ್ತಿಯನ್ನು ಸ್ಥಾಪಿಸಲು ಶಿವನು ಶಂಕರ ದಾಸಿಮಯ್ಯನನ್ನು ರಾಯಭಾರಿಯಾಗಿಸಿಕೊಂಡು ಜೇಡರದಾಸಿಮಯ್ಯನ ಅಹಂ ಅನ್ನು ತೊಡೆದು ಹಾಕುವ ಪ್ರಸಂಗ ಉಂಟಾಯಿತು. ಈ ಪ್ರಸಂಗದ ನಂತರ ದಾಸಿಮಯ್ಯ ಮತ್ತೆ ಭಕ್ತಿ ಪಾರಮ್ಯಕ್ಕೆ ಒಳಗಾಗಿ ತನಗೆ ತಾಕಿದ ಅಹಮ್ಮಿನ ಕಳೆಯನ್ನು ಕಳೆದುಕೊಂಡ ಎಂಬುದು ಇಲ್ಲಿ ಗಮನಾರ್ಹವಾದುದು. ಶಂಕರದಾಸಿಮಯ್ಯನೊಟ್ಟಿಗಿನ ಜೇಡರದಾಸಿಮಯ್ಯನ ಕಥೆಗಳು ಇದನ್ನೆ ಹೇಳುತ್ತವೆ.

ಜೇಡರದಾಸಿಮಯ್ಯ ಹಾಗೂ ಶಂಕರದಾಸಿಮಯ್ಯನ ನಡುವಿನ ಈ ಪ್ರಸಂಗವನ್ನು "ಶಂಕರದಾಸಿಮಯ್ಯನಿಂದ ಈ ಜೇಡರದಾಸಿಮಯ್ಯ ಆತ್ಮಕ್ಕೆ ನಡೆದ ಕಾಯಕಲ್ಪದ ಸಂಬಂಧ"[೩೩] ಎಂದು ಎಲ್.ಬಸವರಾಜು ಅವರು ವಿವೇಚಿಸುತ್ತಾರೆ. ಕಂದ ಶಿಲೆಯ ಶಂಕರದಾಸಿಮಯ್ಯನು ಸೂಜಿಕಾಯಕದ ಶರಣ. ಈತನು ಶಿವನ ಆಜ್ಞೆಯಂತೆ ನವಿಲೆಗೆ ಬಂದು ಜಡೆಯ ಶಂಕರನಿಂದ ಶಿವದೀಕ್ಷೆಯನ್ನು ಪಡೆದು, ನೊಸಲಗಣ್ಣನ್ನು ಪಡೆಯುತ್ತಾನೆ. ಆ ಕೀರ್ತಿ ಲೋಕ ಪ್ರಸಿದ್ದಿಯಾಗಲು ಆ ಸಮಯಕ್ಕೆ ಸರಿಯಾಗಿ ಮುದನೂರಿನ ದಾಸಿಮಯ್ಯನು ಶಿವನಿಂದ ತವನಿಧಿಯನ್ನು ಪಡೆದು ಪ್ರಸಿದ್ದಿಪಡೆದಿರುತ್ತಾನೆ, ಜೇಡರದಾಸಿಮಯ್ಯನು ಈ ಕೀರ್ತಿಯ ಲೋಲುಪತೆಯಿಂದ ಸಗರ್ವಿತ ನಾಗಿದುದು ಶಿವನಿಗೆ ತಿಳಿದು ಆತನ ಗರ್ವದ ವಿನಾಶಕ್ಕೆ ಶಂಕರದಾಸಿಮಯ್ಯನನ್ನು ನೇಮಿಸುತ್ತಾನೆ.

ಜೇಡರದಾಸಿಮಯ್ಯನಿಗೂ ಹಿರಿಯನಾದ ಶಂಕರದಾಸಿಮಯ್ಯನ ಕನಸಿನಲ್ಲಿ ಬಂದು ಶಿವನು ತನ್ನ ಲೋಕ ಸಂಚಾರ ಯಾತ್ರೆಯನ್ನು ಮುದನೂರಿಗೆ ಕೈಗೊಳ್ಳುವಂತೆ ಹೇಳಿದನು.

ಅದಕ್ಕನುಗುಣವಾಗಿ ಶಂಕರ ದಾಸಿಮಯ್ಯ ತನ್ನ ಶಿಷ್ಯ ವಕ್ರಪಾದ ಹಾಗೂ ತನ್ನ ಪತ್ನಿ, ಸುತರೊಂದಿಗೆ ಮುದನೂರಿಗೆ ಭೇಟಿನೀಡಿದನು. ರಾಮನಾಥ ದೇವಾಲಯದ ಬಳಿಯೇ ಬಿಡಾರ ಹೂಡಿಯೂ ಆಯಿತು. ಜೇಡರದಾಸಿಮಯ್ಯ ಪ್ರತಿನಿತ್ಯದಂತೆ ರಾಮನಾಥ ದೇವಾಲಯಕ್ಕೆ ಬರಲು ಅಲ್ಲಿ ಶಿವಭಕ್ತ ಶಂಕರದಾಸಿಮಯ್ಯನನ್ನು ಕಂಡು ನಮಸ್ಕರಿಸಿ, ಬಳಿ ಕುಳಿತು, ನಡೆದ ಶಿವಗೋಷ್ಠಿಯನ್ನು ಕೇಳಿದನು ಹೊರಡುವ ವೇಳೆಯಲ್ಲಿ ಶಂಕರದಾಸಿಮಯ್ಯನ ಪತ್ನಿ ಶಿವದಾಸಿ ವಕ್ರಪಾದನನ್ನು ಕರೆದು ಎಲೆ ಮಗನೇ ಧಾನ್ಯಕ್ಕೆ ಹೋಗು ಎನ್ನುತ್ತಾಳೆ. ಆ ಮಾತನ್ನು ಹತ್ತಿರವಿದ್ದ ಜೇಡರದಾಸಿಮಯ್ಯ ಕೇಳಿಸಿ ಕೊಂಡು ತನ್ನಲ್ಲಿ ತವನಿಧಿಯುಂಟು ದೇವರ ಆರೋಗಣೆಗೆ ಧಾನ್ಯ ತರಲು ಹೋಗುವುದೇಕೆ ನನ್ನಲ್ಲಿಯೇ ಹೆಚ್ಚಿನ ಧಾನ್ಯವುಂಟು ಎಂದು ಹೇಳಿ ಹತ್ತಿಪ್ಪತ್ತು ಸಾವಿರ ನೆಲ್ಲಿನ ಮೂಟೆಯನ್ನು ಕಳುಹಿಸುವುದಾಗಿ ಗರ್ವದಿಂದ ನುಡಿಯುತ್ತಾನೆ.

ಇದನ್ನು ಕೇಳಿದ ಶಂಕರದಾಸಿಮಯ್ಯನು ಮುಂದಿನ ತಿಪ್ಪೆಯಲ್ಲಿ ಹೊನ್ನನ್ನು ತೋರಿಸಿ ನೀನು ಕೊಡುವವನು ನಾನು ತೆಗೆದುಕೊಳ್ಳುವವನು ಎಂದು ಆತನ ಗರ್ವದ ಪರಾಕಾಷ್ಠೆಯನ್ನು ಮನನ ಮಾಡಿಸಿ ಹೋಗೆನಲು ಮನೆಗೆ ಬಂದು ಜೇಡರದಾಸಿಮಯ್ಯ ನೋಡಲು, ಶಂಕರದಾಸಿಮಯ್ಯನ ಅನುಭಾವದ ಫಲದಿಂದ ತವನಿಧಿ ಬಯಲಾಗಿರುತ್ತದೆ. ಮತ್ತೆ ಜೇಡರ ದಾಸಿಮಯ್ಯ, ದುಗ್ಗಳೆಯರು ತಮ್ಮ ತಪ್ಪಿನ ಅರಿವನ್ನು ಮಾಡಿಕೊಂಡು ಬಂದು ಶಂಕರ ದಾಸಿಮಯ್ಯನನ್ನು ಕ್ಷಮೆಯಾಚಿಸುತ್ತಾರೆ. ಆಗ ತವನಿಧಿ ಮತ್ತೆ ಸಮೃದ್ಧಿಗೊಳ್ಳುತ್ತದೆ. ಶಂಕರ ದಾಸಿಮಯ್ಯ ಆ ಶಿವಭಕ್ತರಿಗೆ 'ರಾಮನಾಥನು ಕೊಟ್ಟ ಅಪಾರ ತವನಿಧಿಯನ್ನು ಒಳಗಿನಿಂದ ಎತ್ತಿ ತರುವ ಆಯಾಸವನ್ನು ಬಿಡಿ ಅದು ಇಂದಿನಿಂದ ಮೊದಲಾಗಿ ಮೇಲಕ್ಕೆ ಉಕ್ಕುತ್ತ ಬರಲಿ' ಎಂದು ವರವನ್ನು ಕೊಟ್ಟು ಕಳುಹಿಸಿದನು. ಹೀಗೆ ಉಕ್ಕು ಚೆಲ್ಲುವ ತವನಿಧಿಯಿಂದ ಈ ಶಿವದಂಪತಿಗಳು ಹರ್ಷಗೊಂಡರು. ಭಕ್ತಿಯ ಬಗ್ಗೆ ನಂಬಿಕೆಯನ್ನು ತಳೆದರು. ಶಿವಭಕ್ತರಲ್ಲಿಯೂ ಈ ಘಟನೆಯಿಂದ ಭಕ್ತಿ ನೂರ್ಮಡಿ ಗೊಳಿಸಿತು. ಹೀಗೆ ಜೀವನದ ಅಂತ್ಯದವರೆಗೂ ಸಮಾಸ್ಥಾನಿಕರಾಗಿ ದಂಪತಿಗಳು ಶಿವೈಕ್ಯರಾದರೆಂದು ತಿಳಿದು ಬರುತ್ತದೆ.

ಹರಿಹರನ ರಗಳೆಯ ಈ ಕತೆಯೇ ಮುಂದಿನ ಬಸವ ಪುರಾಣ ಹಾಗೂ ಶಂಕರದಾಸಿಮಯ್ಯ ಪುರಾಣಗಳಲ್ಲಿ ರಚಿತಗೊಂಡಿದೆ. ಬಸವಣ್ಣ ಹಾಗೂ ಸಮಕಾಲೀನರ ವಚನಗಳಲ್ಲಿಯೂ ಈ ಬಗ್ಗೆ ಉಲ್ಲೇಖಗಳಿವೆ. ಕಾವ್ಯಗಳಲ್ಲಿಯೂ ಉಲ್ಲೇಖಗಳು ಕಾಣಿಸುತ್ತವೆ. ನಂತರದ ಕಾಲದಲ್ಲಿ ಅಲ್ಲಿನ ಅಂದರೆ ಮುದನೂರಿನ ಸಾಮಾಜಿಕ ಪರಿಸರದಲ್ಲಿ ವ್ಯತಿರಿಕ್ತವಾಗಿ ಮೇಲ್ವರ್ಗ ಹಾಗೂ ಕೆಳವರ್ಗಗಳ ನಡುವೆ ಅನೇಕ ಭಿನ್ನಾಭಿಪ್ರಾಯಗಳುಂಟಾಗಿ ಜೇಡರದಾಸಿಮಯ್ಯನಿಗೆ ದೇವಾಲಯದ ಪ್ರವೇಶವನ್ನು ನಿರಾಕರಿಸಲಾಯಿತು. ಆಗ ದಾಸಿಮಯ್ಯನು

ಹೋಗದೇ, ಆ ದೇವಾಲಯದ ಬಾಗಿಲು ತೆರೆಯಲಿಲ್ಲ. ಅಷ್ಟೊತ್ತಿಗೆ ಆಗಲೇ ಅವನು ದೂರದ ಪ್ರದೇಶಕ್ಕೆ ಬಂದು ವಾಸ್ತವ್ಯ ಹೂಡಿದ್ದನು. ನಂತರ ಅದೇ ಜನ ಹೋಗಿ ಆತನನ್ನು ಕರೆತರಲು ಮತ್ತೆ ರಾಮನಾಥ ದೇವಾಲಯದ ಬಾಗಿಲು ತೆರೆಯಿತು ಎಂಬ ಪ್ರಸಂಗವೂ ಈತನ ಜೀವನದ ಪ್ರಮುಖ ಘಟನೆಗಳಲ್ಲಿ ಒಂದು.

ಇಂತಹ ಅನೇಕ ಅಸಮಾನ್ಯ ಘಟನೆಗಳ ಪ್ರವರ್ತಕನಾಗಿ ನಮಗೆ ಜೇಡರದಾಸಿಮಯ್ಯ ಕಂಡು ಬರುತ್ತಾನೆ. ಎಲ್ಲಕ್ಕೂ ಮಿಗಿಲಾಗಿ ವಚನ ಸಾಹಿತ್ಯದ ಆದ್ಯ ರೂಪಕನಾಗಿಯೂ, ಈತನೇ ಪ್ರಮುಖನೆನಿಸುತ್ತಾನೆ. ಈ ಹೆಗ್ಗಳಿಗೆಯಿಂದಲೇ ವಿಶ್ವಕ್ಕೆ ಕನ್ನಡ ಸಾಹಿತ್ಯವು ನೀಡಿದ ಕೊಡುಗೆಯಲ್ಲಿ ಜೇಡರದಾಸಿಮಯ್ಯ ವಿಶ್ವಮಾನ್ಯನಾಗುತ್ತಾನೆ. ವಚನ ಸಾಹಿತ್ಯದ ಅಸ್ಥಿತ್ವದ ಪ್ರಶ್ನೆಯೊಂದಿಗೆ ಈತನ ಪ್ರಸ್ತುತತೆ ಅವಶ್ಯವಾಗಿದೆ. ಇವುಗಳನ್ನು ವೈಭವಿಕರಿಸುವ ನೆಲೆಯಲ್ಲಿ ಸಮುದಾಯಗಳು ಆತನ ಅಸ್ಥಿತ್ವದ ಪ್ರಚಾರಕರಂತೆ ಕಾರ್ಯ ನಿರ್ವಹಿಸಿ ದೇವರದಾಸಿಮಯ್ಯನ ಜೀವನದೊಂದಿಗೆ ಸಮನ್ವಯಗೊಳಿಸುವ ಪ್ರಯತ್ನ ನಡೆದಿದ್ದು, ಇಂತಹ ಪ್ರಯತ್ನದ ಸುಳಿಯಿಂದ ಜೇಡರ ದಾಸಿಮಯ್ಯನನ್ನು ಹೊರತಂದು ವಿಶ್ವಮಾನ್ಯನನ್ನಾಗಿಸುವ ಕಾರ್ಯ ನಡೆಯಬೇಕಾಗಿದೆ.

### ೩.೨. ದೇವರದಾಸಿಮಯ್ಯ

ಭೀಮಕವಿಯ 'ಬಸವಪುರಾಣವು' ಉಲ್ಲೇಖಿಸುವ ದೇವರದಾಸಿಮಯ್ಯ ಒಬ್ಬ ಮಹಾಶರಣ. ದೇವರದಾಸಿಮಯ್ಯ ಹಾಗೂ ಜೇಡರದಾಸಿಮಯ್ಯ ಈ ಹೆಸರುಗಳ ನಡುವಿನ ಹೊಯ್ದಾಟ ಇಂದು ನಿನ್ನೆಯದಾಗಿರದೆ; ಹದಿಮೂರನೇ ಶತಮಾನದಿಂದಲೂ ನಡೆದುಕೊಂಡು ಬಂದುದಾಗಿದೆ. ದೇವರದಾಸಿಮಯ್ಯ ವಚನಕಾರನೇ? ಅಲ್ಲವೇ? ಈತನ ಊರು ಮುದನೂರೇ? ಅಥವಾ ಸತ್ತಲಿನ ಯಾವುದಾದರೂ ಗ್ರಾಮವೇ ಅಥವಾ ಪೋಟ್ಲಚೆರುವೇ? ಜೇಡರದಾಸಿಮಯ್ಯ ಎಂಬ ಹೆಸರಿನ 'ಜೇಡರ' ವಿಶೇಷಣದ ಬದಲಿಗೆ 'ದೇವರ' ವಿಶೇಷಣ ಹತ್ತಿದೆಯೇ? ಇಲ್ಲವೇ ಈ ಇಬ್ಬರೂ ಬೇರೆ ಬೇರೆ ವ್ಯಕ್ತಿಗಳೋ? ಎಂಬ ಅನೇಕ ಪ್ರಶ್ನೆಗಳು ದೇವರದಾಸಿಮಯ್ಯನನ್ನು ಒಳಗೊಂಡು ಉದ್ಭವಿಸಿರುವುದು ಕನ್ನಡ ಸಂಶೋಧನಾ ಕ್ಷೇತ್ರದ ಕೆಲವು ಸಮಸ್ಯೆಗಳಲ್ಲೊಂದು ಎಂದರೂ ತಪ್ಪಾಗಲಾರದು.

ಈ ದೃಷ್ಟಿಯಿಂದ ದೇವರದಾಸಿಮಯ್ಯನ ಕುರಿತ ಅಧ್ಯಯನವು ಜೇಡರದಾಸಿಮಯ್ಯನೊಂದಿಗೆ ಸೇರಿಕೊಂಡು ಬಂದಿದೆ ಎಂದರೆ ತಪ್ಪಾಗಲಾರದು. ಫ.ಗು ಹಳಕಟ್ಟಿ, ಡಿ.ಎಲ್, ನರಸಿಂಹಾಚಾರ್, ರಂ.ಶ್ರೀ ಮುಗಳಿ ಅವರಿಂದ ಇತ್ತೀಚಿನ ಕೆಲವು ವಿದ್ವಾಂಸರು, ಸಾಮಾನ್ಯರವರೆಗೂ ಜೇಡರ ದಾಸಿಮಯಯ್ಯನನ್ನೇ ದೇವರದಾಸಿಮಯ್ಯನೆಂದು ಗುರುತಿಸಿ, ಕರೆಯುವ ರೂಢಿ ಬೆಳೆದುಕೊಂಡು ಬಂದಿದೆ. ಇದಕ್ಕೆ ಪ್ರಮುಖ ಕಾರಣವೇನು ಜೇಡರ ಹಾಗೂ ದೇವರ ವಿಶೇಷಣದ ನಡುವಿನ

ಅನನ್ಯತೆ(ಬಾಯಿಂದ ಬಾಯಿಗೆ ಬಂದು ಬದಲಾಗಿರಬಹುದಾದ ಭಾಷಿಕ ಬದಲಾವಣೆ.)ಯೇ? ಇಬ್ಬರು ನೇಯ್ಗೆಕಾಯಕದ ಶರಣರೇ ಆಗಿರಬಹುದಾದ ಸಾಧ್ಯತೆ ಇಬ್ಬರ ಅಂಕಿತವೂ 'ರಾಮನಾಥ' ಎನ್ನುವ ಧೋರಣೆ? ಈ ಎಲ್ಲಾ ಅಂಶಗಳು ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ ಇಬ್ಬರೂ ಒಬ್ಬರೇ ಎಂಬ ವಾದಕ್ಕೆ ಎಡಮಾಡಿಕೊಟ್ಟಿವೆ. ಆದರೆ ಈ ರೀತಿಯ ಹೈಪೋತಿಸಿಸ್ ಅನ್ನು ಎಂ.ಚಿದಾನಂದಮೂರ್ತಿ ಮತ್ತಿತರರು ಅಪಚಾರವೆಂದು ಕರೆದಿರುವುದೂ ಇದೆ. ಈ ಎಲ್ಲವುಗಳನ್ನು ಅನುಲಕ್ಷಿಸಿ ದೇವರದಾಸಿಮಯ್ಯ ಹಾಗೂ ಜೇಡರದಾಸಿಮಯ್ಯರು ಕಾಲ, ಸ್ಥಳ, ಐತಿಹಾಸಿಕ ಚಟುವಟಿಕೆಗಳ (ದೃಷ್ಟಿ) ನೆಲೆಯಿಂದ ಭಿನ್ನರು ಎಂಬ ವಾದ ಪ್ರಮುಖವೆನಿಸುತ್ತದೆ.

"ಜೇಡರದಾಸಿಮಯ್ಯ ಮತ್ತು ದೇವರದಾಸಿಮಯ್ಯ ಎಂಬುವರು ಅಭಿನ್ನರೆಂಬುದು ಪ್ರಾರಂಭಿಕರನ್ನು ಬಿಟ್ಟರೆ, ಬಹುತೇಕ ಎಲ್ಲರ ಅಭಿಪ್ರಾಯವಾಗಿದೆ. ಆದರೆ ಬಸವಣ್ಣನು ಹೊಗಳಿರುವ ವ್ಯಕ್ತಿ ಮತ್ತು ಶಾಸನಗಳಲ್ಲಿ ಉಕ್ತನಾಗಿರುವವನು ಸ್ಪಷ್ಟವಾಗಿ ಜೇಡರದಾಸಿಮಯ್ಯನೇ ಬಸವ ಪುರಾಣದಲ್ಲಿಯೂ, ಅದನ್ನು ಅನುಸರಿಸಿರುವ ಚೆನ್ನಬಸವ ಪುರಾಣದಲ್ಲೂ, ವೃಷಭೇಂದ್ರ ವಿಜಯದಲ್ಲೂ ದೇವರ ಮತ್ತು ಜೇಡರದಾಸಿಮಯ್ಯರಿಬ್ಬರೂ ಬೇರೆ ಬೇರೆ ಎಂದು ಸ್ಪಷ್ಟವಾಗಿ ಸೂಚಿತವಾಗಿದೆ; ಇದೇ ಸತ್ಯ"[೩೪] ಎಂಬ ಮಾತು ಅಧಿಕೃತವೆನಿಸುತ್ತದೆ.

ದೇವರದಾಸಿಮಯ್ಯನು ದೇಸಿಂಗರಾಯ ಅಥವಾ ಯಾಸಿಂಗ ಬಲ್ಲಹನು ಪೊಟ್ಟಲಚರು[೩೫] ಅಥವಾ ಪೊಟ್ಟಲಕೆರೆಯಲ್ಲಿ ಆಳುವ ಕಾಲದವನು ಎಂದು ಕಾವ್ಯಗಳು ಸ್ಪಷ್ಟಿಸುತ್ತವೆ. ಈ ಯಾಸಿಂಗ ಬಲ್ಲಾಳನೇ ಕಲ್ಯಾಣ ಚಾಲುಕ್ಯರ ಚಕ್ರವರ್ತಿ ಇಮ್ಮಡಿ ಜಯಸಿಂಹ. ಇವನ ಬಗ್ಗೆ ಪಿ.ಬಿ.ದೇಸಾಯಿಯವರ A history of karnataka ಕೃತಿಯಲ್ಲಿ ಮಾಹಿತಿದೊರೆಯುತ್ತದೆ. ಜಯಸಿಂಹನಿಗೆ ಜಗದೇಕಮಲ್ಲ ಎಂಬ ಬಿರುದಿತ್ತು. ಅವನ ಆಳ್ವಿಕೆಯ ಕಾಲ ಕ್ರಿಶ ೧೦೧೫ –೧೦೪೪ ಅವನಿಗೆ ಮಲ್ಲಿಕಾಮೋದ ಎಂಬ ವಿಶೇಷಣವಿತ್ತು. " The latest known date for ಜಯಸಿಂಹ is ೧೦೪೩ A.D February 17. beirides ಸುಗ್ಗಲುದೇವಿ who was the chiefqueen, ಜಯಸಿಂಹ had two other queens viz..ದೇವಲದೇವಿ of the ನೊಳಂಬ dynasty family and ಲಕ್ಷ್ಮಿದೇವಿ We have three records of ಜಯಸಿಂಹ dated in of 1033 A.D which mention ಕಲ್ಯಾಣ as the capital… it is of interest to note that ಪೊಟ್ಟಲಕೆರೆ also figures as the capital is other records of the same year viz. 1033 A.D this indicates that ಜಯಸಿಂಹ had not yet dicided upon ಕಲ್ಯಾಣ as the capital and was simply experimenting with several places. But we now that definitly by 1048 A.D ಕಲ್ಯಾಣ had become the capital"[೩೬] ಈ

ಮಾತುಗಳು ಕಲ್ಯಾಣ ಚಾಲುಕ್ಯರ ದೊರೆ ಇಮ್ಮಡಿ ಜಯಂಸಿಹನೇ ದೇವರ ದಾಸಿಮಯ್ಯನ ಕಾಲದ 'ದೇಸಿಂಗ' ಆತನ ಪತ್ನಿ ಸುಗ್ಗಲೆ. ಇವರ ಕಾಲ ಕ್ರಿಶ ೧೦೩೩–೪೦ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕಲ್ಯಾಣವೇ ಚಾಲುಕ್ಯರ ರಾಜಧಾನಿಯಾಗಿದ್ದರೂ ಇಮ್ಮಡಿ ಜಯಸಿಂಹ ರಾಜಧಾನಿಯನ್ನು ಕಾರಣಾಂತರಗಳಿಂದ ಕಲ್ಯಾಣದಿಂದ ಪೊಟ್ಟಲ ಕೆರೆಗೆ ವರ್ಗಾಹಿಸಿ ಮುಂದೆ ಅದನ್ನು ಬಿಟ್ಟು ಕಲ್ಯಾಣಕ್ಕೆ ತನ್ನ ರಾಜಧಾನಿಯನ್ನು ಬದಲಾಯಿಸಿದ ಪೊಟ್ಟಲಕೆರೆಯಿಂದ ಅವನು ಆಳುತ್ತಿದ್ದ ಅವಧಿಯಲ್ಲಿಯೇ ಸುಗ್ಗಳೆಯು ತನ್ನ ಗುರು ದೇವರ ದಾಸಿಮಯ್ಯನನ್ನು ರಾಜಧಾನಿಗೆ ಕರೆಸಿಕೊಂಡಳು ಎನ್ನುವುದರಲ್ಲಿ ಅನುಮಾನವೇ ಇಲ್ಲ. ಪೊಟ್ಟಲ ಕೆರೆಯ ದೇವರ ದಾಸಿಮಯ್ಯನ ಕಾಲ ಕ್ರಿಶ ೧೦೪೦ ಎಂಬುದು ಎಂ. ಚಿದಾನಂದಮೂರ್ತಿಯವರ ನಿರ್ಣಯ.[೩೭] ಈ ನಿರ್ಣಯವು ಸತ್ಯಕ್ಕೆ ಹತ್ತಿರವಾದುದರಿಂದ ಇದನ್ನೆ ಅಂಗೀಕರಿಸಬಹುದು.

ಇನ್ನು ದೇವರದಾಸಿಮಯ್ಯನ ಊರು, ಸ್ಥಳ, ದೇಶ ಯಾವುದು ಎಂಬ ಪ್ರಶ್ನೆ ದೇವರದಾಸಿಮಯ್ಯನು ಪವಾಡ ಮೆರೆದು ಉತ್ತರೇಶ್ವರ ಲಿಂಗ ಸ್ಥಾಪಿಸಿದ್ದು, ಅಲ್ಲಿನ ಮಠದಲ್ಲಿ ತಂಗಿದ್ದ ಎಂಬ ವಿಷಯ ತಿಳಿಯುತ್ತದೆ. ಈ ಮೂಲಕ ಆತನ ಊರು ಯಾವುದೆಂದು ಗ್ರಹಿಸುವುದು ಉತ್ತಮವೆನಿಸುತ್ತದೆ, ದೇವರದಾಸಿಮಯ್ಯ, ಜಯಸಿಂಹನ ರಾಜ್ಯ ವ್ಯಾಪ್ತಿಯ ಪೊಟ್ಟಲಕೆರೆಯಲ್ಲಿ ಜೈನರನ್ನು ವಾದದಲ್ಲಿ ಗೆದ್ದು ೭೦೦ ಬಸದಿಗಳನ್ನು ಶಿವಾಲಯವಾಗಿಸಿದ ಹಾಗೂ ೨೦,೦೦೦ ಜೈನರನ್ನು ಶೈವರನ್ನಾಗಿಸಿದ ಎಂಬ ಕಥೆ ಬಸವ ಪುರಾಣದಲ್ಲಿದೆ. ಹೀಗೆ ಅದರ ಪ್ರಶ್ನೆಗೆ ಉತ್ತರಿಸುವಾಗ ಮಡಿಕೆಯೊಳಗಿನ ಘಟಸರ್ಪವನ್ನು ಶಿವಲಿಂಗವೆಂದು ಸುಳ್ಳು ಹೇಳಿ ದಾಸಿಮಯ್ಯನ ಭಕ್ತಿಯನ್ನು ಅವಹೇಳನ ಮಾಡಲು ನೋಡುತ್ತಾರೆ. ಆಗ ಆತನು ಕೈಹಿಡಿಯಲು ಸ್ಪಟಿಕ ಲಿಂಗವಾಗುತ್ತದೆ. ಇದೇ ಉತ್ತರೇಶ್ವರ ಲಿಂಗವಿರಬಹುದೆಂಬ ಪ್ರತೀತಿ ಇದೆ. ಈ ಪವಾಡ ನಡೆದದ್ದು ಪೊಟ್ಟಲಕೆರೆಯಲ್ಲಿ ಆದರೆ ದೇವರದಾಸಿಮಯ್ಯ ಪೊಟ್ಟಲಕೆರೆಗೆ ಇನ್ನೆಲ್ಲಿಂದಲೋ ಬಂದುದಾಗಿ(ಸುಗ್ಗಿಲದೇವಿ ಕರೆಯಿಸಿ ಕೊಂಡುದಾಗಿ) ತಿಳಿಯುತ್ತದೆ.

ಜನಪನದ ದೇಸಿಂಗರಾಯನ
ವನಿತೆ ಸುಗ್ಗಿಲದೇವಿ ದೇವರ ದಾಸಿಮಯ್ಯಗಳ
ಘನ ದಯಾಮೃತ ಕರತಳೋದರ
ಜನತೆಯಾಗಿಯು ನನ್ನ ಸದ್ಗುರು
ವೆನಿಪದದಾಸಿಮಯ್ಯಂಗಳಿಗೆ ತಾನೆ ಸ್ಥಿತಿಯನ್ನೆಲ್ಲಾ
ಬಿನ್ನವಿಸಿ ಹಿತರಂ ಕಳುಹಿಲಾ
ಭಿನ್ನಹವನಾಧರಿಸಿದ ದಾಸ

ಯ್ಯಂ ನಲಿವು ಮಿಗೆ ಭಕ್ತರುಂ ತಾನಾ ಹೊಟ್ಟಲಕರೆಗೆ
ಉನ್ನತಿಯೊಳೆಯಿತಪ್ಪೆಡೆಯೊಳವ
ರಂ ನಿಲ್ಲಿಸಬೇಕೆಂದು ಸೊಗಸದೆ
ಬಿನ್ನಹಂ ಮಾಡುತ್ತಮಿಹ ಜಿನಮುನಿಗಳಂ ನೋಡಿ।[೩೮]

ಸುಗ್ಗಲೆ ದಾಸಿಮಯ್ಯನನ್ನು ಕರೆತರಲು ಹೇಳಿ ಕಳುಹಿಸುತ್ತಾಳೆ. ಅಂದರೆ ದೇವರದಾಸಿಮಯ್ಯ ಮಾಲತಃ ಪೊಟ್ಟಲಕೆರೆಯವನಾಗಿರದೇ ಅಲ್ಲೇ ಸುತ್ತಲಿನ ಯಾವುದೋ ಊರಿನವನಾಗಿರಬಹುದು ಅಥವಾ ಬೇರೆ ಊರಿನವನಾಗಿರಬಹುದು ಎಂಬುದು ಸ್ಪಷ್ಟ. ಸುಗಲದೇವಿಯ ಉಲ್ಲೇಖವಿರುವ ಮೂರು ಶಾಸನಗಳು ನಮಗೆ ದೊರೆಯುತ್ತದೆ. ಈ ಮೂರು ಶಾಸನಗಳು ಸುಗ್ಗಳೆಯನ್ನು ನೇರವಾಗಿ ಉಲ್ಲೇಖಿಸದೆ, ಆಕೆಯ ಭಕ್ತಿ, ಸಮಷ್ಟಿ ವ್ಯಕ್ತಿತ್ವ, ಆದರ್ಶ ರಾಜಪತ್ನಿತ್ವ, ಹಾಗೂ ದಾಂಪತ್ಯದ ಕುರುಹಾಗಿ ಬಲ್ಲಾಳನ ಸತಿ ಕೇತಲದೇವಿ ಮತ್ತು ಕುವರ ಲಕ್ಷ್ಮಣನ ಸತಿ ಸುಗ್ಗಳದೇವಿಯರ ವಿಷಯ ಹೇಳುವಾಗ ಸುಗ್ಗಳೆಯನ್ನು ನೆನೆಯುತ್ತಾರೆ. ಈ ಮೂರು ಶಾಸನಗಳಲ್ಲಿ ಒಂದು ದೇವೂರಿನ ಶಾಸನ.[೩೯] ಇದು ಮುದನೂರಿಗೆ ಸಮೀಪದ ಗ್ರಾಮ. ಈ ಶಾಸನದ ಕಾಲ ಕ್ರಿಶ ೧೦೨೯ ಶಾಸನ ಪಾಠ ಹೀಗಿದೆ

೧. xxxx ಭುವನಾಸ್ರ (ಯು) ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾ
೨. xxx ಪರಮೇಶ್ವರ ಪರಮ ಭಟ್ಟಾರಕಂ ಸತ್ಯಾಶ್ರಯ
೩. ಕುಳತಿ xxx ಳಕಂ ಚಾಳುಕ್ಯಾ ಭರಣಂ ಶ್ರೀ ಮಜ್ಜಗದೇಕಮಲ್ಲದೇವರ
೪. xx (ಯ) ಉತ್ತರೋತ್ತ(ರಂ) ಸಲುತ್ಥಮಿರೆ ಸ್ವಸ್ತ್ಯನವರತ ಪ
೫. xx ಕಲ್ಯಾಣಾಭ್ಯುದಯ ಸಹಶ್ರಪಳಭೋಗಭಾಗಿ
೬. xx ದ್ವಿತಿಯ ಲಕ್ಷ್ಮೀ ವಿಶಿಷ್ಟ ಜನ ಕಾಮಧೇನು ಆಶ್ರಿತ
೭. ಜನ ಕಲ್ಪಲತೆ ರೂಪ ವಿಧ್ಯಾಧರಿ ಕಲಿಕಾಲ ಸರಸ್ವ(ತಿ)
೮. (ಶ್ರೀ) ಮಜ್ಜಗದೇಕಮಲ್ಲ ದೇವರ ವಿಶಾಳವಕ್ಷಸ್ಥಳ ನಿವಾಸಿನಿ (ಯುಗ)
೯. ಪ್ಪ ಶ್ರೀಮತ್ಸಲದೇವಿಯರು ಸಕನ್ರಿ ಪಕಾಳಾತೀಕ ಸಂವತ್ಸ
೧೦. (ರ) ಸತಂಗ ೯೫೧ ನೆಯ (ಶು)ಕ್ಲ ಸಂವತ್ಸರದ ತದ್ವರಿಷಾಭ್ಯಂ
೧೧. (ತರ)ದ ಪಷ್ಯ ಬ.೧ ಬುಧವಾರ ಮುತ್ತರೋತ್ತರಾಯಣ ಸಂಕ್ರಾ
೧೨. (ನ್ತಿ) ಯಂನ್ದು ಸ್ವಸ್ತಿ ಯಮನಿಯಮಾಸನ ಪ್ರಾಣಾ.
೧೩. (ಯಾ) ಮ ಪ್ರತ್ಯಾಹಾರ ಧ್ಯಾನಧಾರಣ ಜಪಸಮಾಧಿ.
೧೪. xxx ಪನ್ನ ಪಾಸುಪತಯೋಗಾಚರ್ಯ್ಯ ಶ್ರೀ ಮದ್ಬ್ರಹ್ಮರಾಸಿ

೧೫. (ಪಂ) ಡಿತರ್ಗೆ ದೇವಾಪುರದ ಶ್ರೀ ಮಾರಸಿಂಘೇಶ್ವರ

೧೬. (ದೇ) ವರಂಗಭೋಗಕ್ಕಂ ತಪೋಧನರ್ಗಂ ವಿದ್ಯಾರ್ತ್ಥಿ ಗಳುಗ(ಂ) ದು

೧೭. (ಶ) ನಾಚ್ಛಾದನ ಪಥ್ಯೌಷದಾರ್ತ್ಥಮಾಗೆ[೪೦]

ಈ ಶಾಸನದಲ್ಲಿ ಸುಗ್ಗಲೆಯ ಪತಿ ಜಗದೇಕಮಲ್ಲ ಜಯಸಿಂಹನೆಂದು ತಿಳಿಯುತ್ತದೆ. ಇನ್ನು ಎರಡನೆಯದಾಗಿ ಕೆರೆಸಂತೆ ಶಾಸನದಲ್ಲಿ ಹೀಗಿದೆ.

ಪಡೆದಳ್ಸುಗ್ಗಲದೇವಿ ಮುನ್ನೆ ಜಯಸಿಂಹೋರ್ವೀಶನೊಳು ಸೌಮ್ಯವಂ
ಪಡೆದಳು ಸಾಂತಲದೇವಿ ಮತ್ತೆ ತೊದಳೇ ಶ್ರೀವಿಷ್ಣುಭೂಪಾಲನೊಳ್
ಪಡೆದಳ್ಕೇತಲದೇವಿ ವಲ್ಲಭನೊಳೀ ಬಲ್ಲಾಳಭೂಪಾಳನೊಳ್।
ಪಡೆದರ್ಮೂವರು ಮೂವರರಸಿಯರು ಸೌಭಾಗ್ಯ ಭಾಗ್ಯಂಗಳಂ॥[೪೧]

ಮೊದಲನೇ ಶಾಸನದಲ್ಲಿ ಸುಗ್ಗಲೆಯ ದಾನದ ಬಗ್ಗೆ ವಿವರಿಸುವಾಗ ಸುಗ್ಗಳದೇವಿಯ ಬಗ್ಗೆ ಹೇಳಿರುತ್ತಾರೆ. ಈಕೆಯಿಂದ ದಾನಪಡೆದವನು ಪಾಶುಪತಯೋಗಾಚಾರ್ಯ ಬ್ರಹ್ಮರಾಶಿ ಪಂಡಿತ. ಇದು ಇವಳ ಶೈವತ್ವದ ಸೂಚನೆಯೋ ಸರ್ವಧರ್ಮಸಮತ್ತಾ ಭಾವದ ಸೂಚನೆಯೋ ಸ್ಪಷ್ಟವಾಗುವುದಿಲ್ಲ. ಇನ್ನು ಎರಡನೇ ಶಾಸನ ಕೇತಲದೇವಿಯ ಬಗ್ಗೆ ಇದೆ. ಸುಗ್ಗಳೆಯ ಆದರ್ಶ ರಾಜಪತ್ನಿತ್ವದ ಕುರುಹು ಅಡಗಿದೆ. ಇದರ ಕಾಲ ೧೧೮೨.[೪೨] ಇನ್ನು ಮೂರನೇ ಶಾಸನ ಬೇಲೂರಿನ ಶಾಸನ ಕುವರಲಕ್ಷ್ಮಣ ಹಾಗೂ ಆತನ ಪತ್ನಿ ಸುಗ್ಗಲದೇವಿಯ ಕುರಿತದ್ದು.

ಜಯಸಿಂಹಕ್ಷಿತಿಪಾಳಕಂಗೆ ಜಗಮೆಲ್ಲಂ ಬಣ್ಣಿಸಲ್ ಪೂಣ್ದು ಭಾ।
ಷೆಯನಾ ಸುಗ್ಗಲದೇವಿ ಕೊಟ್ಟ ತೆಱದಿಂ ಬಲ್ಲಾಳಭೂಪೋತ್ತಮ।
ಪ್ರಿಯಪುತ್ರಂಗೆ ಕುಮಾರ ಲಕ್ಷ್ಮರಥಿನೀನಾಥಗೆ ಕೊಟ್ಟಳ್ ಮನಃ।
ಪ್ರಿಯೆಯಿಂ ಸುಗ್ಗಲದೇವಿ ಭಾಷೆಯನಿಳಾಚಕ್ರಂ ಪೊಗಳ್ವನ್ನೆಗಂ।[೪೩]

ಇಲ್ಲಿನ ಲಕ್ಷ್ಮಣನ ಹೆಂಡತಿ ಸುಗ್ಗಲೆಯ ಭಾಷೆ ಜಯಸಿಂಹನ ರಾಣಿ ಸುಗ್ಗಲೆಯ ಭಾಷೆಗೆ ಸಮಾನವಾದುದು ಎಂಬುದು ಇಲ್ಲಿ ಮುಖ್ಯವಾದುದು.

ಈ ಮೂರು ಶಾಸನಗಳಲ್ಲಿನ ಸಾರಸತ್ವವನ್ನು ಹೀಗೆ ಚರ್ಚಿಸಬಹುದು. ಸುಗ್ಗಳೆಯು ದಾನ ನೀಡಿದುದು ಪಾಶುಪತಯೋಗಾಚಾರ್ಯ ಬ್ರಹ್ಮರಾಶಿ ಪಂಡಿತನಿಗೆ ಎಂಬುದು. ಇದರ ಕಾಲ ಕ್ರಿ.ಶ ೧೦೩೯ ಈ ವಿಷಯ ದೇವುರು ಶಾಸನದಲ್ಲಿ ದೊರೆಯುತ್ತದೆ. ದೇವೂರು ಮುದನೂರಿನ ಸಮೀಪ ಹದಿನೈದು ಕಿಲೋಮೀಟರ್ ಅಂತರದಲ್ಲಿ ಒಂದು ದೇವನೂರು ಎಂಬ ಊರಿದೆ. (ಅದನ್ನು ಈಚೆಗೆ 'ದೇವಪುರ' ಎಂದು ಸಂಸ್ಕರಿಸಲಾಗಿದೆ) ಆ ಊರಿನಲ್ಲಿ

ರಾಮನಾಥ ದೇವಾಲಯವಿರುವುದನ್ನು ಸುರಪುರದ ಶ್ರೀಚನ್ನಮಲ್ಲಪ್ಪ ಪಾಟೀಲರು ಖಚಿತ ಪಡಿಸಿದ್ದಾರೆ. "ಮುದನೂರು, ದೇವನೂರುಗಳು ಪರಸ್ಪರ ದೂರವೇನೂ ಇಲ್ಲ. ಕೆಲವು ಕತೆಗಳಲ್ಲಿ ಮುದನೂರಿನಿಂದ ದೇವರದಾಸಿಮಯ್ಯನು ಪೊಟ್ಟಲಚೆರುವಿಗೆ ಹೋದ ಎಂಬ ಕತೆ ಇರುವುದರಿಂದ ಅವನು ಮುದನೂರಿನವನಿರಬಹುದು. ಅಥವಾ ಸಮೀಪದ ದೇವನೂರಿನವನಿರಬಹುದು ಅವನು ದೇವನೂರಿನವನಾಗಿದ್ದರೆ ಅವನ ಹೆಸರು ದೇವನೂರ ದಾಸಿಮಯ್ಯ ಎಂಬುದಾಗಿ ಅವನು ಶಿವನ ಭಕ್ತನಾಗಿದ್ದರಿಂದ ಹೆಸರು ದೇವರದಾಸಿಮಯ್ಯ ಎಂದಾಗಿರಬಹುದು"[೪೪] ಎಂಬುದು ಎಂ.ಚಿದಾನಂದಮೂರ್ತಿಯವರ ಊಹೆ. ಇದನ್ನು ಸಾದರ ಪಡಿಸುವುದಾದರೆ(ಹಲವು ವಿದ್ವಾಂಸರ ಅಭಿಮತದ ಮೇರೆಗೆ) ಈತನ ದೇವನೂರು ಗ್ರಾಮವೇ ದೇವೂರು ಆಗಿರಲುಬಹುದು. ಶಾಸನದ ದೇವೂರು ಚಿದಾನಂದ ಮೂರ್ತಿಯವರು ಉಲ್ಲೇಖಿಸಿರುವ ದೇವನೂರು ಒಂದೇ ಆಗಿದ್ದಲ್ಲಿ ದೇವರಪುರ, ದೇವನೂರು > ದೇವುರು > ಆಗಿ ಅದೇ ದೇವರ ವಿಶೇಷಣಕ್ಕೆ ಎಡೆಮಾಡಿಕೊಟ್ಟಿರ ಬಹುದು ಎನ್ನುವುದನ್ನು ಒಪ್ಪಬಹುದು. ಭಾಷಾ ಬೆಳವಣಿಗೆಯಲ್ಲಿ ಈ ರೀತಿಯ ಅನೇಕ ಬದಲಾವಣೆಗಳಾಗಿರುವುದನ್ನೆ ಕಾಣಬಹುದು ಅದೇ ರೀತಿ ಇಲ್ಲಿಯೂ ಭಾಷಾ ಬಳಕೆಯ ಸಾಧ್ಯತೆಯಿಂದ ದೇವೂರದಾಸಿಮಯ್ಯನು, ದೇವರದಾಸಿಮಯ್ಯನಾಗಿರಬಹುದು.

ಸುಗ್ಗಲಾದೇವಿಯ ಗುರುವಾದ ದೇವರದಾಸಿಮಯ್ಯ ಜೈನರನ್ನು ಗೆದ್ದದ್ದು, ಸುಗ್ಗಲೆಯು ತನ್ನ ಗಂಡನೊಡನೇ ವಾದವೂಡಿ ಗೆದ್ದದ್ದು, ಅಂದಿನ ರಾಜ್ಯಮಟ್ಟದ ಸುದ್ದಿ ಯಾಗಿರಬೇಕು ಎಂದು ಎಂ.ಎಂ. ಕಲಬುರ್ಗಿಯವರು ಉತ್ತರೇಶ್ವರ ದೇವಾಲಯಗಳು ಎಂಬ ಲೇಖನದಲ್ಲಿ ವಿವರಿಸುತ್ತಾರೆ.[೪೫] ಹೀಗೆ ಪ್ರಸಾರಗೊಂಡ ಸುದ್ದಿ ಶಾಸನ ಪದ್ಯಕ್ಕೂ ಆಕಾರವಾಗಿ ಕೆರೆಸಂತೆ ಹಾಗೂ ಹಳೆಬೀಡಿನ ಶಾಸನಗಳಲ್ಲಿ ಕಂಡು ಬರುತ್ತದೆ. "ಜೈನರಿಗೆ ವಾದದಲ್ಲಿ ಸರಿಯಾಗಿ ಉತ್ತರಿಸಿದ ಕಾರಣ(ಉತ್ತರಿಸು=ಉತ್ತರನೀಡು) ಎಂಬುದಕ್ಕಿಂತ ಜೈನರ ತರ್ಕವನ್ನು ಭಕ್ತಿಯಿಂದ ದಾಟಿದ ಕಾರಣ (ಉತ್ತಿರಿಸು=ದಾಟು) ದೇವರಿಗೆ ಉತ್ತರೇಶ್ವರ ಹೆಸರು ನೀಡಲಾಯಿತೆಂದು ಹೇಳಲಾಗಿದೆ."[೪೬] ಈ ಘಟನೆಯು ಪ್ರಸ್ತುತ ಕಾವ್ಯಗಳ ಪ್ರಕಾರ ಪುಟ್ಟಲಕೆರೆಯಲ್ಲಿ ನಡೆದದ್ದು. ಆದರೆ ಪೊಟ್ಟಲಕೆರೆಯಲ್ಲಿ ದೊರೆಯುವ ನಾಲ್ಕು ಕನ್ನಡ ಶಾಸನಗಳಲ್ಲಿ ಈ ಘಟನೆಯ ವಿವರಗಳು ಹಾಗೂ ಈ ಹೆಸರಿನ ದೇವಾಲಯದ ಉಲ್ಲೇಖಗಳು ಕಂಡು ಬರುವುದಿಲ್ಲ. ಕಾವ್ಯಗಳಲ್ಲಿ ಇರುವಂತೆ ಈ ಉತ್ತರೇಶ್ವರ ದೇವಾಲಯವನ್ನು ಸ್ಥಾಪಿಸಿ ಸ್ಪಟಿಕ ಲಿಂಗವನ್ನು ಪ್ರತಿಷ್ಠಾಪಿಸಲಾಯಿತು ಎಂಬ ವಿವರಗಳು ಇರುವುದು ತಿಳಿಯುತ್ತದೆ. ಹಾಗಾದರೆ ಆ ದೇವಾಲಯವನ್ನು ಎಲ್ಲಿ ಸ್ಥಾಪಿಸಲಾಯಿತು ಎಂಬ ಪ್ರಶ್ನೆ ಸಹಜವಾದ್ದುದು, ಇದೇ ಪ್ರಶ್ನೆಯನ್ನು ಎತ್ತಿಕೊಂಡು ಎಂ.ಎಂ.ಕಲಬುರ್ಗಿಯವರು ಸತ್ಯಾಸತ್ಯದ ಊಹೆಗೆ ಕೈ ಹಾಕಿದ್ದಾರೆ. ಅದು

ಹೀಗಿದೆ. "ಪೊಟ್ಟಲಕೆರೆಯ ವಾದದ ನಂತರ ಆ ವಿಜಯದ ನೆನಪಿಗೆ ಉತ್ತರೇಶ್ವರ ಲಿಂಗವನ್ನು ತಮ್ಮ ದಾರಿ ಅಥವಾ ವಾಸ್ತವ್ಯದ ಸ್ಥಳಗಳಲ್ಲಿ ಅಲ್ಲಲ್ಲಿ ಪ್ರತಿಷ್ಠಾಪಿಸದ್ದಾರೆ ಎಂಬ ಅರ್ಥವನ್ನು ನೀಡಿದ್ದಾರೆ. ಈ ಹೆಸರಿನ ದೇವಾಲಗಳು ಎಳಿಮೇಳ, ಕೊಲ್ಲಿಪಾಕೆ, ಅಲಂಪುರ, ಶಿರೂರು, ಜಮಖಂಡಿ, ಕಣವಿ ಸಿದ್ದಗಿರಿ, ಏಣಗಿ, ಮಂಗಳವೇಡಿ, ಇತ್ಯಾದಿ ಗ್ರಾಮಗಳಲ್ಲಿ ಇರುವುದಾಗಿ ತಿಳಿದುಬರುತ್ತದೆ. ಇದರಲ್ಲಿ ಎಳಿಮೇಲಿಯ ಉತ್ತರೇಶ್ವರ ದೇವಾಲಯವನ್ನು ಗಮನಿಸಬಹುದು"[೭೭] ಎನ್ನುತ್ತಾರೆ.

"ನಕುಲಿಶ ಪಾಶುಪತ ಶೈವ ಸಂಪ್ರದಾಯಕ್ಕೆ ಸಂಬಂಧಿಸಿದ ವ್ಯಕ್ತಿ ಮಲಯಾಳ ಪಂಡಿತ ಈತ ಮುದನೂರಿನಲ್ಲಿ ಕ್ರಿ.ಶ ೧೧೦೦ರಲ್ಲಿ ರಾಮೇಶ್ವರ ದೇವಾಲಯದ ಅರ್ಚಕನಾಗಿದ್ದು, ಪಾಶುಪತದಲ್ಲಿ ಹೊಸ ಶಾಖೆಯನ್ನು ಹುಟ್ಟು ಹಾಕುವ ಮೂಲಕ ಅಭಿನವ ಪಾಶುಪತದ ಪ್ರವರ್ತಕನೆಂದೇ ಶಾಸನಗಳಲ್ಲಿ ಕೀರ್ತಿತನಾಗಿದ್ದಾನೆ. ಇವನು ಶಾಸನಗಳಲ್ಲಿ ಕಿರ್ತಿತನಾಗಿದ್ದಾನೆ. ಇವನು ಎಳಮೇಲ ಗ್ರಾಮಕ್ಕೆ ಸಂಬಂಧಿಸಿದವನಾಗಿದ್ದು ಅಲ್ಲಿನ ಸಿಂಹಪರ್ಷಿಯವನ್ನು ಮುದನೂರಿಗೂ ಪರಿಚಯಿಸಿದನು. ಹೀಗೆ ಮುದನೂರು ಸಂಪ್ರದಾಯಕ್ಕೆ ಮಾತೃಸ್ವರೂಪದಲ್ಲಿರುವ ಎಳಮೇಲದಲ್ಲಿಯೂ ಉತ್ತರೇಶ್ವರ ದೇವರನ್ನು ಸ್ಥಾಪಿಸಿದಂತಿದೆ."[೭೮] ಈ ವಿಷಯವು ಎಳಮೇಲದ ಕೆಲವು ಶಾಸನಾಧಾರಗಳಿಂದ ತಿಯುತ್ತದೆ. ಅದರಲ್ಲೂ ಮಾರ್ಸನ್ ಹಳ್ಳಿ ಶಾಸನ ಹಾಗೂ ಸಮೀಪದ ಕಡ್ಲೆವಾಡ ಗ್ರಾಮದ ಶಾಸನಗಳು[೭೯] ಈ ವಿಷಯವನ್ನು ಸ್ಪಷ್ಟೀಕರಿಸುತ್ತವೆ. "ಉತ್ತರೇಶ್ವರ ಎಂಬ ಹೆಸರಿನ ಒಟ್ಟು ೧೪ ದೇವಾಲಯಗಳು ಕರ್ನಾಟಕ, ಆಂದ್ರ, ಮಹಾರಾಷ್ಟ್ರಗಳಲ್ಲಿ ಕಂಡು ಬಂದಿವೆ. ಇವುಗಳಲ್ಲಿ ಬಹಳಷ್ಟು ಕಾಳಮುಖ ಮತ್ತು ಪಾಶುಪತ ಸಂಪ್ರದಾಯಕ್ಕೆ ಸೇರಿರ ಬಹುದೆನಿಸುತ್ತದೆ"[೮೦] ಎಂಬುದನ್ನಾಧರಿಸಿ ಅಂದಿನ ಪ್ರಸಿದ್ಧಿಯನ್ನು ಗ್ರಹಿಸಬಹುದು.

ದೇವರದಾಸಿಮಯ್ಯನ ಬಗೆಗಿನ ಈ ಎಲ್ಲಾ ಸ್ಪಷ್ಟತೆಗಳು ಹಾಗೂ ಊಹೆಗಳನ್ನಾಧರಿಸಿ, ಈತನು ಕರ್ನಾಟಕವನೇ ಆಗಿದ್ದು ಸುಗ್ಗಲೆಯ ಕರೆಯ ಮೆರೆಗೆ ಪೊಟ್ಟಲಕೆರೆಗೆ ಹೋಗಿರುವುದು ಸ್ಪಷ್ಟ. ಎಂ.ಚಿದಾನಂದಮೂರ್ತಿಯವರು ಸ್ಪಷ್ಟಪಡಿಸುವಂತೆ "ಈತನು ಕ್ರಿ.ಶ.೧೦೪೦ರಲ್ಲಿ ಮೇದಕ್ ಜಿಲ್ಲೆ ಬೀದರ್ ಜಿಲ್ಲೆ ಗುಲ್ಬರ್ಗ ಜಿಲ್ಲಾ ಪ್ರದೇಶಗಳಲ್ಲಿ ಶ್ರೇಷ್ಠ ವೀರಶೈವ ಗುರು ಎಂದೇ ಪ್ರಖ್ಯಾತನಾಗಿದ್ದನು."[೮೧] ಈ ಗ್ರಹಿಕೆಯು ಸತ್ಯಕ್ಕೆ ಹತ್ತಿರವಾಗಿದ್ದು, ಈತನು ಮೇದಕ್ ಜಿಲ್ಲೆಯಲ್ಲಿರುವುದಕ್ಕೆ ಕುರುಹುಗಳು ಸಿಗದಿರುವುದರಿಂದ ಬೀದರ್ ಜಿಲ್ಲೆ ಹಾಗೂ ಗುಲ್ಬರ್ಗಾ ಜಿಲ್ಲೆಯನ್ನೆ ಹತ್ತಿರಕ್ಕೆ ತರಬಹುದು ಅದರಲ್ಲಿಯೂ ಇಂದಿನ ಸುರಪುರ ತಾಲ್ಲೂಕಿನ ದೇವೂರು ಎಂದು ಸಹ ಪಾಶುಪತರ ಒಂದು ಧಾರ್ಮಿಕ ಕೇಂದ್ರವಾಗಿರಬಹುದು. ಅಲ್ಲಿ ಉತ್ತರೇಶ್ವರ ದೇವಾಲಯದ ಕುರುಹು ದೊರೆಯದೆ ರಾಮೇಶ್ವರ ದೇವಾಲಯ-ವಿರುವುದಾಗಿ ತಿಳಿಯುತ್ತದೆ. ಆದ್ದರಿಂದ

ಇದನ್ನು ಒಂದೆಡೆ ಇಟ್ಟುಕೊಂಡು, ಮುದನೂರು ಸಮೀಪದ ಅಭಿನವ ಪಾಶುಪತದ ಕೇಂದ್ರ 'ಎಳಮೇಲ'ವೂ ಆತನ ಊರು ಕೂಡ ಆಗಿರಬಹುದಾದ ಊಹೆಯನ್ನು ಮಾಡಬಹುದು. ಎಳಮೇಲ ಅಂದಿನ ಪಾಶುಪತ, ಅದರಲ್ಲಿಯೂ ಅಭಿನವ ಪಾಶುಪತದ ಭವ್ಯ ಪರಂಪರೆ ಅಂಕುರಿಸಿದ ಕೇಂದ್ರವಾಗಿ ಚರಿತ್ರೆಯಲ್ಲಿ ಗುರುತಿಸಲ್ಪಟ್ಟಿದೆ. ದೇವರದಾಸಿಮಯ್ಯ ವಾದದಲ್ಲಿ ಗೆದ್ದು ಪ್ರತಿಷ್ಠಾಪಿಸಿದ ಉತ್ತರೇಶ್ವರ ದೇವಾಲಯವು ಇಲ್ಲಿದೆ(ಮುದನೂರಿನ ಯಾವ ಶಾಸನದಲ್ಲಿಯೂ ದೇವರದಾಸಿಮಯ್ಯ ಎಂಬ ವ್ಯಕ್ತಿಯ ಉಲ್ಲೇಖವಿಲ್ಲದ ಕಾರಣ)ಎಳಮೇಲವು ದೇವರದಾಸಿಮಯ್ಯನ ಊರಾಗಿರಬಹುದು ಎಂಬದಕ್ಕೆ ಇದೂ ಕಾರಣವಾಗುತ್ತದೆ. ದೇವರದಾಸಿಮಯ್ಯನ ನಂತರ ಸ್ಥಾಪಿತವಾದ ದೇವಾಲಯಗಳ ಪಟ್ಟಿಯಲ್ಲಿ ಮುದನೂರು ಹಾಗೂ ಎಳಮೇಲ ಎರಡು ಸ್ಥಳಗಳ ಉತ್ತರೇಶ್ವರ ದೇವಾಲಯಗಳು ಇರುವುದರಿಂದ ಈ ಎರಡು ಸ್ಥಳಗಳಲ್ಲಿ ಯಾವುದಾದರೂ ಒಂದು ದೇವರದಾಸಿಮಯ್ಯನ ಊರಾಗಿರಬಹುದೆಂದು ಊಹಿಸಬಹುದು ಕಾವ್ಯಗಳಲ್ಲಿ ದಂತಕತೆಗಳ ಸೇರಿರುವಿಕೆಯಿಂದ ಸ್ಪಷ್ಟಗೊಳ್ಳದ ಸಮಸ್ಯೆಯಾಗಿಯೇ ಉಳಿದಿದೆ. ಒಂದು ವೇಳೆ ಈತ ದೇವೂರಿನವನೇ ಆಗಿದ್ದು, ನಂತರ ತನ್ನ ಜ್ಞಾನಸಿದ್ಧಿ ಹಾಗೂ ಶೈವ ಧರ್ಮ ಪ್ರಚಾರಕನಾಗಿ ತನ್ನ ಪ್ರಸರಣ ಕಾರ್ಯಕ್ಕೆ ಮುದನೂರು, ಇಲ್ಲವೇ ಎಳಮೇಲವನ್ನು ಆಯ್ಕೆ ಮಾಡಿಕೊಂಡಿರುವ ಸಾಧ್ಯತೆ ಇದೆ.

ದೇವರದಾಸಿಮಯ್ಯನು ಕ್ರಿ.ಶ೧೦೪೦ ರಲ್ಲಿಯ ಒಬ್ಬ ಶ್ರೇಷ್ಠ ಶರಣ, ಪ್ರಖ್ಯಾತ ವೀರಶೈವ ಗುರುವಾಗಿದ್ದು, ಈತನು ಸನ್ಯಾಸತ್ವ ಸ್ವೀಕರಿಸಿದ ಒಬ್ಬ ಬ್ರಹ್ಮಚಾರಿ ವೀರಶೈವಪಂಡಿತ ನಿರಬಹುದು ಎಂಬ ವಾದವು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಇದಕ್ಕೆ ಪೂರಕವೆಂಬಂತೆ ದೇವರದಾಸಿಮಯ್ಯನ ವೈಯಕ್ತಿಕವಾದ ಯಾವುದೇ ವಿವರಗಳು ದೊರೆಯುವುದಿಲ್ಲ ಕೇವಲ ಪೊಟ್ಟಲಕೆರೆಯ ಪವಾಡ ಪ್ರಸಂಗವನ್ನಾಧರಿಸಿ ಆತನ ಬಗೆಗಿನ ವಿವರಗಳನ್ನು ಕಲೆಹಾಕುವ ಪ್ರಯತ್ನ ನಡೆದಿದೆಯಾದರು ಸಫಲಗೊಳ್ಳುವುದಿಲ್ಲ. ದೇವರದಾಸಿಮಯ್ಯನನ್ನು ಸುಗ್ಗಲೆಯ ಗುರುವಾಗಿ ಮಾತ್ರ ನಾವು ಕಾವ್ಯಗಳಲ್ಲಿ ಕಾಣುವುದರಿಂದ ಆಕೆಯ ಮೂಲಕವೇ ದೇವರದಾಸಿಮಯ್ಯನ ಜೀವನದ ಕೆಲವು ಘಟನೆಗಳನ್ನು ತಿಳಿಯಬಹುದು. ತೆಲುಗು ಪಾಲ್ಕುರಿಕೆ ಸೋಮನಾಥನ ಬಸವಪುರಾಣವು ದೇವರದಾಸಿಮಯ್ಯ ಹಾಗೂ ಸುಗ್ಗಲೆಯನ್ನು ಹೀಗೆ ಪ್ರಸ್ತುತ ಪಡಿಸುತ್ತದೆ.

**ತೇಡರ ದಾಸಿಯ್ಯ ಕಥೆ**

ಪೊಟ್ಲಚೆಱುವಿನ ಪುರಿನ
ವರಲಿಂಗ ನೇಣ್ಣೂರು ವಸದುಲು ಗಟ್ಟಿ
ಗೊಲುವಂಗ ಜನಕುಲಗುರುಂಡೊಕ್ಕರುಂಡುಂ

ನಾ ಬಲ್ಲಹನಕು ಮುಖ್ಯಾಚಾರುಂಡ ಗುಚುಂ
ದಾ ಬುದ್ಧಿನೆಪ್ಪುಚುಂ ದಿಗಂಬ್ರ ಬೋಧಿಂಪ
ಕ್ಷಿತಿಪತಿಯ್ಯನ ಯಾಸಿಂಗ ಬಲ್ಲಹನಿ
ಯತಿವ ಸುಗ್ಗಲದೇವಿಯ ಕಲಂಕ ಚಿತ್ತ
ತಾಗುನು ದೇಡರ ದಾಸಿಯ್ಯ ವರದ
ಯನೂನಸದ್ಭಕ್ತಿ ಮಾನಸಗಾನ
ತಮಗುರು ಸ್ವಾಮುಸೌ ದಾಸಿದೇನಕು
ರಮಣಿಯೂ ವಿನ್ನಪುನೇಸಿ ಹಿತುಲಂ
ಬುಚ್ಚಡು ನಪ್ಪುಡ ಪೊಟ್ಲ ಚೆರ್ವುನಕು
ನಚ್ಚುರು ವಂದಂಗ ವಜ್ಜೆನೆಯ್ಯುಡನು
ಜಿನಮುನುಲ್ಯೆಕ್ಕು ಗುಚ್ಚಿತಮುಲು ನಯಂ
ಗನಿ ನೂಂಕುಚುನು ಲೆಕ್ಕಗೊಸ ಕೇರಗು ದೇಶ
ನಗ್ಗುರು ಶ್ರೀ ಚರಣಾಂಬುಜಾಲಕು
ಸುಗ್ಗಲ ದೇವಿ ಯತ್ಸುಕ ಲೀಲ ವೊಕ್ಕೆ
ಭಾಮ ಗುರು ಪ್ರಸಾದಮೃತಾಂಬೋಧಿ
ಲೋ ಮುದಂಬಾರಂ ದೇಲುಚು ಮುನುಗುಂಚನು[೩೨]

ಇದು ತೆಲುಗು ಬಸವಪುರಾಣದ ತುಣುಕು ಇದರ ಅನುವಾದ ಭೀಮಕವಿಯ ಬಸವಪುರಾಣ ಸಂಧಿ ೫೦ ರಲ್ಲಿ ಕೆಳಗಿನಂತೆ ರಚಿತವಾಗಿದೆ. ಇದರ ಕಾಲ ೧೩೬೯ ಈ ಕಾವ್ಯದಲ್ಲಿ ದೇವರದಾಸಿಮಯ್ಯನ ಕಥೆ.

ಸೂಚನೆ : ಶ್ರಾವಕರನಪಹರಿಸಿ ಸುಗ್ಗಲ
ದೇವಿಯರ ಗುರು ದಾಸಿಮಯ್ಯನು
ಶೈವನಂ ಮಾಡಿದನೊಲಿದು ದೇಸಿಂಗರಾಯನನು॥
ಕೇಳು ಮತ್ತೆಯು ಹೊಟಲಕೋಟೆಯೊಳ
ಗೇಳುನೂರ್ಬಸದಿಗೆಳವೆಲ್ಲೆಕೆ
ಓಳಿಯಿಂದಿಪ್ಪತ್ತುಸಾವಿರ ಜನಮುನಿಗಳಲ್ಲಿ
ಓಲಗಿಸಲಾ ಮುನಿಗಳೆಲ್ಲಕೆ
ಮೇಲೆನಿಪ ಗುರುವೊಬ್ಬನಾ ಭೂ

ಪಾಲಕಂಗಾಚಾರ್ಯನಾಗಿ ಜಿನ ಪ್ರಬುದ್ಧಿಯಲಿ.॥
ಮನುಜರಂ ಬೋಧಿಸುಲಿರಲ್ಕಾ
ಜನಪನಹ ದೇಸಿಂಗರಾಯನ
ವನಿತೆ ಸುಗ್ಗಲದೇವಿ ದೇವರ ದಾಸಿಮಯ್ಯಗಳ।
ಘನದಯಾ ಮೃತಕರತಳೋದರ
ಜನಿತೆಯಾಗಿಯು ತನ್ನ ಸದ್ಗುರು
ವೆವೆನಿಪ ದಾಸಯ್ಯಂಗಳಿಗೆ ತಾನೀ ಸ್ಥಿತಿಯನೆಲ್ಲ॥
ಬಿನ್ನವಿಸಿ ಹಿತರಂ ಕಳುಹಲಾ
ಬಿನ್ನಹವನಾದರಿಸಿ ದಾಸ
ಯ್ಯಂ ನವಲಿವು ಮಿಗೆ ಭಕ್ತರುಂ ತಾನಾ ಹೊಟಲಕೆಱೆಗೆ।
ಉನ್ನತಿಯೊಳೆಯಿತಪ್ಪೆಡೆಯೊಳವ
ರಂ ನಿಲಿಸಬೇಕೆಂದು ಸೊಗಸದೆ
ಬಿನ್ನಹಂ ಮಾಡುತ್ತವಿಹ ಜನಮುನಿಗಳಂ ನೋಡಿ.॥[೫೩]

ಈ ಪದ್ಯಭಾಗಗಳಿಂದ ದೇವರದಾಸಿಮಯ್ಯನು ಸುಗ್ಗಲೆಯ ಗುರುವಾಗಿದ್ದನು ಆತನನ್ನು ಪೊಟ್ಟಲಕೆರೆಗೆ ದುಗ್ಗಳೆಯು ಜೈನಧರ್ಮದ ಪ್ರಬುದ್ದತೆಯನ್ನು ಮತ್ತು ಅದನ್ನೇ ರಾಜ್ಯದಲ್ಲಿ ಬೋದಿಸುತ್ತಿರಲು ಅದನ್ನು ಕಂಡು ಜೈನ ಗುರುಗಳಿಗೆ ವಿರೋಧವೆಂಬಂತೆ ತಾನು ಶೈವಧರ್ಮವನ್ನು ಅನುಸರಿಸುವುದರ ಬಗ್ಗೆ ಇದ್ದ ಭಿನ್ನಾಭಿಪ್ರಾಯದಲ್ಲಿ ತಾನಿರುವ ಸ್ಥಿತಿಯನ್ನು ಭಿನ್ನವಿಸಿಕೊಂಡು ದೇವರದಾಸಿಮಯ್ಯನನ್ನು ಕರೆ ಕಳಿಸುತ್ತಾಳೆ. ನಂತರ ಅಲ್ಲಿ ಜೈನರಿಗೂ ಹಾಗೂ ದೇವರದಾಸಿಮಯ್ಯನಿಗೂ ಮೊದಲು ವಾದ ವಿವಾದಗಳು ನಡೆದು ಅವರ ಪ್ರಶ್ನೆಗಳಿಗೆ ದಾಸಿಮಯ್ಯ ಉತ್ತರಿಸುತ್ತಾನೆ. ನಂತರ ಬೌದ್ದರು ಮತ್ತು ದಾಸಿಮಯ್ಯನ ಮಧ್ಯದಲ್ಲಿ ವಾದ ಪ್ರತಿವಾದಗಳು ನಡೆಯುತ್ತವೆ. "ಶ್ರವಾವಕರು ತಮ್ಮೊಳು ವಿಚಾರಿಸಿ ಪಾವಕಜ್ವಾಲ ಪ್ರಭಾವದ ಹಾವನೊಂದದಂ ತರಿಸಿ ಘಟದೊಳಗಿರಿಸಿ ತುಡುಕಿಸುವ ಎನುತ"[೫೪]

ವಾಸುಗಿಗೆಣೆಯನಿಪ ಪಟು
ಘನುಬುಜಂಗವನಿರಿಸಿ ಹರವಿಯೊ
ಳ ನಘನಿಲ್ಲುಂಟೆ ಶಿವಂ ಸರ್ವಜ್ಞನೆಂದೆಂದೆ
ಎನಲಭವನೀ ಘದೊಳುಂಟುಂ

ಟನಿತು ಸಂದೇಹವಿಲ್ಲ ವಿಲ್ಲದ
ಡನುಪಮಂ ರಾಮೇಶವರಂ ತಾಂ ಸರ್ವಗತನಹನೆ.[೫೫]

ಎಂದು ಜೈನರು ಸವಾಲು ಹಾಕಲು ದೇವರದಾಸಿಮಯ್ಯನು "ರಾಮನಾಥನು ಸರ್ವಗತಿನೀ, ರಾಮನಾಥನು ಭಕ್ತರನಘರು, ರಾಮನಾಥ ನನರ್ಚಿಸಿದವರು ಪರಮ ಪಾವನರು"[೫೬] ಎನ್ನುತ ಆ ಘಟದೊಳಗೆ ಕೈಹಾಕಿ ನೋಡಿ ಆ ಸರ್ಪವನ್ನು ಹಿಡಿದು ತೆಗೆಯುವ ಸಮಯದಲ್ಲಿ ಅದು ಸ್ಪಟಿಕಲಿಂಗವಾಗಿ ಬದಲಾಯಿತು ಇದನ್ನು ಕಂಡು ನೆರೆದ ಜನ ದಿಗ್ಭ್ರಾಂತರಾದರು.

ಕುಟಿಲ ಪರಸಮಯ ಕ್ರಿಯಾಪ್ರವಿ
ಘಟನ ದೇವರ ದಾಸಿಗಳು ತತ್
ಪಟು ಕರಸ್ಥಳ ಘಟತಮಾಗಿ ಪ್ರಭವಿಸುತಮಿರಲು
ಹೊಟಲಕೆಱೆಯ ಸಮಸ್ತ ಜನರು
ತ್ಕಟವಿದೆನುತಂ ಹೊಗಳುತಂಜುಳಿ
ಪ್ರಟಕಲಿತ ಶಿರನಾಗಿ ಜಯಜಯನಿ ನದವಗ್ಗಳಿಸೆ[೫೭]

ಸುಗ್ಗಲದೇವಿ ಸಂತಸಗೊಳ್ಳುತ್ತಾಳೆ. 'ಮುನ್ನತಿಯೊಳಾ ತರ್ಕವಂ ತಾನುತ್ತರಿಸಿದುದಱಿಂ' ಚೆನ್ನ ಉತ್ತರನಾಥ ಎಂದು ಕರೆದು ಅಲ್ಲಿನ ಜನರನ್ನು ಉನ್ನತೀಕರಿಸಲು, ಮೊದಲಿನ ಏಳು ನೂರು ಬಸದಿಗಲನ್ನೆಲ್ಲ ಹಿರಿದು ಹಾಕಿ ಈ ಲಿಂಗವನ್ನು ಪ್ರತಿಷ್ಠಾಪಿಸಲಾಯಿತು ಎಂಬುದು ಇಲ್ಲಿ ಗಮನಸಬೇಕಾದುದು.

ಈ ಕಾವ್ಯದಲ್ಲಿಯೇ ಬರುವ ಒಂದು ಪದ್ಯ ಹಲವು ಗೊಂದಲಗಳಿಗೆ ಕಾರಣವಾಗಿದ್ದು, ಅದರ ಸಂದರ್ಭವನ್ನು ಮುಂದಿನಂತೆ ನೋಡಬಹುದು. ಸುಗ್ಗಲೆಯ ಮಾತಿನಂತೆ ಜಯಸಿಂಹನು ಜೈನರನ್ನು ಕರೆಯಿಸಿದ. ಜಯಸಿಂಹನ ಆಜ್ಞೆಯಂತೆ ಜೈನ ಮುನಿಗಳು ಜೈನಧರ್ಮದ ತತ್ವಗಳನ್ನು ತಾರ್ಕಿಕವಾಗಿ ಮಂಡಿಸಿದರು. ಇದಕ್ಕೆ ಉತ್ತರವಾಗಿ ದೇವರದಾಸಿಮಯ್ಯನು ವಿಶ್ವಧಾತ ರಾಮನಾಥ ಎಂಬುದಾಗಿ ಉತ್ತರಿಸುವ ಸಂದರ್ಭದಲ್ಲಿ ಕವಿ

ಅವಱೊಳಿಲ್ಲಾ ಶಿವನು ಪಶುಪತಿ
ಇವು ಪಶುಗಲೋ ಶಿವನು ಪಶುವೋ
ಶಿವನುವಲ್ಲಿಲ್ಲಾ ಇವಱೊಳಿಂಬ್ಬನಾದಡೆಯು
ಶಿವನ ಗುಣಮಂ ಹೊಂದ ವೇಡಾ
ಅವಱೊಳೆನಲನ್ಯಾಯ ವಾದದ
ಶ್ರವಣರುಗಳಂ ನೋಡಿ ಜೇಡರದಾಸಿಯಿಂತೆಂದ[೫೮]

ಎಂದು ರಚಿಸಿದ್ದಾನೆ. ಈ ಪದ್ಯದಲ್ಲಿ ಅಚಾನಕ್ಕಾಗಿಯೋ ಅಥವಾ ಮಾತಿನ ಬರದಲ್ಲಿಯೋ ಎಂಬಂತೆ 'ಜೇಡರದಾಸಿ' ಎಂಬ ಹೆಸರು ನುಸುಳಿದೆ ಈ ಅವಾಂತರದಿಂದಲೇ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಇದುವರೆಗೂ ಬಗೆಹರಿಸಲಾಗದ ಸಮಸ್ಯೆ ಎದುರಾಗಿ ನಿಂತಿದೆ ಎಂದರೆ ತಪ್ಪಾಗಲಾರದು. ಬಹಶಃ ದೇವರದಾಸಿಮಯ್ಯನ ವೃತ್ತಿಯೂ ನೇಯ್ಗೆ ಈ ವೃತಿಯವನಾಗಿರಬಹುದು ಆ ಕಾರಣಕ್ಕಾಗಿಯೇ ಈತನನ್ನು ಜೇಡರದಾಸಿ ಎಂದು ಕರೆದಿರಬಹುದು ಎಂಬ ಊಹೆಯೂ ಇದೆ.

"ಅದೇ ಭೀಮಕವಿ ಶಂಕರದಾಸಿಮಯ್ಯನ ಕತೆಯನ್ನು ಅಂದರೆ ವಚನಕಾರ ಹಾಗೂ ದುಗ್ಗಳೆಯ ಗಂಡ ಜೇಡರದಾಸಿಮಯ್ಯನ ಕಥೆಯನ್ನು ೨೨ನೇ ಸಂಧಿಯಲ್ಲಿ ನಿರೂಪಿಸಿದ್ದಾನೆ. ಮೇಲೆ ಹೇಳಿದಂತೆ ಪೊಟ್ಟಲಕೆರೆಯ ದೇವರದಾಸಿಮಯ್ಯನ ಪರ್ಯಾಯ ನಾಮವಾಗಿ ಜೇಡರದಾಸಿಮಯ್ಯ ಹೆಸರು ಬಳಸಿರುವುದು ವಿನೂತನವಾಗಿ ಕಾಣುತ್ತದೆ. ಇದನ್ನು ಹೆಚ್ಚು ಜನ ಗಮನಿಸಿಲ್ಲ."[೫೯] ವಿದ್ಯಾಶಂಕರ ಅವರ ಸಂಪಾದಿತ ಬಸವಪುರಾಣ ಹಾಗೂ ಆರ್.ಸಿ ಹಿರೇಮಠ ಅವರ ಸಂಪಾದಿತ ಬಸವಪುರಾಣ ಎರಡರಲ್ಲೂ ಹೀಗೆ ಇದೆ. ಇದನ್ನು ಎಂ.ಚಿದಾನಂದಮೂರ್ತಿಯವರು ಇಲ್ಲಿ ನಡೆದಿರಬಹುದಾದ ಕೆಲವು ಭಾಷಿಕ ವ್ಯತ್ಯಯಗಳನ್ನಾಧರಿಸಿ ಹೀಗೆ ನಿರೂಪಿಸುತ್ತಾ "ಜೇಡರ ದಾಸಿಮಯ್ಯ ಎಂಬುದು ಹಸ್ತ ಪ್ರತಿಕಾರರ ದೋಷ ಅಲ್ಲ ತೆಲುಗು, ಬಸವ ಪುರಾಣದಲ್ಲಿ ದೇವರದಾಸಿಮಯ್ಯನನ್ನು ದೇಡರ ದಾಸಿಮಯ್ಯ ಎಂದು ಹೆಸರಿಸಿದೆ. ತೆಲುಗಿನಲ್ಲಿ ಜೇಂಡ್ರ, ದೇಂಡ್ರ ಎಂಬುದು ನೇಕಾರ ವರ್ಗವನ್ನು ಸೂಚಿಸುತ್ತದೆ(ತಮಿಳು-ಚಂಡಿರವರ್ ಅಥವಾ ಜೇಂಡಿರವ್, ಕನ್ನಡ-ಜಾಡ, ಜೇಡ, ತುಳು-ಜಾಡೆ, ಜಾಡ್ಯೆ ಇವು ಜಾತಿ ಪದಗಳು ಇವೆಲ್ಲಕ್ಕೂ ನೇಕಾರರು ಎಂದೇ ಅರ್ಥ). ತೆಲುಗು ಬಸವಪುರಾಣಮುವಿನಲ್ಲಿ ಬರುವ "ದೇಡರ" ಎಂಬುದೇ ಮೂಲವಾದುದೆಂದು ಗ್ರಹಿಸುವುದಾದರೆ ದೇವರದಾಸಿಮಯ್ಯನೂ ನೇಕಾರ ವೃತ್ತಿಯವನಾಗಿರುವ ಸಾಧ್ಯತೆ ಹೆಚ್ಚು. ಕನ್ನಡ ಬಸವಪುರಾಣದಲ್ಲಿ ದೇವರ ದಾಸಿಮಯ್ಯನನ್ನು ಒಂದೆಡೆ ಜೇಡರ ಎಂದು ಕರೆಯಲು ತೆಲುಗು ಮೂಲದ 'ದೇಡರ' ವಿಶೇಷಣವೇ ಕಾರಣ"[೬೦](ದ್, ಜ್ ವಿನಿಮಯ ಕನ್ನಡದಲ್ಲಿ ಸಾಮಾನ್ಯ)ವಾಗಿದ್ದಂತೆ ತೋರುತ್ತದೆ.

ಎಂ.ಚಿದಾನಂದಮೂರ್ತಿಯವರು ಭಾಷಿಕ ಆಯಾಮವು ಬದಲಾಗುವ ಪರಿಯನ್ನು ಗಮನಿಸಿ ಚರ್ಚಿಸಿರುವ ಪದ ವಿಶ್ಲೇಷಣೆಯಲ್ಲಿ 'ಜೇಡರ' ವಿಶೇಷಣವು ಹೇಗೆ ಕನ್ನಡ ಬಸವಪುರಾಣದಲ್ಲಿ 'ದೇಡ' ವಿಶೇಷಣದ ಬದಲಾಗಿ ಬಂದು ಸೇರಿತು ಎಂಬುದು ಸ್ಪಷ್ಟವಾಗುತ್ತದೆ. ಅಲ್ಲಿಗೆ ಬಸವ ಪುರಾಣದ ೫೦ನೇ ಸಂಧಿಯಲ್ಲಿನ ದೇವರದಾಸಿಮಯ್ಯನ ಕಥೆಯಲ್ಲಿ ಬಂದ ಜೇಡರದಾಸಿಮಯ್ಯ ಎಂಬ ವ್ಯಕ್ತಿನಾಮ ಭಾಷಿಕ ವ್ಯತ್ಯಯ ದಿಂದಲೇ ನುಸುಳಿರುವುದು ಸ್ಪಷ್ಟ.

ಇದೆ ನಿಜವಾದಲ್ಲಿ ದೇವರದಾಸಿಮಯ್ಯ ಹಾಗೂ ಜೇಡರ ದಾಸಿಮಯ್ಯ ಇಬ್ಬರೂ ಒಬ್ಬರೇ ಎಂಬ ವಿವಾದ ಎಲ್ಲಿಂದ ಆರಂಭವಾಯಿತೋ ಅಲ್ಲಿಯೇ ಕೊನೆಗೊಂಡಂತಾಗುತ್ತದೆ. ಬಸವಪುರಾಣದ ಈ ಬದಲಾದ ಆಕರವೇ ಮುಂದಿನ ಎಲ್ಲಾ ಕವಿಗಳ ಕಾವ್ಯಗಳಿಗೂ, ಪುರಾಣಗಳಿಗೂ ಮೂಲವಾಗಿರಬಹುದು. ಇಲ್ಲಿಂದಲೇ ಈ ಸಮೀಕರಣ ಸಂಸ್ಕೃತಿ ಉಂಟಾದಂತೆ ತೋರುತ್ತದೆ.

"ತೆಲುಗಿನ 'ದೇಡ್ರ' ವಿಶೇಷಣವು ಭಾಷಿಕವಾಗಿ 'ದೇವರ' ಆಗಲು ಸಾಧ್ಯವಿಲ್ಲ. ಕನ್ನಡ ಬಸವ ಪುರಾಣದಲ್ಲಿ ದಾಸಿಮಯ್ಯನ ವಿಶೇಷಣವು 'ದೇವರ' ಎಂದಾಗಲು ಕಾರಣ ಹೀಗಿರಬಹುದು. ಅವನು ಮೂಲತಃ ನೇಕಾರ ವೃತ್ತಿಯವನಾಗಿದ್ದು, ಅವನನ್ನು ಜನ ಮೊದ ಮೊದಲು "ದೇಡರ ದಾಸಿಮಯ್ಯ ಎಂದು ಕರೆಯುತ್ತಿದ್ದು(ನೇಕಾರ ದಾಸಿಮಯ್ಯ) ಅವನು ವಿದ್ಯಾವಂತನಾಗಿ, ಶಾಸ್ತ್ರಜ್ಞನಾಗಿ, ವೀರಶೈವ ಧಾರ್ಮಿಕ ತತ್ವಗಳನ್ನು ತಿಳಿದವನಾಗಿ ಯಾವುದೋ ದೇವಸ್ಥಾನ ಅಥವಾ ಮಠಕ್ಕೆ ಸೇರಿದ್ದರಿಂದ ಜನರು ಅವನನ್ನು ಗೌರವದಿಂದ ಅಥವಾ ಭಕ್ತಿಯಿಂದ 'ದೇವರ'ಎಂದು ಕರೆಯಲಾರಂಭಿಸಿರಬಹುದು. ಹೀಗೆ ಕರೆದದ್ದು ಅವನ ಸಮಕಾಲೀನರಿರಬಹುದು ಅಥವಾ ಆಮೇಲಿನವರಿರಬಹುದು. ದೇವರದಾಸಿಮಯ್ಯನು ಕರ್ನಾಟಕದವನಾಗಿದ್ದುದರಿಂದ (ಈಗಾಗಲೇ ಮೊದಲಿನ ಚರ್ಚೆಯಲ್ಲಿ ಸ್ಪಷ್ಟಗೊಳಿಸಲಾಗಿದ್ದರಿಂದ ಇದನ್ನು ಒಪ್ಪಲಾಗಿದೆ) ಅವನ ಹೆಸರು ಬದಲಾವಣೆ ಆದದ್ದು ಆಂಧ್ರದ ಪಾಲ್ಕುರಿಕೆ ಸೋಮನಾಥನಿಗೆ ತಿಳಿಯದ ಮಾಹಿತಿಯಾದ್ದರಿಂದ ಅವನ ಮೊದಲ ವಿಶೇಷಣವನ್ನೇ 'ಜೇಡ ಅರ್ಥದ' 'ದೇಡ್ರ'ವನ್ನು ಬಳಸಿರಬಹುದು ಎನ್ನುವುದು ಸಂಶೋಧಕರ ಅಭಿಮತ. ಈ ಊಹೆಯು ಸತ್ಯಕ್ಕೆ ಹೆಚ್ಚು ಹತ್ತಿರವೆನಿಸುತ್ತದೆ."[೧] ಹೀಗೆ ಆತನ ಹೆಸರು ಸಂಸ್ಕೃತಿಕರಣಗೊಂಡಿರಬಹುದಾದ ಸಂದರ್ಭವನ್ನು ಚರ್ಚಿಸಬಹುದಾಗಿದೆ. ಈ ಎಲ್ಲ ಆಧಾರ ಸಹಿತವಾದ ಅಭಿಪ್ರಾಯಗಳನ್ನು ಗಮನಿಸಿದಾಗ ದೇವರದಾಸಿಮಯ್ಯ ಮತ್ತು ಜೇಡರದಾಸಿಮಯ್ಯ ಎಂಬ ಹೆಸರುಗಳು ಸಮೀಕರಣವಾದಿದರ ಒಂದಿ ಚಿತ್ರಣ ದೊರೆಯುತ್ತದೆ.

ಬಸವಪುರಾಣದ ನಂತರ ಕಾವ್ಯಗಳಲ್ಲಿಯೂ ದೇವರದಾಸಿಮಯ್ಯನ ಕಥೆ ಬಂದಿರುವುದು ಅಥವಾ ಉಲ್ಲೇಖಗೊಂಡಿರುವುದನ್ನು ಕಾಣಬಹುದು. ಅವುಗಳಲ್ಲಿ ಮುಖ್ಯವಾಗಿ 'ಶಿವತತ್ವ ಚಿಂತಾಮಣಿ' ಮತ್ತು 'ವೀರಶೈವಾಮೃತ ಪುರಾಣ', 'ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ' ಇತ್ಯಾದಿ. ಶಿವತತ್ವ ಚಿಂತಾಮಣಿ ಲಕ್ಕಣ್ಣದಂಡೇಶನು ಬರೆದ ಕೃತಿಯಾಗಿದ್ದು, ಅದರ ಕಾಲ ಕ್ರಿ.ಶ ೧೪೩೦. ಈ ಕೃತಿಯಲ್ಲಿ ದೇವರದಾಸಿಮಯ್ಯನಿಗೆ ಸಂಬಂಧಿಸಿದ ಪದ್ಯವಿದೆ.

ಮೊಡಚೆಱುವಿನರಸು ದೇಸಿಗ ಬಲ್ಲಾಳಂ ಜೈನ
ಮೃಢ ಭಕ್ತ್ಯಾತನಂಗನೆ ಯಿರಲ್ಕೊಂದು ದಿನಂ।
ನುಡಿದನಾಕೆಗೆ ಜೈನಪುಷ್ಪಮಂ ಕರದಿ ಪಡಿದದ ಲಿಂಗ ಮಾಳುದೆನಲು
ಮಡದಿ ನಿಜಗುರು ದಾಸಿಮಯ್ಯ ಶರಣೆಂದೆನ
ಲ್ಕೊಡನೆ ತೋಱುವ ಚಂದ್ರಕಾಂತ ಲಿಂಗವ ಕಂಡು।
ಕಡುಹರುಷದಿಂದ ಮಱುವುತಿರ್ದ ಸುಗ್ಗಲೆಯ ಚರಣಾಂಬುಜಕ್ಕೆ ಶರಣು[೬೧]

ಇದೇ ಕಾವ್ಯದಲ್ಲಿ ಜೇಡರದಾಸಿಮಯ್ಯನಿಗೆ ಸಂಬಂಧಿಸಿದ ಕತೆಯೂ ಬರುತ್ತದೆ. ಗುಬ್ಬಿ ಮಲ್ಲಣಾರ್ಯನ ವೀರಶೈವಾಮೃತ ಪುರಾಣದಲ್ಲಿಯೂ, ಇದೇ ಸಂದರ್ಭದ ಕಥೆಯಿರುವ ಪದ್ಯವಿದೆ.

ನೂಕಿ ನಿಮ್ಮವರ ವಾದದ ಘಟದೊಳಿರ್ದದ
ವೀರ್ಕರನ ಹೊಟಲಕೆರೆಯೊಳು ಲಿಂಗವೆನಿಸಿತ್ತು
ಕಾಕ ಬಸದಿಗಳನೊಡೆದು ಶರಣೆಂದ ನಿಮ್ಮ ರಕ್ಷಿಸಲೆ ದೇವರ ದಾಸನು।[೬೩]

ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರದಲ್ಲಿ ಶಾಂತಲಿಂಗದೇಶಿಕನು ದೇವರ ದಾಸಿಮಯ್ಯನ ಕುರಿತು ಎರಡು ಕಥಾನಕಗಳನ್ನು ಸಾಂದರ್ಭಿಕವಾಗಿ ನಿರೂಪಿಸಿದ್ದಾನೆ. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ಇದೇ ಕಾವ್ಯದಲ್ಲಿ ಜೇಡರದಾಸಿಮಯ್ಯನ ಕುರಿತೂ ಎರಡು ಕಥೆಗಳಿವೆ. ಇನ್ನು ಶಿವತತ್ವ ಚಿಂತಾಮಣಿಯ ಕಾಲ ಕ್ರಿಶ ೧೪೩೦, ವೀರಶೈವಾಮೃತ ಪುರಾಣದ ಕಾಲ ಸುಮಾರು ಕ್ರಿಶ ೧೫೧೩. ಭೈರವೇಶ್ವರ ಕಾವ್ಯದ ಕಾಲ ೧೬೭೩. ಈ ಕಾವ್ಯಗಳು ಬಸವಪುರಾಣದ ನಂತರ ಬಂದ ಕಾವ್ಯಗಳಾಗಿದ್ದು, ಈ ಕಾವ್ಯಗಳ ಮೇಲೆ ಬಸವಪುರಾಣದ ಪ್ರಭಾವವಿರುವ ಸಾಧ್ಯತೆ ಇದೆಯಾದರೂ ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯನ ಕುರಿತು ಭಿನ್ನತೆಯನ್ನು ಗಮನಿಸಬಹುದು. ಇವುಗಳ ನಂತರದಲ್ಲಿ ಬಂದ ದೇವಾಂಗ ಪುರಾಣಗಳಲ್ಲಿ ಈ ಇಬ್ಬರು ವ್ಯಕ್ತಿಗಳ ಜೀವನದ ಘಟನೆಗಳು ಸಂಪೂರ್ಣ ಸೇರಿಹೋಗಿವೆ ಎಂಬುದಂತು ನಿಜ. ಚೆನ್ನಬಸವಪುರಾಣದಲ್ಲಿ ಈ ಬಗ್ಗೆ ಒಂದು ಪದ್ಯವಿದ್ದು, ಅದೂ ಸಹ ಮೇಲಿನ ಕಥೆಗಳಿಗೆ ಇಂಬು ಕೊಡುತ್ತದೆ. ಈ ಎಲ್ಲಾ ಆಕರಗಳ ಪರಿಶೀಲನೆ ದೇವರದಾಸಿಮಯ್ಯನ ಬಗ್ಗೆ ಬೆಳಕು ಚೆಲ್ಲುತ್ತವೆ ಅಂತೆಯೇ ಆತನ ವ್ಯಕ್ತಿತ್ವದ ಭವ್ಯತೆಗೆ ನಾಂದಿಯಾಗಿವೆಂದರೂ ತಪ್ಪಾಗಲಾರದು.

### ೩.೩. ವಿದ್ವಾಂಸರ ದೃಷ್ಟಿಯಲ್ಲಿ ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ

ಹನ್ನೆರಡನೇ ಶತಮಾನದ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಅಂಶಗಳು ಅಂದಿನ ಸಮಾಜದ ಪರಿಸ್ಥಿತಿಯನ್ನಾಧರಿಸಿ ರೂಪುಪಡೆದಿರುವುದಾಗಿ ಐತಿಹಾಸಿಕ ಘಟನೆಗಳು ತಿಳಿಸುತ್ತವೆ.

ಇಂತಹ ಘಟನೆಗಳು ಚರಿತ್ರೆಯ ನಿರ್ಮಾಣಕ್ಕೆ ಅನುವಾಗಿರುತ್ತವೆ. ಇವುಗಳನ್ನು ಸೂಕ್ತ ಆಕರಗಳ ಪರಿವೀಕ್ಷಿಸುವ ಕ್ರಮದಿಂದ ಪುನಃ ಪುನಃ ಸತ್ಯತೆಯ ಹತ್ತಿರಕ್ಕೆ ಕೊಂಡೊಯ್ಯಲು ಪ್ರಯಾಸಪಡುತ್ತಿರುವುದನ್ನೂ ಕಾಣುತ್ತೇವೆ. ಇದಕ್ಕೆ ಅನ್ವಯವೆಂಬಂತೆ ಎಂ.ಚಿದಾನಂದಮೂರ್ತಿಯವರ ಈ ಮಾತು ಪ್ರಮುಖವಾಗುತ್ತದೆ.

"ಹನ್ನೆರಡನೇ ಶತಮಾನದ ಧಾರ್ಮಿಕ ಪರಿಸ್ಥಿತಿಯನ್ನು ಅವಲೋಕಿಸಿದರೆ ಕರ್ನಾಟಕದಲ್ಲಿ ಜೈನಧರ್ಮದ ಪ್ರಾಬಲ್ಯವು ಎದ್ದು ಕಾಣುವ ಅಂಶ. ಪ್ರಾಚುರ್ಯದಲ್ಲಿ ಜೈನಧರ್ಮದೊಡನೆ ಸ್ಪರ್ಧಿಸುತ್ತಿದ್ದ ಧರ್ಮವೆಂದರೆ ಲಕುಲೀಶ–ಪಾಶುಪತವೆಂಬ ಶೈವ ಶಾಖೆ ಇವುಗಳಲ್ಲದೆ ತನ್ನ ಹಲವಾರು ಶಾಖೆಗಳೊಂದಿಗೆ ವೈದಿಕ ಧರ್ಮವೂ, ಅತ್ಯಲ್ಪ ಸಂಖ್ಯಾತರ ಧರ್ಮವಾಗಿ ಬೌದ್ಧ ಧರ್ಮವೂ ಪ್ರಚಾರದಲ್ಲಿದ್ದವು ಶೈವ ಧರ್ಮದ ಇತರ ಶಾಖೆಗಳ ಅನುಯಾಯಿಗಳಾದ ಕಾಪಾಲಿಕರೂ ಗಣಪತ್ಯರೂ ಶಾಕ್ತಪಂಥದ ಕೌಲರೂ ಅಲ್ಪ ಪ್ರಮಾಣದಲ್ಲಿಯಾದರೂ ಇದ್ದರೆಂಬುದಕ್ಕೆ ಶಾಸನಗಳೂ ಕಾವ್ಯಾಧಾರಗಳು ಇವೆ".[೬೪]

ಇಲ್ಲಿ ಗಮನಿಸಬೇಕಾದುದು ಧರ್ಮಗಳಲ್ಲಿ ಪ್ರಬಲವಾದವು ಜೈನ ಹಾಗೂ ಶೈವ ಶಾಖೆಯಾದ ಲಕುಲೀಶ ಪಾಶುಪತ ಇವುಗಳೊಂದಿಗೆ ವೈದಿಕ ಧರ್ಮಗಳು. ಈ ಮೂರು ಪರಸ್ಪರ ಸ್ಪರ್ಧಿಗಳಾಗಿದ್ದು ಬೌದ್ಧಧರ್ಮವು ಪ್ರಚಾರದಲ್ಲಿತ್ತು. ಒಂದು ಧರ್ಮದ ಧಾರ್ಮಿಕ ನಾಯಕರು, ರಾಜರು, (ರಾಜಧರ್ಮ)ಒಳಗೊಂಡಂತೆ ಆ ಧರ್ಮದ ಪ್ರಮುಖ ಪ್ರವರ್ತಕರು, ಪ್ರಸಾರಕರು ತಮ್ಮ ಧರ್ಮದ ಮೇಲ್ಮೆಗೆ ಸಂಘರ್ಷಿಸುತ್ತಿದ್ದು ಇದೆ. ಇಂತಹ ಸಂಘರ್ಷ ಅಂದಿನ ಸಾಮಾಜಿಕ, ಸಾಂಸ್ಕೃತಿಕ ಸಾಹಿತ್ಯಿಕ ನೆಲೆಗಳ ಮೇಲೆ ಪರಿಣಾಮ ಬೀರಿದೆ.

ಒಟ್ಟಾರೆ ಒಂದು ಕಾಲದ ಧಾರ್ಮಿಕ ನಡೆ ಹಾಗೂ ಬದಲಾವಣೆ(ವೈಪರಿತ್ಯ) ಆ ಕಾಲ ಎಲ್ಲಾ ಸಾಮಾಜಿಕ, ಸಾಂಸ್ಕೃತಿಕ ಅಂಶಗಳ ಮೇಲೆ ನಿರ್ಧಾಕ್ಷಿಣ್ಯ ಪರಿಣಾಮ ಬೀರುತ್ತದೆ ಎನ್ನಲು ಸಂಶಯವಿಲ್ಲ. ಅಂತಹದ್ದೆ ಪರಿಣಾಮವನ್ನು ಹನ್ನೆರಡನೆಯ ಶತಮಾನದಲ್ಲಿ ಅಂದಿನ ಸಮಾಜ ಎದುರುಗೊಂಡಿದೆ. ಜೈನ ಹಾಗೂ ವೈಷ್ಣವ ಧರ್ಮಗಳ ಸಂಕೋಲೆಯಿಂದ ಬಿಡಿಸಿಕೊಳ್ಳುವ ಧ್ಯೇಯ ಸಮಾಜದ್ದಾಗಿತ್ತು. ಶೈವವೇ ಆದರೂ ಅಲ್ಲಿನ ಪದ್ದತಿಗಳಿಗೆ ಒಗ್ಗೂಡುವ ಅನಿವಾರ್ಯತೆಯಿಂದ ತಪ್ಪಿಸಿಕೊಂಡೋ ಅಥವಾ ಮುಂದುವರೆದೋ ನಿರ್ಧಾರಕವಾಗಿ ನಿರೂಪಿಸುವ ಒಂದು ಧರ್ಮದ ಅಗತ್ಯವಿದ್ದಿತು. ಎಲ್ಲಾ ಸ್ಥರಗಳ ಜನರು ಒಂದಾಗುವ ಧೋರಣೆ ಪ್ರಾರಂಭದಲ್ಲಿರಲಿಲ್ಲವಾದರೂ ಅವರ ನೆಚ್ಚಿನ ದೈವನ ಆರಾಧನೆಗೆ ಸಂಕೋಲೆಗಳಿಂದ ಮುಕ್ತಗೊಂಡ ಸಮಾಜದ ನಿಲುವು ಅನಿವಾರ್ಯವಾಗಿತ್ತು. ಅಂತಹ ಧರ್ಮ ಜನಸಾಮಾನ್ಯರು, ಶೂದ್ರ, ಎನ್ನದೇ ಪ್ರತಿಯೊಬ್ಬರು

ಆರಾಧನೆಗೆ ಪಾತ್ರವಾಗಬೇಕಿತ್ತು. ಈ ಬದಲಾವಣೆಯ ಕಾಲವನ್ನು ಶೈವದ ಮುಂದುವರೆದು ವೀರಶೈವ ಧರ್ಮದ ಕಾರ್ಯ ಪ್ರವೃತ್ತಿಯ ಕಾಲವಾಗಿ ಪರಿಗಣಿಸಬಹುದು.

ಪ್ರತಿ ಧರ್ಮದ ಪ್ರಸಾರವೂ ಸಾಹಿತ್ಯದ ಮೂಲಕವೇ ನಡೆಯುತ್ತಿದ್ದು, ಇದಕ್ಕೆ ಮೂಲ ಕಾವ್ಯಗಳು, ಶಾಸನಗಳು, ಪುರಾಣಗಳಾಗಿವೆ. ಜೈನಧರ್ಮ, ಚಂಪೂವನ್ನು ಆಯ್ಕೆ ಮಾಡಿ ಕೊಂಡಂತೆಯೇ, ವಿರಶೈವ ಧರ್ಮ ವಚನಗಳನ್ನು ಆಯ್ಕೆಮಾಡಿಕೊಂಡದ್ದು ವಿಶೇಷ. ವಚನಕಾರರು ತಮ್ಮ ಆಲೋಚನೆಗಳನ್ನು, ಅನುಭವಗಳನ್ನು, ಸಾಮಾಜಿಕ ನಿರ್ಣಯಗಳನ್ನು, ವಚನಗಳ ರೂಪದಲ್ಲಿ ಭಿನ್ನವಿಸಿಕೊಂಡರು. ಈ ಧರ್ಮದ ಧ್ಯೇಯಕ್ಕೆ ಅನುವಾಗುವಂತೆಯೇ ಆಡುಭಾಷೆಯನ್ನು ಬಳಸಿಕೊಂಡು ಬ್ರಹ್ಮಾಂಡವನ್ನೇ ಅವುಗಳಲ್ಲಿ ತಂದರು. ಸಾಮಾನ್ಯ ನಿರೂಪಣೆಗಳಿಂದ ಅಸಮಾನ್ಯವಾದ ಜಗತ್ತಿನ ನಿಯಮಗಳನ್ನು ನಿರೂಪಿಸಿದರು. ಇಂತಹ ರಚನೆಯೊಂದಿಗೆ ಸಾಮಾಜಿಕ ಬದಲಾವಣೆಯ ಕನಸ್ಸು ಕಂಡ ಶರಣರ ಜೀವನ ಮಾತ್ರ ಹಲವು ಗೊಂದಲಗಳಲ್ಲಿ ಸಿಲುಕಿರುವುದನ್ನು ಕಾಣುತ್ತೇವೆ.

ಅನೇಕ ಶಿವಶರಣರ ಹುಟ್ಟು, ಸ್ಥಳ, ತಂದೆ ತಾಯಿ, ಕಾರ್ಯಕ್ಷೇತ್ರ ವೃತ್ತಿ, ಅಂಕಿತ, ಜೀವನ, ವೈಯಕ್ತಿಕ ವಿವರಗಳು ಸಂಪೂರ್ಣವಾಗಿ ತಿಳಿಯದೇ, ಇಂದಿನ ಸಾಹಿತ್ಯವಲಯದ ಪ್ರಶ್ನೆಗಳಾಗಿ ಉಳಿದಿವೆ. ಹೊಸ ಆಕರಗಳ ಬೆಳಕಿನಲ್ಲಿ ಈ ಪ್ರಶ್ನೆಗಳಿಗೆ ಪರಿಹಾರಗಳು ದೊರೆತರೂ ಒಪ್ಪುವ ಮನಸ್ಥಿತಿಯಿಲ್ಲದೇ ಸಾಮಾಜಿಕ ನಿರ್ಣಯವೆಂಬಂತೆ ಮೊದಲಿನದ್ದನ್ನೆ ಎಳೆದಾಡುವ ಸ್ಥಿತಿ ಎದುರಾಗಿದೆ. ಅನೇಕ ವಿದ್ವಾಂಸರು ಈ ಬಗ್ಗೆ ಸಂಶೋಧಿಸಿ ಆಕರಗಳನ್ನು ಸಾಕ್ಷಿಯಾಗಿ ನೀಡುತ್ತಿದ್ದು, ಸಂಪೂರ್ಣತೆಯ ಮಟ್ಟವನ್ನು ತಲುಪದೇ ಇರುವುದೂ ದುರ್ದೈವವೇ ಸರಿ. ಇಂತಹ ಶರಣರ ಸಾಲಿನಲ್ಲಿ ಮೊದಲ ವಚನಕಾರ ಎಂದು ಕರೆಯಿಸಿಕೊಳ್ಳುವ ಜೇಡರ ದಾಸಿಮಯ್ಯನೂ ಒಬ್ಬನಾಗಿದ್ದಾನೆ ಆತನ ಕುರಿತು ವಿದ್ವಾಂಸರುಗಳ ಅಭಿಪ್ರಾಯ ಹಾಗೂ ಸಂಶೋಧನೆಯ ನೆಲೆಗಳನ್ನು ಪುನಃ ಪ್ರಮಾಣಿಸುವ ಅಗತ್ಯತೆ ಪ್ರಸ್ತುತ ದಿನಗಳಲ್ಲಿ ಹೆಚ್ಚಾಗಿದೆ. ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ ಎಂಬ ಹೆಸರುಗಳು ಹೇಗೆ ಕಾಲಾಂತರದಲ್ಲಿ ಸೇರಿಹೋದವೋ ಹಾಗೇ ಅವರ ಬಗೆಗಿನ ವಿದ್ವಾಂಸರು, ಸಂಶೋಧರಕರುಗಳ ಅಭಿಪ್ರಾಯವೂ ಬದಲಾದ ರೀತಿಯನ್ನು ಒಪ್ಪಬೇಕಾಗಿದೆ.

**ಜೇಡರದಾಸಿಮಯ್ಯ ದೇವರದಾಸಿಮಯ್ಯ ಒಂದೇ ಎನ್ನುವವರ ವಾದ**

ಆಧುನಿಕ ಕನ್ನಡ ಸಾಹಿತ್ಯ ಸಂಶೋಧನೆಯ ಪ್ರಾರಂಭದ ಅನೇಕ ವಿದ್ವಾಂಸರು ಈ ಇಬ್ಬರು ವ್ಯಕ್ತಿಗಳು ಬೇರೆ ಬೇರೆ ಇರಬಹುದು ಎಂಬ ಸಂದೇಹವನ್ನು ವ್ಯಕ್ತಪಡಿಸಿದ್ದರೂ ಆಧಾರಗಳನ್ನು ಒದಗಿಸುವಲ್ಲಿ ಸೋತು ನಂತರ ಒಂದೇ ಎಂಬ ತೀರ್ಮಾನವನ್ನು ನೀಡುತ್ತಾರೆ. ಅವರುಗಳು ನೀಡುವ ಆಧಾರಗಳು ಹೀಗಿವೆ.

- ಕಾಲವಿಚಾರವನ್ನು ಗಣನೆಗೆ ತೆಗೆದುಕೊಂಡು, ದಾಸಿಮಯ್ಯನ ಕಾಲ ಕ್ರಿಶ ೧೦೪೦ ಎಂದು ಹೇಳಿ, ಈತ ದೀರ್ಘಕಾಲ ಬಾಳಿದವನು. ಸುಮಾರು ೧೦೦-೧೨೦ ವರುಷ ವಾಸವಿದ್ದಿರಬೇಕು-ಹಾಗಾಗಿ ಸುಗ್ಗಲೆಯ ಗುರುವೂ, ದುಗ್ಗಳೆಯ ಗಂಡನೂ ಆಗಿ ತನ್ನ ಪಾತ್ರವನ್ನು ನಿರ್ವಹಿಸಿದಾತ ಎನ್ನುವ ವಾದವನ್ನು ಮಂಡಿಸುತ್ತಾರೆ.

- ಆತನ ಹೆಸರಿನ ಬಗೆಗಿನ ಚರ್ಚೆಯನ್ನು ಮುಂದಿಡುತ್ತಾ, ದಾಸಿಮಯ್ಯ, ದಾಸಯ್ಯ, ದಾಸಿದೇವ, ದೇವದಾಸ, ಜೇಡರ ದಾಸಯ್ಯ ದೇವರ ದಾಸಿಮಯ್ಯ, ದೇವದಾಸಮಯ್ಯ ದಾಸಮಾರ್ಯ, ಜೇಡರ ದಾಸಿಮಯ್ಯ ಎಲ್ಲ ಹೆಸರುಗಳು ಒಬ್ಬನೇ ವ್ಯಕ್ತಿಯನ್ನು ಪ್ರತಿನಿಧಿಸುತ್ತವೆ. ಈ ಹೆಸರುಗಳನ್ನಾಧರಿಸಿ ಹಲವು ಆಧಾರಗಳನ್ನು ಮತ್ತು ಅದಕ್ಕೆ ಸಂಬಂಧಿಸಿದ ವಾದಗಳನ್ನು ಇಲ್ಲಿ ನೋಡಬಹುದು.

  ಅ. ಬಸವಣ್ಣನ ವಚನಗಳಲ್ಲಿಯೂ ಜೇಡರದಾಸಿಮಯ್ಯ ಎಂಬ ಹೆಸರು ಹಲವೆಡೆ ಬಂದಿಲ್ಲ. ದಾಸಿಮಯ್ಯ ಎಂದೇ ಆತ ದಾಖಲಿಸುತ್ತಾನೆ. ಅಂತೆಯೇ ಇತರ ಶರಣರು ಸಹ ದಾಸಿದೇವ, ದಾಸಿಮಯ್ಯ ಎಂದೇ ಕರೆದಿದ್ದಾರೆ. ಅಲ್ಲಿಯೂ 'ಜೇಡರ', 'ದೇವರ' ಎಂಬ ವಿಶೇಷಣಗಳ ವ್ಯತ್ಯಯವಿಲ್ಲ ಎಂಬ ವಾದವಿದೆ.

  ಆ. ಜೇಡರದಾಸಿಮಯ್ಯನೇ, ದೇವರದಾಸಿಮಯ್ಯ ಎಂದು ಕರೆಸಿಕೊಂಡ ಎಂಬುದು ಆತನ ಹೆಸರಿನ ಬಗೆಗಿನ ಮತ್ತೊಂದು ವಾದ. ಜೇಡರ ಎಂಬ ವೃತ್ತಿ ವಾಚಕ ವಿಶೇಷಣವೇ ಮುಂದೆ ಆತನ ಸಾಧನೆಯ ಫಲದಿಂದ ದೇವರ ಎಂದಾಗಿದೆ. ಜೇಡರದಾಸಿಮಯ್ಯನು ತವನಿಧಿಯನ್ನು ಶಿವನಿಂದ ಪಡೆದ ನಂತರ ದೇವರದಾಸಿಮಯ್ಯನಾದ ಎಂಬ ಗ್ರಹಿಕೆಯನ್ನು ಈ ಪಂಥಿಯ ವಿದ್ವಾಂಸರುಗಳು ನೀಡುತ್ತಾರೆ. ಜೇಡರ ದಾಸಿಮಯ್ಯ, ದೇವರ ದಾಸಿಮಯ್ಯನಾದಾಗ ಸುಗ್ಗಲೆಯ ಗುರುವಾದ, ಪರ ಸಮಯ ಭಂಜಕನಾದ, ಘಟಸರ್ಪ ಪವಾಡ ಮೆರೆದ, ಜೈನರನ್ನು ಶೈವರನ್ನಾಗಿಸಿದ ಎಂದೂ ಸಾಧಿಸಿದ್ದಾರೆ.

- ಶಾಸನಗಳ ಆಧಾರ : ಜೇಡರದಾಸಿಮಯ್ಯನ ಹೆಸರು ನಮೂದಿತವಾಗಿರುವ ಎಲ್ಲ ಶಾಸನಗಳು ಕ್ರಿಶ ೧೧೪೮ರ ಗೊಬ್ಬೂರಿನ ಶಾಸನದ ನಂತರದವು. ಆದ್ದರಿಂದ ಇವುಗಳ ಮೇಲೆ ಜೇಡರ ಎಂಬ ಹೆಸರಿನ ಪ್ರಭಾವವಿರುವ ಕಾರಣ ಜೇಡ, ಜಾಡ, ಜೇಡರದಾಸಿ ಎಂಬ ಹೆಸರುಗಳು ದಾಖಲಾಗಿವೆ ಎನ್ನಲಾಗುತ್ತಾರೆ. ಈ ಇಬ್ಬರೂ ಒಂದೇ ಎಂಬುವುದಕ್ಕೆ ಬಸವ ಪುರಾಣ ಮತ್ತು ವೃಷಬೇಂದ್ರ ವಿಜಯದ ಉದಾಹರಣೆ ನೀಡುತ್ತಾರೆ. ಜೇಡರ ದಾಸಿಮಯ್ಯನೂ ದೇವರದಾಸಿಮಯ್ಯನೂ ಒಬ್ಬನೇ ಎಂಬ ನಂಬುಗೆ ಬಸವ ಪುರಾಣದ ಕಾಲದಲ್ಲಿಯೂ ಇದ್ದಿರಬೇಕು. ಏಕೆಂದರೆ ಶಿವನಿಂದ ತವನಿಧಿಯನ್ನು ದೊರಕಿಸಿಕೊಂಡು

ಬಹುಧಾನ್ಯಗಳನ್ನು ಸಂಗ್ರಹಿಸಿದ್ದಾತನು. ಆತ ಏವ ಬಹುಧಾನ್ಯ ಕೋಶ ಪಾಲಕನಾಗಿದ್ದವನು. ಜೇಡರ ದಾಸಿಮಯ್ಯನೆಂದು ಹರಿಹರನ ರಗಳೆಯಲ್ಲಿ ಕಂಡಿರುವುದರಿಂದ ಬಸವ ಪುರಾಣದ (೯.೩೩) 'ದೇವರ ದಾಸಿ ಬಹುಧಾನ್ಯಂಗಳಂ ಸಂಗ್ರಹಿಸಿ ನಡೆದನು' ಎಂಬಲ್ಲಿ ಆ ತವನಿಧಿಯ ವರವನ್ನು ದೇವರದಾಸಿಮಯ್ಯನಿಗೆ ತಗುಲಿಸಿರುವುದನ್ನು ಪರಿಭಾವಿಸಿ ದೇವರ ದಾಸಿಮಯ್ಯನೂ ದೇವರದಾಸಿಮಯ್ಯನೂ ಇಬ್ಬರಲ್ಲಿ ಒಬ್ಬನೇ ಎಂಬ ನಂಬುಗೆ ಬಸವ ಪುರಾಣ ರಚಿಸಲ್ಪಡುವಚಿದೂ (ಕ್ರಿ.ಶ ೧೩೬೮) ಇದ್ದಿರಬೇಕೆಂದು ತಿಳಿಯುತ್ತದೆ. ವೃಷಬೇಂದ್ರ ವಿಜಯದಲ್ಲಾದರೆ(೬.೩೯) 'ಪ್ರಿಯ ದೇವರ ದಾಸಿಯುಂ । ನಿಯತಂ ಬಹುಧಾನ್ಯ ಕೋಶ ಪಾಲಕನಲೆ, ಎಂದಿರುವಲ್ಲಿ ಆ ನಂಬುಗೆಯು ಬಸವ ಪುರಾಣದಿಂದಲೆ ಪ್ರಾಯಶಃ ಮಾರ್ದನಿಸಿರಬೇಕು ಎಂದು ಗೋವಿಂದ ಪೈ ಹೇಳುತ್ತಾರೆ. ಇಲ್ಲಿ ದಾಖಲಿಸಿದಂತಹ ವಿಷಯವನ್ನು ಇಟ್ಟುಕೊಂಡು ಜೇಡರ ಹಾಗೂ ದೇವರ ವಿಶೇಷಣದ ದಾಸಿಮಯ್ಯರು ಒಂದೇ ಎನ್ನಲಾಗುತ್ತದೆ.

- ಎಲ್. ಬಸವರಾಜು ಅವರು ನಾಲ್ಕು ಹಂತಗಳನ್ನು ಗುರುತಿಸುತ್ತಾರೆ. ನಾಲ್ಕು ತಲೆಮಾರುಗಳನ್ನು ಗುರುತಿಸಿ, ಈವರಿಗೆ ದಾಸಿಮಯ್ಯರ ಬಗ್ಗೆ ಬಂದ ಕೃತಿಗಳು ಹಾಗೂ ಕೃತಿಕಾರರನ್ನು ಒಂದೊಂದು ಹಂತದಲ್ಲಿ ತಂದು ಕಾಲ ಮತ್ತು ರಚನೆಯ ಆಧಾರವಾಗಿ ವಿಂಗಡಿಸಿದ್ದಾರೆ. ಇಲ್ಲಿ ದೇವರ ದಾಸಿಮಯ್ಯ ಮತ್ತು ಜೇಡರ ದಾಸಿಮಯ್ಯ ಪ್ರಮುಖವಾಗಿರದೆ, ಆತನ ಚರಿತ್ರೆ , ಆತನ ಪವಾಡಗಳು ಮೊದಲಾದ ವಿಷಯಗಳನ್ನು ಅಧ್ಯಯನ ಮಾಡುವುದು ಹಾಗೂ ಆ ಬಗ್ಗೆ ಸಿಂಹಾವಲೋಕನದ ಅಧ್ಯಯನ ಕ್ರಮ ಪ್ರಮುಖ ಎಂದೇ ಹೇಳುತ್ತಾರೆ.

ಅವರೇ ಹೇಳುವಂತೆ "ಪ್ರಸ್ತುತ ದೇವರದಾಸಿಮಯ್ಯನನ್ನು ಬಸವಣ್ಣನವರ ವಚನಗಳಲ್ಲಿ ಜೇಡರದಾಸಿಮಯ್ಯ, ದಾಸಯ್ಯ, ದಾಸಿಮಯ್ಯ, ದಾಸಿದೇವ ಎಂದೂ ಬಸವಣ್ಣನವರ ಕಿರಿಯ ಸಮಕಾಲೀನನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯನು ತನ್ನ 'ಶಿವತತ್ವಸಾರದಲ್ಲಿ' 'ದೇವರದಾಸಯ' ಎಂದೂ; ಪಾಲ್ಕುರಿಕೆ ಸೋಮನಾಥನು ಗಣ ಸಹಸ್ರ ಇವನು ಮುದನೂರಿನವನಾದುದರಿಂದ ಇವನನ್ನು "ಮುದನೂರು ದಾಸಯ್ಯ" ಎಂದೂ; ಆಮೇಲಿನವರು ಕೆಲವರು ಹೀಗೆ ಕರೆದಿರುವರು. ಹತ್ತೊಂಬತ್ತನೇ ಶತಮಾನದ (ನಾಲ್ಕನೆಯ ಘಟ್ಟದ) ಗ್ರಂಥಗಳಲ್ಲಿಯಾದರೋ ದೇವದಾಸ ಅಥವಾ ದೇವರದಾಸಿಮಯ್ಯ ಎಂದಿದೆ. ಹಿಂದಿನಂತೆ ಜೇಡರದಾಸಿಮಯ್ಯನೆಂದರೆ ನೆಯ್ಗೆಯ ದಾಸಿಮಯ್ಯ ಇತ್ತೀಚಿನಂತೆ ದೇವರದಾಸಿಮಯ್ಯನೆಂದರೆ ದೇವರಿಗೆ ದಾಸನಾದವನು ಎಂದು ದೇವರೆಂದರೆ ಶಿವನಾಗಬಹುದು. ಅಥವಾ ಆ ಶಿವನಿಗೆ ಭಕ್ತರಾದುದರಿಂದ ಪೂಜ್ಯರಾದುದರಿಂದ ಪೂಜ್ಯರಾದ

ಶಿವಶರಣರು ಎಂದೂ ಆಗಬಹುದು"[೬೫] ಎಂದು ಹೇಳುತ್ತಾ, ಆ ಇಬ್ಬರು ಒಂದೇ ಎಂಬ ವಾದವನ್ನು ಮಂಡಿಸುತ್ತಾರೆ.

- ತ.ಸು. ಶಾಮರಾಯರು 'ದೇವರದಾಸಿಮಯ್ಯ' ಎಂಬ ಹೆಸರನ್ನೇ ತೆಗೆದುಕೊಂಡು, ಇವನು 'ದೇವಗಣೇಶ್ವರನೇ ಮುದನೂರು ಗ್ರಾಮದಲ್ಲಿದ್ದ ಕಾಮಯ್ಯ-ಶಂಕರಿಯೆಂಬ ಶರಣರ ಮಗನಾಗಿ ಜನಿಸಿದನು' ಎಂದೇ ದಾಖಲಿಸುತ್ತಾರೆ. 'ದೇವರ' ವಿಶೇಷಣ ದಾಸಿದೇವ ಎಂಬ ಹೆಸರಿಗೆ ಬಂದು ಸೇರಿ, ದಾಸಿದೇವನೇ ದೇವರದಾಸ, ದೇವದಾಸ ಎಂದಾಗಿರಬೇಕು. 'ಜೇಡರ' ಮತ್ತು 'ದೇವರ' ಈ ಎರಡು ವಿಶೇಷಣಗಳು ದಾಸಿಮಯ್ಯ ಎಂಬ ಹೆಸರಿಗೆ ಬಂದು ಸೇರಿರಬೇಕು. ಪೂರ್ವದಾಖಲೆಗಳಲ್ಲೆಲ್ಲಿಯೂ ಜೇಡರದಾಸಿಮಯ್ಯನೆಂತಲೋ, ದೇವರ ದಾಸಿಮಯ್ಯನೆಂತಲೋ ಎಂದಿಲ್ಲ. ಅಲ್ಲಿರುವುದು 'ದಾಸಿಮಯ್ಯ' ಮಾತ್ರ ಅದಕ್ಕೆ ವಿಶೇಷಣಗಳು ಸೇರಿ ಪೂರ್ವವಾದ ಹೆಸರು ರೂಪುಗೊಂಡಿದೆ.

ಇಲ್ಲಿ ವೃತ್ತಿಯನ್ನಾಧಾರವಾಗಿರಿಸಿ ಕೊಂಡು ದಾಸಿಮಯ್ಯ ಹೆಸರಿಗೆ 'ಜೇಡರ' ಸೇರಿ ಜೇಡರದಾಸಿಮಯ್ಯ ನೆಂದಾಯಿತು. ಹಾಗೆ ಇತರ ವಚನಕಾರರನ್ನು ಸಂಬೋಧಿಸುವಂತೆ ಬಸವರಾಜ ದೇವರು, ಪ್ರಭುದೇವರು, ಮಡಿವಾಳ ಮಾಚಿದೇವರು ಎಂಬಂತೆಯೇ 'ದೇವರು' ವಿಶೇಷಣ ಪೂರ್ವಕ್ಕೆ ಬಂದು ಷಷ್ಠಿ ವಿಭಕ್ತಿ ಪ್ರತ್ಯಯ ಹೆಸರಿನಲ್ಲಿ ಸೇರಿ 'ದೇವರು +ಅ= ದೇವರ" ಎಂದಾಗುತ್ತದೆ. ಆಗ ದಾಸಿದೇವ>ದಾಸಿದೇವರು ಆಗಿ ಅದೇ ದೇವರ ದಾಸಿ, ದೇವರ ದಾಸಿಮಯ್ಯ ಎಂದಾಗಿರುವ ಸಾಧ್ಯತೆ ಇದೆ ಎನ್ನಲಾಗುತ್ತದೆ. ಹೀಗೆ ಹಲವು ವಿದ್ವಾಂಸರು ಅವರರವರ ಸಂಶೋಧನ ಫಲಿತಗಳನ್ನು ನೀಡುತ್ತಾ ಸಾಹಿತ್ಯ ವಲಯದಲ್ಲಿ ಈ ಇಬ್ಬರು ಒಂದೇ ಎಂಬ ವಾದಗಳನ್ನು ಮಂಡಿಸುತ್ತಾರೆ.

**ದೇವರದಾಸಿಮಯ್ಯ–ಜೇಡರದಾಸಿಮಯ್ಯ ಇಬ್ಬರು ಬೇರೆ ಬೇರೆ ಎಂಬುವವರ ವಾದ**

- ದೇವರ ದಾಸಿಮಯ್ಯ–ಜೇಡರ ದಾಸಿಮಯ್ಯ ಇಬ್ಬರು ಬೇರೆ ಬೇರೆ ಎನ್ನುವವರು ಶಾಸನ ಹಾಗೂ ವಚನಗಳನ್ನು ಆಧಾರವಾಗಿ ತೆಗೆದುಕೊಂಡು ಜೇಡರದಾಸಿಮಯ್ಯನ ಉಲ್ಲೇಖಗಳನ್ನು ತೋರಿಸುತ್ತಾರೆ. ಬಸವಣ್ಣ ವಚನಗಳಲ್ಲಿ ಜೇಡರದಾಸಿಮಯ್ಯನ ಉಲ್ಲೇಖವಿರುವುದನ್ನು ದಾಖಲೆಯಾಗಿ ನೀಡಿ ಆ ಇಬ್ಬರೂ ವ್ಯಕ್ತಿಗಳು ಬೇರೆ ಬೇರೆ ಎಂದು ಹೇಳುವರು. ಹಾಗೆಯೇ ಬಸವಪುರಾಣ ಮೊದಲಾದ ಕಾವ್ಯಗಳಲ್ಲಿ ದೇವರದಾಸಿಮಯ್ಯ(ಪೊಟ್ಲಚೆರು) ಹಾಗೂ ಜೇಡರದಾಸಿಮಯ್ಯ(ಮುದನೂರು) ಇಬ್ಬರ ಕಥೆಗಳು ಬಂದಿರುವುದನ್ನು ಆಧರಿಸಿ ಆ ಇಬ್ಬರು ಬೇರೆ ಬೇರೆ ವ್ಯಕ್ತಿಗಳೆಂದು ಸಾದರಪಡಿಸುತ್ತಾರೆ.

- ತವನಿಧಿಯ ಪವಾಡದ ಜೇಡರದಾಸಿಮಯ್ಯನೇ ಬೇರೆ. ಆತ ಮುದನೂರಿನಾತ. ಸುಗ್ಗಲೆಗೆ ಅನುಗ್ರಹಿಸಿ ಜೈನರನ್ನು ವಾದದಲ್ಲಿ ಸೋಲಿಸಿ ಉತ್ತರೇಶ್ವರಲಿಂಗ ಸ್ಥಾಪಿಸಿದ ದೇವರ ದಾಸಿಮಯ್ಯನೇ ಬೇರೆ. ಈತ ಯಾರೋ ಇದುವರೆಗೆ ತಿಳಿದು ಬಂದಿಲ್ಲ; ಈತನ ಊರು ದೇಶ ಕಾಲಗಳ ಮೇಲೆ ಬೆಳಕು ಚೆಲ್ಲುವ ಯಾವ ಆಧಾರಗಳೂ ದೊರಕಿಲ್ಲ. ಜೇಡರ ದಾಸಿಮಯ್ಯ ಮತ್ತು ದೇವರ ದಾಸಿಮಯ್ಯ ಇವರಿಬ್ಬರ ಇಷ್ಟದೇವರು ರಾಮನಾಥನೇ ಆದ ಕಾರಣ ಇವರಿಬ್ಬರು ಒಂದೇ ಎಂದು ನಂಬಲು ಕಾರಣವಾಗಿರಬೇಕು. ಯಾವ ವಚನಗಳ ಕಟ್ಟುಗಳಲ್ಲಿಯೂ ದೇವರದಾಸಿಮಯ್ಯ ಎಂಬ ಹೆಸರು ಬರುವುದಿಲ್ಲ; ಜೇಡರದಾಸಿಮಯ್ಯ ಇಲ್ಲವೇ ದಾಸಿಮಯ್ಯ ಎಂದು ಇರುತ್ತದೆ ಎಂಬ ಎಚ್.ದೇವೀರಪ್ಪ ಅವರ ಗ್ರಹಿಕೆಯನ್ನು ಈ ಪಂಥದ ವಿದ್ವಾಂಸರು ಒಪ್ಪುತ್ತಾರೆ. ಹೀಗೆ ತವನಿಧಿಯ ದಾಸಿಮಯ್ಯ ಹಾಗೂ ಉತ್ತರೇಶ್ವರ ಲಿಂಗದ ದಾಸಿಮಯ್ಯ ಇಬ್ಬರು ಬೇರೆ ಬೇರೆ ಎನ್ನುವುದನ್ನು ಸ್ಪಷ್ಟವಾಗಿ ವಿವರಿಸಲಾಗುತ್ತದೆ. ಹರಿಹರನ ಕಾವ್ಯಗಳಲ್ಲಿ ದೇವರದಾಸಿಮಯ್ಯನ ಉಲ್ಲೇಖವಿಲ್ಲ ಅಂತಹದ್ದು, ಈತ ಮೊದಲ ಬಾರಿಗೆ ಕಂಡು ಬರುವುದು ಬಸವಪುರಾಣದಲ್ಲಿ, ಈ ಇಬ್ಬರು ಬೇರೆ ಬೇರೆ ಎಂಬುದನ್ನು ತಿಳಿಯುವುದಕ್ಕೆ ಆಧಾರಗಳೂ ಬಸವಪುರಾಣ ದಲ್ಲಿಯೇ ದೊರೆಯುವುದಾಗಿ ತಿಳಿಸಿ ಅಲ್ಲಿನ ಇಬ್ಬರು ಶರಣರ ಕಥೆಗಳನ್ನು ಆಧಾರವಾಗಿ ನೀಡಲಾಗುತ್ತದೆ.

- ಜೇಡರದಾಸಿಮಯ್ಯನ ಸಮಕಾಲೀನರೆನ್ನಲಾದ ಎಲ್ಲರ ಕಾಲವನ್ನು ಗಣನೆಗೆ ತೆಗೆದು ಕೊಂಡು ಮಾದರ ಚೆನ್ನಯ್ಯ- ಸು.೧೧೩೦, ಡೋಹರ ಕಕ್ಕಯ್ಯ-ಕೊಂಡಗುಳಿ ಕೇಶಿರಾಜ -ಸು.೧೧೩೦, ಮರೆಮಿಂಡದೇವ ಮತ್ತು ಶಂಕರದಾಸಿಮಯ್ಯ ಸು.೧೧೪೦, ಜೇಡರದಾಸಿಮಯ್ಯ ಸು.೧೧೪೦ ಎಂದು ಈ ಕಾಲದ ಆಧಾರದ ಮೇಲೆ ದೇವರದಾಸಿಮಯ್ಯನ ಕಾಲ ಕ್ರಿಶ ೧೦೪೦ ಎಂದೂ ಜೇಡರದಾಸಿಮಯ್ಯನ ಕಾಲ ಕ್ರಿಶ ೧೧೪೦ ಎಂದು ಗುರುತಿಸಿ ಕಾಲ ನಿರ್ಣಯವನ್ನು ನೀಡಲಾಗುತ್ತದೆ.

- ಎಂ. ಚಿದಾನಂದಮೂರ್ತಿಯವರು ಹೇಳುವಂತೆ ಪಾಲ್ಕುರಿಕೆ ಸೋಮನಾಥನ ಪೊಟ್ಟಲಕೆರೆಯ ಕಥೆಯಲ್ಲಿ 'ದೇಡರ ದಾಸಯ್ಯ ವರದಿ ಯಾನೂನ ಸದ್ಭಕ್ತಿ ಮಾನಸಗಾನ ತಮಗುರು ಸ್ವಾಮುಸೌ ದಾಸಿದೇನಕು' ಎಂದಿದೆ. ಅದೇ ಕನ್ನಡ ಅನುವಾದದಲ್ಲಿ 'ಸುಗ್ಗಲ ದೇವಿ ದೇವರ ದಾಸಿಮಯ್ಯಗಳ ಘನ ದಯಾಮೃತ ಕರತಲೋದರ ಜನಿತೆಯೊಗಿಯು ತನ್ನ ಸದ್ಗುರು ವೆನಿಪ ದಾಸಯ್ಯಾಂಗಳ' ಎಂದು ಉಲ್ಲೇಖಗೊಂಡಿದೆ. ಇಲ್ಲಿ ಗಮನಿಸಬೇಕಾದುದು

'ದೇಡರ', 'ದೇವರ' ವಿಶೇಷಣಗಳನ್ನು, ದೇವರ ಹಾಗೂ ಜೇಡರ ವಿಶೇಷಣಗಳ ಹಲವು ಸಾಧ್ಯತೆಗಳನ್ನು ನೀಡುತ್ತಾರೆ.

೧ ಜೇಡ>ದೇಡ ಆಗುವಂತೆ, ಜೇಡರ > ದೇಡರ ಆಗಬಹುದಾದರೆ ಜೇಡರದಾಸಿಮಯ್ಯ ನೆಂದೇ ಕರೆಯುವ ಬದಲು ಈ ದೇವರದಾಸಿಮಯ್ಯ ಎಂಬ ಹೆಸರು ಹೇಗೆ ಬಂದಿತು ಎಂಬ ಪ್ರಶ್ನೆಯನ್ನು ಎತ್ತಿದ್ದಾರೆ. ೨ 'ದೇವಾರ'-ನೇಕಾರರನ್ನು ದೇವಾರ ಎಂದು ಕರೆಯುವುದುಂಟು. ಹಾಗೇ 'ದೇವನೂರು' , 'ದೇವಪುರ' (ದಾಸಿಮಯ್ಯನ ಊರು)ದಿಂದ 'ದೇವರ' ವಿಶೇಷಣ ಬಂದಿರ ಬಹುದಾದ ಸಾಧ್ಯತೆಗಳು ಇವೆ.

೧ ದೇವರ ವಿಶೇಷಣವು ನೇಕಾರ ಎನ್ನುವ ಉದ್ದೇಶದಿಂದ ದೇವಾರ ಆಗಿ, ದೇವರ ಆಗಿರಬಹುದು.

೨ ದೇವನೂರು >ದೇವೂರು>ದೇವೂರು>ದೇವರ ಆಗಿರುವ ಸಾಧ್ಯತೆಯೂ ಇದೆ.

- ಬಸವ ಪುರಾಣದಲ್ಲಿ ಪೊಟ್ಟಲಕೆರೆಯ ದೇವರದಾಸಿಮಯ್ಯನ ಪರ್ಯಾಯನಾಮವಾಗಿ ಜೇಡರದಾಸಿಮಯ್ಯ ಎಂದು ಬಳಸಲಾಗಿದೆ. 'ಜೇಡರದಾಸಿಮಯ್ಯ' ಎಂಬುದು ಹಸ್ತ ಪ್ರತಿಕಾರರ ದೋಷ ಅಲ್ಲ. ತೆಲುಗು ಬಸವ ಪುರಾಣದಲ್ಲಿ ದೇವರ ದಾಸಿಮಯ್ಯನನ್ನು 'ದೇಡರ ದಾಸಯ್ಯ' ಎಂದು ಹೆಸರಿಸಿದ್ದಿರಬಹುದು ಎಂದು ಊಹಿಸಿ ಹೀಗೆ ವಿವರಿಸಲಾಗಿದೆ.

  ೧. ತೆಲುಗಿನಲ್ಲಿ ಜೇಂದ್ರ, ದೇಂದ್ರ, ಎಂದು ನೇಕಾರ ವರ್ಗವನ್ನು ಸೂಚಿಸಲಾಗಿದೆ.
  ೨. ತಮಿಳಿನಲ್ಲಿ ಜೇಂಡಿವರ್ ಅಥವಾ ಜೇಂಡಿರವರ್.
  ೩. ಕನ್ನಡದಲ್ಲಿ ಜೌಡ, ಜೇಡ.
  ೪. ತುಳು ಜಾಡೆ, ಜಾಡ್ಯೆ.

  ಈ ಎಲ್ಲಕ್ಕೂ ನೇಕಾರರು ಎಂದೇ ಅರ್ಥ. ಬಸವ ಪುರಾಣದಲ್ಲಿಯೂ ಬರುವ 'ದೇಡರ' ಪದ ನೇಕಾರ ವೃತ್ತಿಗೆ ಸಂಬಂಧಿಸಿರುವುದು ಎಂದು ಹೇಳಲಾಗುತ್ತದೆ. ಮುಂದುವರೆದು ಈ 'ದೇಡ್ರ' ಅಥವಾ 'ದೇಡರ' ರೂಪವು ಭೀಮಕವಿಯಲ್ಲಿ 'ದೇವರ' ಆಗಿರಬಹುದು ಎಂಬ ಹಲವು ಆಯಾಮಗಳ ಚರ್ಚೆಗಳು ಈ ಬಗ್ಗೆ ನಡೆದಿದೆ.

- ಜೇಡರದಾಸಿಮಯ್ಯನ ವಚನಗಳನ್ನು ಗಮನಿಸಿದಾಗ ಆತ ಬಡತನದಿಂದ ಬೆಳೆದವನು ಎಂದು ತಿಳಿಯುತ್ತದೆ. ಬಸವಣ್ಣನು ಈತನಿಂದ ಪ್ರಭಾವಿಯಾಗಿದ್ದುದು, ಅಷ್ಟೆ ಅಲ್ಲದೆ ಬಸವಣ್ಣ, ಪ್ರಭುದೇವ, ಸಿದ್ಧರಾಮ, ಚೆನ್ನ ಬಸವಣ್ಣ ಮೊದಲಾದವನ್ನು ದುಗ್ಗಳೆಯ

ವಚನಗಳು ದಾಖಲಿಸುತ್ತವೆ. ಈ ಎಲ್ಲಾ ಆಧಾರಗಳನ್ನಿಟ್ಟುಕೊಂಡು ಜೇಡರದಾಸಿಮಯ್ಯ ಬಸವಣ್ಣ ಮೊದಲಾದವರ ಹಿರಿಯ ಸಮಕಾಲೀನನೂ, ದೇವರದಾಸಿಮಯ್ಯ ಈ ಎಲ್ಲರಿಗಿಂತಲೂ ಸುಮಾರು ನೂರು ವರ್ಷಗಳ ಕಾಲ ಹಿರಿಯನು ಎಂಬೆಲ್ಲ ವಾದಗಳನ್ನು ಮುಂದಿಡುತ್ತಾ ಈ ಇಬ್ಬರು ಬೇರೆ ಬೇರೆ ಎಂದೇ ಹೇಳಲಾಗುತ್ತದೆ.

- ಜೇಡರದಾಸಿಮಯ್ಯನು ಪೊಟ್ಟಲಕೆರೆಯಲ್ಲಿ ತನ್ನ ಪ್ರಬುದ್ಧ ಜ್ಞಾನದಿಂದ ಜೈನರನ್ನೆಲ್ಲರನ್ನೂ ಸೋಲಿಸಿ ಅವರನ್ನು ಶೈವರನ್ನಾಗಿಸಿ, ಶಿವಮಹಿಮೆಯನ್ನೂ , ಗರ್ವಭಂಗವನ್ನೂ ಮಾಡಿದಾತ ಮತ್ತೆ ಶಂಕರ ದಾಸಿಮಯ್ಯನಿಂದ ಗರ್ಭ ಭಂಗ ಮಾಡಿಸಿಕೊಳ್ಳಲು ಸಾಧ್ಯವಿಲ್ಲ. ಆ ಹೊತ್ತಿಗೆ ದಾಸಿಮಯ್ಯನ ತಾಳ್ಮೆ ಹಾಗೂ ಜ್ಞಾನದ ಪರಿಧಿ ವಿಸ್ತಾರವಾಗಿರುತ್ತದೆ. ಹೀಗಿರುವಾಗ ಗರ್ವಭಂಗ ಮಾಡಿಸಿ ಕೊಂಡಾತ ದೇವರದಾಸಿಮಯ್ಯನಾಗಿರದೆ, ಜೇಡರದಾಸಿಮಯ್ಯನೇ ಆಗಿರಬೇಕು ಎಂದು ಸಾದರಪಡಿಸುತ್ತಾರೆ.

ಹೀಗೆ ಹಲವು ಸಂಶೋಧಕರು ಅವರವರ ಅಭಿಪ್ರಾಯಗಳನ್ನು ಇಲ್ಲಿ ತಿಳಿಸಿದ್ದಾರೆ. ಈ ಎಲ್ಲ ವಾದಗಳು ಸಾಹಿತ್ಯ ವಲಯದಲ್ಲಿ ಹೆಚ್ಚು ಪ್ರಭಾವವನ್ನು ಉಂಟುಮಾಡಿದ್ದವೆಂದರೂ ತಪ್ಪಿಲ್ಲ. ಇನ್ನು ಮೂರನೇ ಪಂಥದ ಸಂಶೋಧಕರು ಹೆಸರಿನ ಮೊದಲು 'ಜೇಡರ' ಎಂದಿರಲಿ, 'ದೇವರ' ಎಂದಿರಲಿ, ಇಲ್ಲಿ ಪ್ರಮುಖವಾಗುವುದು 'ದಾಸಿಮಯ್ಯ' ಎಂಬ ಹೆಸರು ಮಾತ್ರ ಎನ್ನುವುದು ಇವರ ಅಭಿಮತ. ಹೀಗೆ ಈ ಇಬ್ಬರ ಕುರಿತಾಗಿ ಹಲವಾರು ಚರ್ಚೆಗಳು, ವಾದ–ವಿವಾದಗಳು ನಡೆದಿರುವುದಂತು ನಿಜ. ಹಾಗೇ ಅಧ್ಯಯನದ ದೃಷ್ಟಿಯಿಂದ ಇವೆಲ್ಲವೂ ಅವುಗಳದ್ದೇ ಆದ ಪ್ರಾಮುಖ್ಯತೆಯನ್ನು ಪಡೆದಿವೆ.

**ಅಡಿ ಟಿಪ್ಪಣಿಗಳು**

೧. ಚಿದಾನಂದಮೂರ್ತಿ ಎಂ., ಸ್ಥಾವರ ಜಂಗಮ, ಪು.೧೨೨

೨. ವಿದ್ಯಾಶಂಕರ ಎಸ್., ಬಸವಪೂರ್ವ ವಚನಕಾರರು, ಪು.೬೫

೩. ದೇಸಾಯಿ ಪಿ.ಬಿ., ಹಿಸ್ಟರಿ ಆಫ್ ಕರ್ನಾಟಕ, ಪು.೧೯೩

೪. ಕಲಬುರ್ಗಿ ಎಂ.ಎಂ., ಮಾರ್ಗ ೧, ಪು.೧೪೬

೫. ಅದೇ, ಪು.೧೪೬

೬. ಅನ್ನಪುರ್ಣ ಜಾಲವಾದಿ, ಶಂಕರದಾಸಿಮಯ್ಯ ಪುರಾಣ ಇಂದು ಅಧ್ಯಯನ, ಪು.೩೦

೭. ಅದೇ, ಪು.೩೦–೩೧

೮. ಅದೇ, ಪು.೩೧

೯. ಅದೇ, ಪು.೩೧

೧೦. ಅದೇ, ಪು.೩೨

೧೧. ಕಲಬುರ್ಗಿ ಎಂ.ಎಂ., ಮಾರ್ಗ–೧, ಪು.

೧೨. ಚಿದಾನಂದಮೂರ್ತಿ ಎಂ., ಹೊಸತು–ಹೊಸತು, ಪು.೭೩೫

೧೩. ಕಲಬುರ್ಗಿ ಎಂ.ಎಂ., ಮಾರ್ಗ–೭ ಪು.೧೨೮

೧೪. ಅದೇ, ಪು.೧೨೯

೧೫. ಅದೇ, ಪು.೧೨೮

೧೬. ಬಸವರಾಜು ಎಲ್., ದೇವರ ದಾಸಿಮಯ್ಯ ವಚನಗಳು, ಪು.೬೯

೧೭. ಅದೇ, ಪು.೬೯

೧೮. ಅದೇ ಪು.೬೯

೧೯. ವಿದ್ಯಾಶಂಕರ್ ಎಸ್., ಭೀಮಕವಿಯ ಬಸವ ಪುರಾಣ, ೨೬ನೇ ಸಂಧಿ

೨೦. ಚಿದಾನಂದಮೂರ್ತಿ ಎಂ., ಸ್ಥಾವರ: ಜಂಗಮ, ಸಂಪುಟ–೪

೨೧. ಅದೇ, ಪು.೪೯೬

೨೨. ಕೆಲವರು ಈ ಗಬ್ಬೂರನ್ನು ದುಗ್ಗಳೆಯ ಊರು ಎಂದು ನಿರ್ಧರಿಸುತ್ತಾರೆ. ಆದರೆ ಇಲ್ಲಿ ಇದಕ್ಕೆ ಸಂಬಂಧಿಸಿದ ದಾಖಲೆಗಳು ಸಿಗುವುದಿಲ್ಲ.

೨೩. ಬೇನಾಳ ಎಚ್.ಎಸ್., ಪ್ರಥಮ ವಚನಕಾರ ಜೇಡರ ದಾಸಿಮಯ್ಯ, ಮುನ್ನುಡಿ

೨೪. ಕೆಲವು ಪುರಾಣಗಳಲ್ಲಿ ಆಕೆಯ ಊರು ಮುದನೂರು ಎಂದೇ ವ್ಯಕ್ತಿವಾಗಿದೆ.

೨೫. ದೇವರದಾಸಿಮಯ್ಯ ಪುರಾಣ, ವಿರೂಪಾಕ್ಷ ಕವಿಯು ರಚಿಸಿದ್ದು, ಇದರಲ್ಲಿ ೧೨ ವರ್ಷವೆಂದು ಹೇಳಿದೆ. ಕೆಲವು ಕೃತಿಗಳಲ್ಲಿ ೭ ವರ್ಷವೆಂದು ದಾಖಲಾಗಿದೆ.

೨೬. ಅನ್ನಪೂರ್ಣ ಜಾಲವಾದಿ, ಬಸವಪಥ, ಸಂಪುಟ ೩೦, ಸಂಚಿಕೆ ೧೦, ಪು–೨೧ ಜನವರಿ ೧೯೯೯

೨೭. ಅನ್ನಪೂರ್ಣ ಜಾಲವಾದಿ, ಶಂಕರದಾಸಿಮಯ್ಯ ಪುರಾಣ, ಪು.೪೨

೨೮. ಅದೇ, ಪು.೨೧

೨೯. ಚಂದ್ರಶೇಕರ ಎಚ್., ಜೇಡರದಾಸಿಮಯ್ಯನ ತವನಿಧಿ ಜಲಗೋಳದ ಸುಂದರ ರೂಪಕ, ದೀಪಾವಳಿ ವಿಶೇಷಾಂಕ ೧೯೯೨, ಪು.೨೨೧

೩೦. ಅದೇ, ಪು.೨೨೪

೩೧. ಅದೇ, ಪು.೨೨೬

೩೨. ಅದೇ, ಪು.೨೨೬

೩೩. ಬಸವರಾಜು ಎಲ್., ದೇವರ ದಾಸಿಮಯ್ಯನ ವಚನಗಳು, ಪೀಠಿಕೆ, ಪು.೨೧

೩೪. ಚಿದಾನಂದಮೂರ್ತಿ ಎಂ., ವಚನ ಸಾಹಿತ್ಯ ಪು.೧೦

೩೫. ಪಾಲ್ಕುರಿಕೆ ಸೋಮನಾಥನ ಬಸವಪುರಾಣದಲ್ಲಿ ಜಯಸಿಂಹನ ಹೆಸರು ಯಾಸಿಂಗ ಬಲ್ಲಹ ಎಂದೇ ಉಲ್ಲೇಖವಾಗಿದೆ.

೩೬. ಚಿದಾನಂದಮೂರ್ತಿ ಎಂ., ದೇವರದಾಸಿಮಯ್ಯ ಶಂಕರದಾಸಿಮಯ್ಯ ಜೇಡರದಾಸಿಮಯ್ಯ, ಪು.೬

೩೭. ಅದೇ, ಪು.೬

೩೮. ವಿದ್ಯಾಶಂಕರ. ಎಸ್., ಭೀ.ಕ.ಬ.ಪು.೫೦, ಪದ್ಯ ೧–೩

೩೯. SII, XXN.23, ದೇವೂರು ಕ್ರಿ.ಶ.೧೦೨೯

೪೦. ಕಲಬುರ್ಗಿ. ಎಂ.ಎಂ, ಶಾಸನಗಳಲ್ಲಿ ಶಿವಶರಣರು, ಪು.೩೮

೪೧. ಅದೇ, ಪು.೩೯

೪೨. ಅದೇ, ಪು.೩೯

೪೩. ಎಪಿಗ್ರಫಿಯಾ ಕರ್ನಾಟಿಕ, V-II, ಬೇಲೂರು ೧೧೨ ಹಳೇಬೀಡು ಶಾಸನ

೪೪. ಚಿದಾನಂದಮೂರ್ತಿ ಎಂ., ದೇ.ದಾ.ಶಂ.ದಾ.ಜೇ.ದಾ. ಪು.೧೦

೪೫.. ಕಲಬುರ್ಗಿ ಎಂ.ಎಂ., ಮಾರ್ಗ–೪, ಪು.

೪೬. ಅದೇ, ಪು.೪೪೧

೪೭. ಅದೇ, ಪು.೪೪೨

೪೮. ಅದೇ, ಪು.೪೪೨

೪೯. ಅದೇ, ಪು.೪೪೫

೫೦. ಅದೇ, ಪು.೪೪೫

೫೧. ಚಿದಾನಂದಮೂರ್ತಿ ಎಂ., ದೇ.ದಾ.ಶಂ.ದಾ.ಜೇ.ದಾ., ಪು.೧೪

೫೨. ಅದೇ, ಪು.೧೬

೫೩. ವಿದ್ಯಾಶಂಕರ್ ಎಸ್., ಬಸವಪುರಾಣ ಪದ್ಯಗಳು ಪು.೬೦೫

೫೪. ಅದೇ, ಸಂಧಿ ೫೦, ಪದ್ಯ ೫೬

೫೫. ಅದೇ, ಪದ್ಯ ೫೭

೫೬. ಅದೇ, ಪದ್ಯ ೬೦

೫೭. ಅದೇ, ಪದ್ಯ ೬೨

೫೮. ಅದೇ, ಪದ್ಯ ೩೬

೫೯. ಚಿದಾನಂದಮೂರ್ತಿ ಎಂ., ದೇವರದಾಸಿಮಯ್ಯ ಶಂಕರದಾಸಿಮಯ್ಯ ಜೇಡರದಾಸಿಮಯ್ಯ ಪು.೧೦

೬೦. ಅದೇ, ಪು.೧೧

೬೧. ಅದೇ, ಪು.೧೧

೬೨. ದೇವೀರಪ್ಪ ಎಚ್., ರಾಚಪ್ಪ ಆರ್., ಶಿವತತ್ವ ಚಿಂತಾಮಣಿ, ೩೭ ಸಂಧಿ, ಪು.೮೫

೬೩. ಹಿರೇಮಠ ಆರ್.ಸಿ., ವೀರಶೈವಾಮೃತ ಪುರಾಣ, ೮/೩ ಪು.೭

೬೪ ಚಿದಾನಂದಮೂರ್ತಿ ಎಂ., ಸ್ಥಾವರ: ಜಂಗಮ, ಪು.೫೦೧

೬೫ ಬಸವರಾಜು ಎಲ್., ದೇವರದಾಸಿಮಯ್ಯನ ವಚನಗಳು, ಪೀಠಿಕೆ

# ಅಧ್ಯಾಯ: ನಾಲ್ಕು

## ಜೇಡರದಾಸಿಮಯ್ಯ: ಆಕರಗಳು

೪.೧. ಶಾಸನಗಳು

೪.೨. ವಚನಗಳು

೪.೩. ಕಾವ್ಯಗಳು

## ಅಧ್ಯಾಯ : ನಾಲ್ಕು

# ಜೇಡರದಾಸಿಮಯ್ಯ: ಆಕರಗಳು

ಸಮಾಜದ ಅವಶ್ಯಕತೆಗಳ, ಮೂಲಭೂತ ಸಮಸ್ಯೆಗಳ ಜಾಡು ಹಿಡಿದು ನಡೆದವರು ವಚನಕಾರರು. ವಚನ ಸಾಹಿತ್ಯದ ಉಗಮ ಮತ್ತು ವಿಕಾಸದ ಬಗ್ಗೆ ಚರ್ಚೆಗಳಿರುವಂತೆ ವಚನಕಾರರು ಹಾಗೂ ಶರಣರ ಬಗೆಗೂ ಚರ್ಚೆಗಳು ಇದ್ದೇ ಇವೆ. ವಿದ್ವಾಂಸರುಗಳು ಇದಕ್ಕೆ ಪುಷ್ಟಿ ನೀಡುವಂತೆ ಹಲವು ಆಧಾರಗಳನ್ನು ಒದಗಿಸುತ್ತಲೇ ಬಂದಿದ್ದಾರಾದರೂ ಕೆಲವು ಸಮಸ್ಯೆಗಳಿಗೆ ಸ್ಪಷ್ಟ ನಿಲುವು ನೀಡುವಲ್ಲಿ ದೂರ ಉಳಿದಿರುವುದನ್ನು ಕಾಣಬಹುದು.

'ಆಧಾರ' ಅಥವಾ 'ಆಕರ'ಗಳು ಸಂಶೋಧನೆಯ ಮೂಲ. "ಹೊಸ ಆಕರ ಶೋಧಗಳ ಬೆಳಕಿನಲ್ಲಿ ನಾವು ಆಗಾಗ ಇತಿಹಾಸದ ತಪ್ಪುಗಳನ್ನು ತಿದ್ದಿಕೊಳ್ಳಬೇಕಾಗುತ್ತದೆ"[೧] ಹಾಗೂ "ಪುರಾತನ ಸಾಹಿತ್ಯವನ್ನು ಪರಿಶುದ್ಧವಾಗಿ ಪ್ರಕಟಿಸುವ ಕೆಲಸ ಹೆಚ್ಚು ಹೊಣೆಗಾರಿಕೆಯುಳ್ಳದ್ದು ಹೊಯಿಲುಳ್ಳದ್ದು. ಎಷ್ಟೆ ಪರಿಶ್ರಮ ಪಟ್ಟರೂ, ಎಷ್ಟೆ ಹೊಣೆ ಹೊತ್ತರೂ ಪೂರ್ಣವಾದ ಪರಿಶುದ್ಧತೆ ಅಸಂಭವ. ಪ್ರತ್ಯಂತರಗಳಿಲ್ಲದಿದ್ದರೆ ಮತ್ತೂ ಕಷ್ಟ"[೨] ಎಂಬ ಮಾತುಗಳು ಆಕರಗಳು ಪುರಾತನರ ಸಾಹಿತ್ಯ ಅಧ್ಯಯನದಲ್ಲಿ ಎಷ್ಟು ಪ್ರಮುಖವಾಗುತ್ತವೆ ಎನ್ನುವುದನ್ನು ತಿಳಿಸುತ್ತವೆ.

ತಾತ್ವಿಕ ಕಸುವುಳ್ಳ ಶರಣ ಸಾಹಿತ್ಯವು ಕೆಲವು ಸೈದ್ಧಾಂತಿಕ ದೃಷ್ಟಿಕೋನಗಳನ್ನು ಸಮಾಜಕ್ಕೆ ಬಿಟ್ಟುಹೋಗಿದೆ. ಈ ಕಾಲಘಟ್ಟವನ್ನು ಪ್ರಜ್ಞಾವಂತಿಕೆಯ ನೆಲೆಯಲ್ಲಿಯೇ ಅಭ್ಯಸಿಸಬೇಕಾಗಿದೆ. ಇದರ ಬೇರುಗಳು ನಂತರದ ೪೦೦-೫೦೦ ವರ್ಷಗಳವರೆಗೆ ವಿಸ್ತರಿಸಿದ್ದು ಶರಣ ಸಮುದಾಯದ ಪ್ರೇರಕ ಶಕ್ತಿ ಎನಿಸಿವೆ. ಶರಣರ ಕುರಿತ ಅನೇಕ ರಗಳೆಗಳು, ಸಾಂಗತ್ಯ, ಷಟ್ಪದಿ ಕಾವ್ಯಗಳು ನಂತರದ ದಿನಗಳಲ್ಲಿ ಜನಸಮುದಾಯ ಹಾಗೂ ಶರಣರ ದೃಷ್ಟಿಯನ್ನು ಇಟ್ಟುಕೊಂಡು ರಚಿತವಾಗಿವೆ. ಈ ಸಾಹಿತ್ಯ ಶಿವಶರಣರ ಜೀವನದ ಬಗೆಗೆ ರೂಢವಾಗಿ ಬಂದ ಕಥೆಗಳನ್ನು ಹೆಣೆದು ಪವಾಡ ಸಾದೃಶ್ಯವಾಗಿ ಕಾವ್ಯವಾಗಿ ರಚಿಸಲ್ಪಟ್ಟಿವೆ. ದಂತಕಥೆಗಳು, ಪವಾಡಕಥೆಗಳು,

ಕಾಲ್ಪನಿಕ ಸಂದರ್ಭಗಳು ಈ ಕಾವ್ಯಗಳಲ್ಲಿ ಮೂಡಿ ಬಂದಿದ್ದರೂ, ಅವರ ಕುರಿತಾದ ಮಹತ್ವದ ಸುಳಿವುಗಳನ್ನು ಈ ಕೃತಿಗಳು ನಮಗೆ ನೀಡುತ್ತವೆ. ಅವರ ಬಗೆಗಿನ ಚಾರಿತ್ರಿಕ ಅಂಶಗಳನ್ನು ಈ ಕಾವ್ಯಗಳು ತಿಳಿಸುವುದರಿಂದ ಅವರ ವ್ಯಕ್ತಿತ್ವ ನಿರ್ಮಾಣದ ವಿಷಯಕ್ಕೆ ಬಂದರೆ ಇವೆ ನಿರ್ಧಾರಕ ಅಂಶಗಳೆನಿಸುತ್ತವೆ.

ಪ್ರಬುದ್ಧತೆ ಹಾಗೂ ಪಾರಮ್ಯದ ದೃಷ್ಟಿಯಿಂದ ಈ ಸಾಹಿತ್ಯ ಸಾಮಾನ್ಯರ ಜೊತೆಗೂಡಿ ನಡೆದ ಕೃಷಿಯಾಗಿದೆ. "ಪ್ರತಿಯೊಂದು ಧರ್ಮದಲ್ಲಿಯೂ 'ತತ್ವ ಸಂಪತ್ತು' ಮತ್ತು 'ಸಾಧನ ಸಂಪತ್ತು'ಗಳಿರುವಂತೆ; ವೀರಶೈವದಲ್ಲಿಯೂ ಈ ಎರಡು ಮಾರ್ಗಗಳಿವೆ. ಇಲ್ಲಿ ತತ್ವಜ್ಞಾನ ಧರ್ಮವನ್ನು ಕುರಿತು ವಿಚಾರ ಮಾಡಿದರೆ, ಸಾಧನ ಮಾರ್ಗ ತಾತ್ವಿಕ ಜಿಜ್ಞಾಸುವಿನ ಆಚರಣೆ ಕುರಿತು ತಿಳಿಸುತ್ತದೆ. ಈ ಆಚಾರ ವಿಚಾರಗಳ ಒಂದುಗೂಡುವಿಕೆಯೇ ವೀರಶೈವದಲ್ಲಿ ಜ್ಞಾನಕ್ರಿಯೆಗಳ ಸಮನ್ವಯ".[೩] ಇಂತಹ ಜ್ಞಾನಕ್ರಿಯೆಗಳ ತತ್ವಾದರ್ಶದ ಒಂದು ಭಾಗವಾಗಿ ಶಿವಶರಣರು ಕಾರ್ಯನಿರ್ವಹಿಸಿದ್ದಾರೆ. ಶಿವಶರಣರ ಪರಮ ಧ್ಯೇಯವೂ ತತ್ವಸಂಪಾದನೆಯ ಮೂಲಕ ಸಾಧನ ಸಂಪತ್ತನ್ನೂ, ಸಾಧನ ಮಾರ್ಗದಿಂದ ತತ್ವ ಸಂಪತ್ತನ್ನೂ ಗಳಿಸುವುದಾಗಿದ್ದೂ, ಇದರ ಮೂಲ ಸಮಾಜವೇ ಆಗಿದೆ. ಈ ಸಾಹಿತ್ಯದ ಉಗಮ ಸಾಮಾಜಿಕ ಕ್ರಾಂತಿಯ ಧ್ಯೋತಕವಾಗಿದ್ದು, ಈ ಎಲ್ಲವುಗಳ ಪರಿಣಾಮ ಸಂದರ್ಭಗಳನ್ನು ಗಮನಿಸಿದಾಗ ವಚನಕಾರರ ವ್ಯಕ್ತಿತ್ವವು ಇದನ್ನು ನಿರ್ಧರಿಸುತ್ತದೆ. ಹಾಗಾಗಿ ಶಿವಶರಣರ ಜೀವನ ಚರಿತ್ರೆಯನ್ನು ತಿಳಿಯುವ ಅವಶ್ಯಕತೆ ಎದ್ದು ತೋರುತ್ತದೆ. ಈ ಹಿನ್ನೆಲೆಯಲ್ಲಿ ಜೇಡರ ದಾಸಿಮಯ್ಯನ ವ್ಯಕ್ತಿತ್ವ, ಜೀವನ ಸಾಧನೆ, ಕಾಯಕ ನಿಷ್ಠೆ, ವಚನಸಾಹಿತ್ಯದ ಮೇಲೆ ಈತನ ಪ್ರಭಾವ, ಪೇರಣೆ ಇವುಗಳನ್ನು ಸಮಂಜಸವಾಗಿ ತಿಳಿಯಬೇಕಾಗಿದೆ. ಶರಣ ಸಾಹಿತ್ಯವನ್ನು ಹಲವು ರೀತಿಯಲ್ಲಿ ವಿಂಗಡಿಸಲಾಗಿದೆ. ಬಸವಣ್ಣನನ್ನು ಕೇಂದ್ರವಾಗಿರಿಸಿಕೊಂಡು ಬಸವಪೂರ್ವಯುಗ, ಬಸವ ನಂತರದ ಯುಗ, ಬಸವಯುಗ ಎನ್ನಲಾಗುತ್ತದೆ. ವಚನ ಸಾಹಿತ್ಯದ ಉಗಮ ಕಾಲ, ಅದರ ಪ್ರವರ್ಧಮಾನ ಕಾಲ, ನಂತರದ ಕಾಲ. ಇದಕ್ಕೆ ಇನ್ನೊಂದು ವರ್ಗೀಕರಣವನ್ನು ಸೇರಿಸಲಾಗಿದ್ದು ವೀರಶೈವ ಸಾಹಿತ್ಯದಲ್ಲಿಯೇ ವಚನ ಮತ್ತು ವಚನೇತರ ಸಾಹಿತ್ಯ ಎಂದು ವಿಂಗಡಿಸಲಾಗುತ್ತದೆ. ಸಾಮಾನ್ಯವಾಗಿ ಬಸವಪೂರ್ವಯುಗ, ಬಸವಯುಗ, ಬಸವೋತ್ತರ ಯುಗ ಎಂದು ವಚನಕಾರರನ್ನು ಅವರ ಸಾಹಿತ್ಯವನ್ನು ವಿಂಗಡಿಸಿಕೊಳ್ಳಲಾಗಿದೆ. ಈ ಅಧ್ಯಯನದ ಮೂಲ ಜೇಡರದಾಸಿಮಯ್ಯ. ಆತನನ್ನು ಬಸವಪೂರ್ವಯುಗದಲ್ಲಿ ಕಾಣಬಹುದು.

"ವೀರಶೈವ ಕವಿಗಳು ಪುರಾಣ, ಚರಿತ್ರೆ, ಚಾರಿತ್ರ್ಯ ಎಂದು ಮುಂತಾಗಿ ಹೊಸ ಹೆಸರಿಟ್ಟು ರಚಿಸಿದ ಕೃತಿಗಳಲ್ಲಿ ಸಮಗ್ರವಾಗಿಯೋ ಸಾಂದರ್ಭಿಕವಾಗಿಯೋ ಒಂದು ಕಥಾವಸ್ತು

ಹಿನ್ನೆಲೆಯಾಗಿರುವುದನ್ನು ಕಾಣಬಹುದು".[೪] ಆಚರಣೆ, ತತ್ವ ಪ್ರತಿಪಾದನೆಗಳನ್ನು ಹೊರತು ಪಡಿಸಿ ಒಂದು ಪರಂಪರೆಯ ವಿಕಾಸದ ಅವಿನಾಭಾವ ಸಂಬಂಧ ಈ ಕೃತಿಗಳದ್ದಾಗಿದೆ. ಕಥಾವಸ್ತು ಶಿವಶರಣರ ಜೀವನ ಹಾಗೂ ಬದುಕಿನ ಘಟನೆಗಳನ್ನೊಳಗೊಂಡದ್ದಾಗಿದೆ ಎಂಬ ಮಾತು ಇಂತಹ ಅಧ್ಯಯನಕ್ಕೆ ಹತ್ತಿರವೆನಿಸುತ್ತದೆ. ದಾಸಿಮಯ್ಯನ ಬದುಕನ್ನು ಇದೆ ರೀತಿಯಲ್ಲಿ ಅನೇಕ ವಚನಕಾರರು ಶಾಸನ ಕರ್ತೃಗಳು, ಕವಿಗಳು ನೆನೆದಿರುವುದು ಭಾಗಶಃ ಆತನ ಮಹತ್ವವನ್ನು ತಿಳಿಸುತ್ತದೆ. ಚಾರಿತ್ರಿಕ ಘಟನೆಗಳನ್ನು ಈ ಎಲ್ಲ ಆಧಾರಗಳ ಮೂಲಕ ಮರು ನಿರ್ಮಿಸುವ ಪ್ರಯತ್ನ ಈ ಅಧ್ಯಯನದ್ದಾಗಿದೆ. "ದೇವರದಾಸಿಮಯ್ಯನ ಕಥೆಗಳನ್ನು ತಿಳಿಸುವ ಎಲ್ಲಾ ಪುರಾಣಗಳನ್ನು ಹೋಲಿಸಿ ನೋಡಿ ಯಾವ ಯಾವುದು ಹೇಗೆ ಹೇಗೆ ಪ್ರಬುದ್ಧವಾಗಿ ಹಬ್ಬಿದೆ ಎಂದು ಕಂಡು ಹಿಡಿಯುವ ಕೆಲಸ ಮುಂದಕ್ಕೆ ನಡೆಯಬೇಕಾದುದು ಅವಶ್ಯಕ"[೫] ಎಂಬ ಡಿ.ಎಲ್. ನರಸಿಂಹಾಚಾರ್ಯರ ಮಾತು ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ (ಡಿ.ಎಲ್.ಎನ್.ಅವರ ಪ್ರಕಾರ ಈ ಇಬ್ಬರು ವ್ಯಕ್ತಿಗಳು ಒಂದೇ) ಈ ಇಬ್ಬರ ಆಕರಗಳ ಹೋಲಿಕೆಯು ಸಂಶೋಧನೆಯ ಸಂದರ್ಭದಲ್ಲಿ ಎಷ್ಟು ಮುಖ್ಯ ಎಂದು ತಿಳಿಸುತ್ತದೆ.

ದಾಸಿಮಯ್ಯನ ಕುರಿತ ಆಕರಗಳನ್ನು ಹಲವರು ಹಲವು ರೀತಿಯಲ್ಲಿ ವಿಂಗಡಿಸಿಕೊಂಡಿದ್ದಾರೆ. ಎಲ್. ಬಸವರಾಜರವರು ತಮ್ಮ 'ದೇವರದಾಸಿಮಯ್ಯನ ವಚನಗಳು' ಎಂಬ ಕೃತಿಯಲ್ಲಿ ನಾಲ್ಕು ಹಂತವಾಗಿ ವಿಂಗಡಿಸಿದ್ದಾರೆ. "ಬಸವಾದಿ ಪ್ರಮಥರ ಹನ್ನೆರಡನೆ ಶತಮಾನದ ವಚನ ಸಾಹಿತ್ಯ ಮೊದಲನೆಯದು. ಮುಂದಿನದು ಹದಿಮೂರನೇ ಶತಮಾನದ ಹರಿಹರ, ಪಾಲ್ಕುರಿಕೆ ಸೋಮನಾಥ(ತ್ರಿಭೂವನ ತಾತ) ಇವರ ಕೃತಿಗಳು. ಮೂರನೆಯದು ಹದಿನೈದರಿಂದ ಹದಿನೆಂಟನೆಯ ಶತಮಾನದವರೆಗಿನ ವೀರಶೈವ ಪುರಾಣ, ವಿಶ್ವಕೋಶ ಪ್ರಪಂಚ; ಇದರಲ್ಲಿ ಶಿವತತ್ವ ಚಿಂತಾಮಣಿ, ಭೈರವೇಶ್ವರ ಕಾವ್ಯ ಕಥಾಮಣಿ ಸೂತ್ರ ರತ್ನಾಕರ ಮುಂತಾದವು ಗಣ್ಯವಾದವು. ಕೊನೆಯದಾಗಿ ಹತ್ತೊಂಬತ್ತನೆ ಶತಮಾನದ ದೇವಕವಿ, ವಿರುಪಾಕ್ಷ ದೇಶಿಕ, ಅಯ್ಯಪ್ಪ ಕವಿ ಮುಂತಾದವರು ಸಂಸ್ಕೃತ ಮತ್ತು ಕನ್ನಡದಲ್ಲಿ ದೇವರದಾಸಿಮಯ್ಯನ ಕುರಿತು ಬರೆದ ಚರಿತ್ರೆ ಪುರಾಣಗಳು"[೬](ಎಲ್. ಬಸವರಾಜ ಅವರು ಸಹ ಜೇಡರದಾಸಿಮಯ್ಯ ಮತ್ತು ದೇವರದಾಸಿಮಯ್ಯ ಇಬ್ಬರೂ ಒಬ್ಬನೆ ಎಂದು ಹೇಳಿದ್ದಾರೆ) ಎಂದು ವಿಂಗಡಿಸಿದ್ದಾರೆ. ಇಲ್ಲಿ ಗಮನಿಸಬೇಕಾದುದು ಈ ಇಬ್ಬರೂ ಮಹನಿಯರು ದೇವರದಾಸಿಮಯ್ಯ ಎಂದೇ ಹೇಳಿರುವ ಆಕರಗಳಲ್ಲಿ ಜೇಡರದಾಸಿಮಯ್ಯನ ಚರಿತ್ರೆಯೇ ಅಡಗಿದೆ.

ಇನ್ನು ಗಂಗಮ್ಮ ಎಚ್. ಎಸ್. ಅವರು ತಮ್ಮ 'ಮುದನೂರು ದಾಸಿಮಯ್ಯ: ಒಂದು ಅಧ್ಯಯನ' ಎಂಬ ಮಹಾ ಪ್ರಬಂಧದಲ್ಲಿ ಮುದನೂರು ದಾಸಿಮಯ್ಯ (ಜೇಡರ ಅಥವಾ

ದೇವರ ದಾಸಿಮಯ್ಯ ಎಂಬ ಗೋಜಿಗೆ ಹೋಗದೆ) ಮುದನೂರನ್ನು ಕೇಂದ್ರೀಕರಿಸಿಕೊಂಡು ಈ ಇಬ್ಬರ ಕುರಿತ ಆಕರಗಳನ್ನು ದಾಖಲಿಸಿದ್ದಾರೆ. ಕುರಿತ ಆಕರಗಳನ್ನು ಹೀಗೆ ವಿಂಗಡಿಸಿದ್ದಾರೆ. ಶಿವಶರಣರ ವಚನಗಳು, ಪುರಾಣ ಕಾವ್ಯಗಳು, ಶಿಲಾಶಾಸನಗಳು ಎಂದು ವಿಭಾಗಿಸಲಾಗಿದೆ. ಮೇಲ್ಕಂಡ ಎಲ್ಲ ವಿಂಗಡಣೆಗಳನ್ನು ತಾತ್ವಿಕವಾಗಿ ಅನ್ನಪೂರ್ಣ ಜಾಲವಾದಿಯವರು ಹೀಗೆ ಹೇಳುತ್ತಾರೆ. "ಕನ್ನಡದಲ್ಲಿ ಪುರಾತನ, ಬಸವಾದಿ ಪ್ರಮಥರ ಚರಿತ್ರೆಗೆ ಆಕರವೆಂದರೆ ಹರಿಹರನ ರಗಳೆಗಳು. ಹರಿಹರನ ಶಿವಶರಣರ ರಗಳೆಗಳು ಅಲ್ಲಲ್ಲಿ ವಚನಕಾರರ ವಚನಗಳ ಆಶಯಗಳನ್ನು ಮೈಗೂಡಿಸಿಕೊಂಡಿರುವುದು ಕಂಡು ಬರುತ್ತದೆ. ಈ ದೃಷ್ಟಿಯಿಂದ ಕನ್ನಡದಲ್ಲಿ ಶಿವಶರಣರ ಜೀವನ ಚಿತ್ರಣಕ್ಕೆ ನೆರವಾಗುವ ಆಕರಗಳು ಒಟ್ಟು ಎರಡು ಎನ್ನಬಹುದು. ಒಂದು ವಚನ ಸಾಹಿತ್ಯ, ಇನ್ನೊಂದು ವಚನ, ಚಾರಿತ್ರಿಕ ಘಟನೆ, ವದಂತಿ, ಐತಿಹ್ಯಗಳನ್ನಾಧರಿಸಿ ರಚಿತವಾದ ಸಾಹಿತ್ಯ. ಮೊದಲನೆಯದು ಪ್ರಮುಖವಾಗಿ ಆತ್ಮಾವಲೋಕನ; ನಂತರದ್ದು ಪ್ರಮುಖವಾಗಿ ಪರಾವಲೋಕನ. ವಚನ ಸಾಹಿತ್ಯದಲ್ಲಿಯೂ ಅಲ್ಲಲ್ಲಿ ಪರಾವಲೋಕನದ ನಿದರ್ಶನಗಳು ಸಿಗುತ್ತವೆ. ಕೆಲವು ಶಿವಶರಣರ ವಚನ ಅಥವಾ ವಚನಗಳು ಆಯಾ ಶರಣನ ಸಮಗ್ರ ಜೀವನವನ್ನು, ಕಥೆಯನ್ನು ಕನ್ನಡಿಯಲ್ಲಿ ತೋರಿಸಿದಂತಿದೆ".[೭] ಇಲ್ಲಿ ತಮ್ಮ ಅಧ್ಯಯನದ ಅನುಕೂಲತೆಗಳು ಹಾಗೂ ಸಾಧ್ಯತೆಗಳನ್ನು ಅನುಸರಿಸಿ ಆಕರಗಳ ಪರಿಶೀಲನೆ ಹಾಗೂ ವಿಂಗಡಣೆ ನಡೆದಿದೆ. ಅಂತೆಯೇ ಪ್ರಸ್ತುತ ಅಧ್ಯಯನದ ಸಾಧ್ಯತೆಯನ್ನು ಅನುಸರಿಸಿ ಆಕರಗಳನ್ನು ಮುಂದಿನಂತೆ ವಿಂಗಡಿಸಿಕೊಳ್ಳಲಾಗಿದೆ.

೧. ಶಾಸನಗಳು

೨. ವಚನಗಳು

೩. ಕಾವ್ಯಗಳು

**೩.೧. ಶಾಸನಗಳು**

ಶಾಸನಗಳು ಯಾವುದೇ ವಿಷಯ ವಸ್ತುವಿನ ಗಣನೆ ಅಥವಾ ಊಹೆಗೆ ಅಧಿಕೃತ ಸ್ವರೂಪ ನೀಡುವ ಆಕರಗಳಾಗಿವೆ. ಹೊಸ ಹೊಸ ಅಧ್ಯಯನಗಳು ನಡೆಯುತ್ತಿರುವುದನ್ನು ಕಾಣುತ್ತಿರುವಾಗ ಅವುಗಳಿಗೆ ಮೂಲ ಶಾಸನಗಳು ಎನ್ನುವುದನ್ನು ಮರೆಯುವಂತಿಲ್ಲ. "ಶರಣರನ್ನು ಅವರವರ ನ್ಯಾಯವಾದ ಘಟ್ಟಗಳಲ್ಲಿ ನಿಲ್ಲಿಸಿ ಕಾಲ ನಿರ್ಣಯ ಮಾಡಿ ವೀರಶೈವದ ಗತಿ ಪ್ರಗತಿಗಳನ್ನು ಸಕ್ರಮವಾಗಿ ಪುನರ್‌ರಚಿಸುವುದು ಅತ್ಯವಶ್ಯವೆನಿಸಿದೆ. ಈ ಕಾಲದಲ್ಲಿ ಪುರಾಣಗಳಿಗಿಂತ ಕಾಲ ಸಹಿತ ವ್ಯಕ್ತಿ ನಿರ್ದೇಶನ ಮಾಡುವ ಶಾಸನಗಳು ಮಹತ್ವದ ಪಾತ್ರ ವಹಿಸುತ್ತವೆ. ಇತ್ತೀಚೆಗೆ ಲಭಿಸಿದ ಕೊಂಡಗೋಳಿ ಶಾಸನದ ಪ್ರಕಾರ ಕೊಂಡಗೋಳಿ ಕೇಶಿರಾಜನ ಕಾಲ ಕ್ರಿ.

ಶ. ೧೧೬೦ ಅಲ್ಲ ೧೧೧೭ ಎಂಬುದನ್ನು ನಿರ್ಧರಿಸಿದ್ದನ್ನು ಇಲ್ಲಿ ನೆನೆಯಬೇಕು"[೮] ಎಂಬ ಎಂ. ಎಂ. ಕಲಬುರ್ಗಿಯವರ ಮಾತುಗಳು ಶಾಸನಗಳ ಅಧ್ಯಯನದ ಮಹತ್ವವನ್ನು ತಿಳಿಸಿವೆ.

ಶರಣರ ಚರಿತ್ರೆಯನ್ನು ತಿಳಿಯುವಲ್ಲಿ ಶಾಸನಗಳು ನಂಬಲರ್ಹ ಆಧಾರಗಳು. ಶಾಸನಗಳನ್ನು ಶಿವಶರಣರು ರಚಿಸಿರುವುದು ಕಂಡು ಬರುವುದಿಲ್ಲ. ಅವರಿಗೆ ಸಂಬಂಧಿಸಿದ ಮತ್ತಾರೋ ಬರೆದು ನಿರ್ಮಾಣ ಮಾಡಿರುತ್ತಾರೆ. ಇಲ್ಲವೆ, ಅವರ ಪ್ರಭಾವವನ್ನು ನೆನೆದು ಮತ್ತಾರನ್ನೋ ಆ ಶರಣರಿಗೆ ಅಥವಾ ಸಂಬಂಧಿಸಿದ ಹಿರಿಯರಿಗೆ (ಅತ್ತಿಮಬ್ಬೆಗೆ ಇತರ ಸ್ತ್ರೀಯರನ್ನೋಲಿಸಿ ರಚಿಸುವುದು, ಸುಗ್ಗಲೆಗೆ ಮುಂದಿನ ಪೀಳಿಗೆ ಸುಗ್ಗಲಾದೇವಿಯನ್ನು ಹೋಲಿಸಿ ರಚಿಸುವುದು ಇತ್ಯಾದಿ) ಹೋಲಿಸಿ ಗುಣಾವಗುಣಗಳನ್ನು ಕೊಂಡಾಡಿ ಶಾಸನ ರಚಿಸಿರುವುದು ಕಂಡುಬರುತ್ತದೆ. ದೇವಸ್ಥಾನದ ಮಹತ್ವ ಹಾಗೂ ಮಹಿಮೆಯನ್ನು ಸಾರುವಾಗಲೂ ಶರಣರ ಕುರಿತ ಅಲ್ಪ ಆಧಾರಗಳು ನಾಡಿನಾದ್ಯಾಂತ ಶಾಸನಗಳಲ್ಲಿ ದೊರೆಯುತ್ತವೆ. ಶಿವಶರಣರನ್ನು ಕುರಿತು ರಚನೆಯಾದ ಶಾಸನಗಳು ಅತ್ಯಂತ ಕಡಿಮೆ ಎಂದರೂ ಅವರ ಕುರಿತಾಗಿ ಆನುಷಂಗಿಕವಾಗಿ ಹೇಳಿದಂತಹ ಶಾಸನಗಳು ಹೇರಳವಾಗಿ ಕಂಡುಬರುತ್ತವೆ. ಜೇಡರದಾಸಿಮಯ್ಯನಿಗೆ ಸಂಬಂಧಿಸಿದಂತೆ ಒಟ್ಟು ಒಂಭತ್ತು ಶಾಸನಗಳು ದೊರೆಯುತ್ತವೆ.

### ೧. ಗೊಬ್ಬೂರು ಶಾಸನ(ಕ್ರಿಶ ೧೨೪೪)

ಗೊಬ್ಬೂರಿನ ಕೊರವರ ಬಾವಿಯ ತಳಕ್ಕೆ ಹಾಕಿದ ಕಲ್ಲುಗಳಲ್ಲಿ ಒಂದು ಶಿಲಾಶಾಸನವಿದ್ದು, ಅದು ಚಾಲುಕ್ಯರ ಚಕ್ರವರ್ತಿ ಜಗದೇಕಮಲ್ಲನ ಕಾಲದಲ್ಲಿ ರಚಿಸಿದ್ದಾಗಿದೆ. ಇದು ಹಂಪಿ ಕನ್ನಡ ವಿಶ್ವವಿದ್ಯಾಲಯದ ರಾಯಚೂರು ಜಿಲ್ಲೆಯ ಶಾಸನಗಳು ಸಂಪುಟದಲ್ಲಿ ಅಚ್ಚಾಗಿದೆ. ಜೇಡರ ಕುಲದೇವರಾದ ಗೊಂಜೇಶ್ವರ ದೇವರಿಗೆ ದತ್ತಿ ನೀಡಿರುವುದರ ಬಗ್ಗೆ ಈ ಶಾಸನ ಪಠ್ಯವಿದೆ.

"ಪಿರಿಯ ಗಬ್ಬೂರು ಶೇಷ ಮಹಾಜನಾಂಗಳ ದಿವ್ಯಶ್ರೀ ಪಾದಪದ್ಮಾರಾಧಕರು ಶ್ರೀ ರಾಮೇಶ್ವರ ದೇವರ ಗಂಧವರ್ಣರ್ ಜಾಡ ಕುಲ ತಿಲಕ ಜೇಡರ ದಾಸಿಮಯ್ಯ ಪ್ರಿಯ ಪುತ್ರರುಮಪ್ಪ ಸಕಲ ಜಾಡ ಗೊತ್ತುಳಿಗಳು ಕುಲದೇವದೇವನಪ್ಪ ಗೊಜ್ಜೇಶ್ವರ ದೇವರಪೂಜೆ"[೯] ಇಲ್ಲಿ ಪ್ರಮುಖವಾಗಿ ಗಮನಿಸಬೇಕಾದ ಅಂಶಗಳು

೧. ರಾಮೇಶ್ವರ ದೇವರ ಗಂಧವರ್ಣರ್

೨. ಜಾಡಕುಲತಿಲಕ ಜಾಡರ ದಾಸಿಮಯ್ಯ ಪ್ರಿಯ ಪುತ್ರರ್

೩. ಸಕಲ ಜಾಡ ಗೊತ್ತುಳಿಗಳು ಕಲದೇವನಪ್ಪ ಗೊಜ್ಜೇಶ್ವರ

ಈ ಶಾಸನದ ಕಾಲ ಕ್ರಿ.ಶ.೧೨೪೪. ರಾಮನಾಥ ದೇವರ ಭಕ್ತರಾದ ಜಾಡ ಕುಲತಿಲಕ ಎನಿಸಿದ ಜೇಡರದಾಸಿಮಯ್ಯ ಅಥವಾ ಜೇಡರದಾಸಿಮಯ್ಯನ ಪ್ರಿಯ ಪುತ್ರರು ಎನಿಸಿದ ಜಾಡ ಗೊತ್ತುಳಿಗಳು ಗೊಜ್ಜೇಶ್ವರ ದೇವರಿಗೆ ದಾನ ನೀಡಿದುದು ಎಂಬ ಉಲ್ಲೇಖವನ್ನು ಒಳಗೊಂಡಿದೆ.

ಎಚ್. ದೇವಿರಪ್ಪ ಅವರು ಹೇಳುವಂತೆ 'ಪ್ರಿಯ ಪುತ್ರರು' ಎಂಬ ಮಾತು ಇಲ್ಲಿ ಗಮನಾರ್ಹವಾದುದು. ಪುತ್ರ, ಸುತ, ಮಗ ಎಂಬ ಮಾತುಗಳನ್ನು ಶಿಷ್ಯ, ಪ್ರಶಿಷ್ಯ, ಪ್ರಶಿಷ್ಯನ ಶಿಷ್ಯ ಎಂಬ ಅರ್ಥಗಳಲ್ಲಿ ಶಾಸಗಳಲ್ಲಿಯೂ, ಸಾಹಿತ್ಯದಲ್ಲಿಯೂ ಬಳಸಿರುವುದಕ್ಕೆ ಅನೇಕ ನಿದರ್ಶನಗಳಿವೆ "ಪ್ರಿಯ ಪುತ್ರ, ಪ್ರಿಯ ಶಿಷ್ಯ, ವರಸುತ ಮುಂತಾದ ವಿಶೇಷಣ ಸಹಿತವಾದ ಪದಗಳಿದ್ದು ಅಂತಹುವಕ್ಕೆ "ಖಾಸಾ ಶಿಷ್ಯ" ಎಂದೆ ಅರ್ಥೈಸಬೇಕಾಗುತ್ತದೆ. ಗಬ್ಬೂರಿನ ಜಾಡ ಗೊತ್ತುಳಿ(ಬಳಗ)ಗಳು ಜೇಡರದಾಸಿಮಯ್ಯನಿಂದಲೇ ನೇರವಾಗಿ ಉಪದೇಶ ಪಡೆದವು"[೧೦]ಎಂದು ವಿವರಿಸುತ್ತಾರೆ.

"ಗೊಬ್ಬೂರಿನ ೧೯ನೇ ಶಾಸನದಲ್ಲಿ ಜೇಡರ ಕುಲದೈವ ಗೊಜ್ಜೇಶ್ವರನೆಂದು ಹೇಳಲಾಗಿದೆ. ೧೭ನೇ ಶಾಸನದಲ್ಲಿಯೂ ಗೊಜ್ಜೇಶ್ವರ ದೇವರ ಉಲ್ಲೇಖವಿದೆ. ೧೧ನೇ ಶಾಸನದಲ್ಲಿರುವ... ಗೊಗ್ಗೇಶ್ವರ ದೇವರ್ಗೇ ಎಂಬ ತ್ರುಟಿತ ಪಠ್ಯದ ಮೂಲ ಪಾಠ 'ಗೊಜ್ಜೇಶ್ವರ ದೇವರ್ಗೆ' ಎಂದು ಇರಬಹುದಾಗಿದೆ".[೧೧]

**೨. ಚಿಕ್ಕ ಮುದೇನೂರು ಶಾಸನ(೧೧೬೭)**

ಈ ಶಾಸನವು ಚಿಕ್ಕ ಮುದೇನೂರಿನ ಗೋಪಾಲಸ್ವಾಮಿ ದೇವಾಲಯದ ಮಧ್ಯರಂಗದ ಮೂರನೇ ಕಂಬದ ಮೇಲೆ ಇದೆ. "ಪವಿತ್ರ ಗುಣನುರಾಗರಪ್ಪ ಶ್ರೀಮರ್ತ್ಸರ್ವೇನಮಸ್ಯದಗ್ರಹಾರಂ ದಕ್ಷಿಣಾವಾರಣಾಸಿ ಮುದೇನೂರ ದಾಸಯ್ಯಗಳ ಪ್ರಮುಖ ಜನಂಗಳ ಶ್ರೀ ಲಕ್ಷ್ಮಣೇಶ್ವರ ದೇವರ ಅಂಗಬೋಗ ನೈವೇಧ್ಯಕ್ಕೆ ಅಲ್ಲಿ ಸ್ಥಾನಿಕ ಬಲ್ಲಜಿಯವರಿಗೆ"[೧೨] ದತ್ತಿ ಕೊಟ್ಟ ವಿಷಯವನ್ನು ಈ ಶಾಸನ ತಿಳಿಸುತ್ತದೆ.

ಇಲ್ಲಿ ಮುಖ್ಯವಾಗಿರುವುದು ಮುದನೂರ ದಾಸಯ್ಯ ಎಂಬುದು ಮತ್ತು ದಕ್ಷಿಣ ವಾರಣಾಸಿ ಎಂಬುದು. ಮದನೂರ ದಾಸಯ್ಯ ಎಂದರೆ ಜೇಡರದಾಸಿಮಯ್ಯ ಎಂದು ನಿರ್ಣಯಿಸಬಹುದು. ಅಂತೆಯೇ ಈ ಊರಿಗೆ ದಕ್ಷಿಣ ವಾರಣಾಸಿ ಎಂಬ ಹೆಸರು ಇದ್ದುದು ನಿಜವೆಂಬುದು ತಿಳಿಸುತ್ತದೆ. ಮೊದಲು ಈ ಶಾಸನವನ್ನು ತಪ್ಪಾಗಿ ಓದಲಾಗಿದ್ದು, ನಂತರದ ಸಂಶೋಧನೆಗಳಲ್ಲಿ ಸರಿಪಡಿಸಿಕೊಳ್ಳಲಾಗಿ. "ಜೀಯಿ"ರು ಎಂದರೆ ದೇವಸ್ಥಾನದ ಅರ್ಚಕರು ಎಂಬ ಅರ್ಥವಿದೆ.

ಹೀಗೆ ಆ ದೇವರ ನೈವೇಧ್ಯಕ್ಕೆ ಪ್ರತಿನಿತ್ಯದ ಪೂಜೆಗೆ ದಾನ ನೀಡಿರುವದು ಈ ಶಾಸನದ ವಿಷಯ.

**೩. ಬಿದಿರೇ ಶಾಸನ(ಕ್ರಿ.ಶ.೧೧೬೫)**

ಬಡವರು ಚಿಂತಾಮಣಿಯಂ
ಪಡೆದಂತಿರೆ ದಾಸನೀಸನ ಕೈಯೊಲು
ಪಡೆದಾ ತವನಿಧಿಯಂತಿರೆ
ಪಡೆದಳು ತಾ ಚಾಂಕಣವ್ವೆ ಬೆಳ್ಳಪ ಸುತನಂ
ನಡೆಗಲ್ತಂ ದೇವತಾಲಯ
ಕ್ಕೆಡೆಯಾಡಿಯು ನುಡಿಗಲ್ತಂ ನಮಸ್ಸಿವಾಯವೆಂಬೀ
ನುಡಿಯಂ ಪಡೆದಾತಂ ಧ
ಮ್ಮೂರ್ಜ್ಜಿತ ಮ್ರಿಡಭಕ್ತ ಕೃತಾರ್ತ್ತನಪ್ಪುದೊಂದಚ್ಚರಿಯೇ[೧೩]

ಇಲ್ಲಿ ಚಾಂಕಣವ್ವೆ ಬೆಳ್ಳಪನನ್ನು ಪಡೆದ ಪ್ರಸಂಗವಿದೆ. ತಾಯಿಯಾದ ಚಾಂಕಣವ್ವೆ ಈಶ್ವರನಿಂದ ದಾಸನು ತವನಿಧಿಯನ್ನು ಪಡೆದಂತೆ ತಾನು ಬೆಳ್ಳಪನನ್ನು ಪಡೆದುದಾಗಿ ಈ ಶಾಸನ ತಿಳಿಸುತ್ತದೆ. ಈ ಶಾಸನವು ತವನಿಧಿ ಪಡೆದದ್ದು ಜೇಡರ ದಾಸಿಮಯ್ಯನೇ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಬೆಳ್ಳಪ ಒಬ್ಬ ಶಿವಭಕ್ತ. ಈತ ಮಹೇಶ್ವರಗುಣಾವತಾರನೆಂದು ಪ್ರಸಿದ್ಧಿ ಆದವನು.

**೪. ಕಿರಿಯಿಂಡಿ ಶಾಸನ ಕ್ರಿ.ಶ.೧೧೯೭**

ದೋಡರದಾಸನ ಕುಲದೊಳ್
ನೋಡಿರೆ ಸೋಮಯ್ಯನೊಗೆದನಾತನ ಸತಿ ತಾಂ
ನೋಡ ಪತಿಬ್ರತೆ ಸದ್ಗುಣಿ
ರೂಢಿಯ ಹೊಲ್ಲೌವ್ವೆಯೆಂಬಳಬಳಾರತ್ನಂ[೧೪]

ಈ ಶಾಸನವು ವಿಜಾಪುರದ ಮ್ಯೂಸಿಯಂನಲ್ಲಿದೆ. ಇಲ್ಲಿ ದೋಡರದಾಸ ಎಂಬ ಪದ ಜೇಡರದಾಸಿಮಯ್ಯನನ್ನು ಉಲ್ಲೇಖಿಸುತ್ತದೆ. "ವಿಜಾಪುರ ಜಿಲ್ಲೆಯ ತಾಲ್ಲೂಕ ಸ್ಥಳವಾದ ಇಂಡಿಯ ನೆರೆಯಲ್ಲಿರುವ, ಚಿಕ್ಕ ಇಂಡಿಯ ಪ್ರಾಚೀನ ಹೆಸರು ಕಿರಿಯಿಂಡಿ. ಈ ಗ್ರಾಮಕ್ಕೆ ಸಂಬಂಧಿಸಿದ ಮೇಲಣ ಶಾಸನದಲ್ಲಿ ಸೋಮಯ್ಯನನ್ನು ದೋಡರದಾಸನ ಕುಲದವನೆಂದು ಹೇಳಲಾಗಿದೆ. ಈ ದೋಡರ ದಾಸನೆಂದರೆ ಜೇಡರದಾಸಿಮಯ್ಯನೆಂದು ವಿದ್ವಾಂಸರ ಅಭಿಮತ.

ಸೋಮಯ್ಯನು ಜೇಡರದಾಸಿಮಯ್ಯನ ಮನೆತನಕ್ಕೆ ಸಂಬಂಧಿಸಿದವನೋ ಶಿಷ್ಯ ಪರಂಪರೆಗೆ ಸಂಬಂಧಿಸಿದವನೋ ಸ್ಪಷ್ಟವಾಗುವುದಿಲ್ಲ."[೧೫]

**೫. ಗಿಜಗನಹಳ್ಳಿ ಶಾಸನ(ಕ್ರಿ.ಶ.೧೨೦೧)**

ಈ ಶಾಸನವು ದತ್ತಿಗೆ ಸಂಬಂಧಿಸಿದುದಾಗಿದೆ. ಶಾಸನದಲ್ಲಿ ಎರಡು ದತ್ತಿಗಳಿದ್ದು ದತ್ತಿಯನ್ವಯ ಕಾಲ ನಿರ್ಣಯ ಮಾಡಲಾಗಿದೆ.

"ಗಿಜೇಯಹಳ್ಳಿಯ....ಇಂತಿನಿಬರುಂ, ಜೇಡರ ದಾಸಿಮಯ್ಯನ ಮಗ ಕಾಟಿಗೌಡನು ಗೀಜೆಯ ಹಳ್ಳಿಯ ಮುಜೆ ಹಿಂಡಿಯ ಹೊಲವೇರಿಯ ಸೀಮೆಯಲ್ಲಿ ಕಟ್ಟಿಸಿದ ಕೆಜೆಗೆ ಬಿಟ್ಟ ಗದ್ದೆ ಉಂಬಳಿ ಖಂ ೫... ಮೂಗಂಡುದೊಳಗೆ ಕೋಟೆಹಾಳ ಗೊಜ್ಜೇಶ್ವರ ದೇವರಿಗೆ ಕಾಟಿಗೌಡ ಬಿಟ್ಟ ಗದ್ದೆ ಕೊಳಗ ೧೦..... ಮುಜೆ ಹಿಂಡಿಯ... ಸಮಸ್ತ ಪ್ರಜೆಗಳು ಸಹಿತವಾಗಿ ಗೀಜೆಯಹಳ್ಳಿಯ ಮುಜೆ ಹಿಂಡಿಯ ಹೊಲವೇರಿಯ ಸೀಮೆಯಲು ಜೇಡರ ದಾಸಿಮಯ್ಯನ ಮಗ ಕಾಟಿಗೌಡ ಕಟ್ಟಿಸಿದ ಕೆಜೆ ಇಂತಿನಿಬರು ಶಕವರ್ಷ ೧೧೨೩ನೆಯ ರೌದ್ರಿಸಂವತ್ಸರವ ಚೈತ್ರ ಶುದ್ಧ ತ್ರಯೋದಶಿ ವಡ್ಡವಾರ ಉತ್ತರಾಯಣ ಸಂಕ್ರಮಣ ವ್ಯತಿಪಾತದಂದು ಬಿಟ್ಟ ಉಂಬಳಿ ಗದ್ದೆ ಕೊಳಗ೫೦. ಕೊಳಗ ಐವತ್ತರೊಳಗೆ ಅರಿಸಿಕೆಜೆಯ ಗೊಜ್ಜೇಶ್ವರದೇವರಿಗೆ ಕಾಟಿಗೌಡ ಬಿಟ್ಟ ಗದ್ದೆ ಕೊಳಗ ೧೦"[೧೬] ಇದಿಷ್ಟು ಶಾಸನ ಪಠ್ಯ.

ಇಲ್ಲಿ ಜೇಡರದಾಸಿಮಯ್ಯನ ಮಗ ಕಾಟಿಗೌಡ ಎಂದು ಹೇಳಿದ್ದರೂ, ಕಾಟಿಗೌಡ ನೇರವಾಗಿ ದಾಸಿಮಯ್ಯನ ಮಗನೇ ಎಂಬುದು ತಿಳಿಯುವುದಿಲ್ಲ. ಈತ ಬಹುಶಃ ಶಿಷ್ಯಸಂಪ್ರದಾಯದ ವ್ಯಕ್ತಿಯಾಗಿರಬಹುದು ಎಂಬ ಅನುಮಾನವೂ ನುಸುಳುತ್ತದೆ.

**೬. ಹಿರಿಯೂರು ಶಾಸನ(ಕ್ರಿಶ೧೨೪೫)**

ಕುಂಜಸೆಟ್ಟಿ ಎಂಬ ಶಿವಭಕ್ತನು ಎಳಮೆಯಲ್ಲಿ ಲಿಂಗೈಕ್ಯನಾದಾಗ ತಂದೆ ಕಂಡನಂಬಿಸೆಟ್ಟಿ ಎಂಬಾತನು ಕುಂಜಸೆಟ್ಟಿಯ ಹೆಸರಿನಲ್ಲಿ ಕುಂಜೇಶ್ವರ ಎಂಬ ಶಿವಾಲಯವನ್ನು ಕ್ರಿಶ ೧೨೫೫ ರಲ್ಲಿ ನಿರ್ಮಾಣ ಮಾಡಿದನು. ಈ ದೇವಾಲಯದಲ್ಲಿ ಒಂದು ಶಾಸನವನ್ನು ನಿಲ್ಲಿಸಲಾಗಿದ್ದು, ಅದರ ಕಾಲ ಕ್ರಿಶ ೧೨೪೫. ಈ ಶಾಸನದಲ್ಲಿ ದಾಸಿಮಯ್ಯನನ್ನು ಉಲ್ಲೇಖಿಸುವ ಪದ್ಯ ಒಂದಿದೆ.

ಸಿರಿಯಾಳು ಬಸವಯ್ಯಾನೊಳ್ಪೆಸೆವ ಮಂ ಬಾಣನುಂ।
ದರಭೋಗಂ ಸೆಲೆ ಚೋಳನುದ್ಭಟತರ್ಕ್ಯಂ ಸಿಂಧುಬಲ್ಲಾಳನೀ ।

ಧರೆ ಕೊಂಡಾಡುವ ದಾಸಿಮಯ್ಯನೆನಿಸಿರ್ದಿ ಭಕ್ತ ಸಂದೋಹವಾ
ದರದಿ ಕಾಕರ ಕಂಡನಂಬಿ ನಿನಗೀಗುದ್ಬೋಧ ಸಂಪತ್ತಿಯಂ।[೧೭]

ಸಿರಿಯಾಳ್ವ, ಬಸವಯ್ಯ, ಬಾಣ, ಉದ್ಭಟ, ಸಿಂಧುಬಲ್ಲಾಳ, ದಾಸಿಮ್ಯಯ ಮೊದಲಾದ ಭಕ್ತ ಗುಂಪನ್ನು ನೆನೆದು 'ಆದರಿಂ ಕಾಕರ ಕಂಡ ನಂಬಿ ನಿನಗೀಗುಬ್ದೋಧ ಸಂಪತ್ತಿಯಂ' ಎಂದು ದಾಖಲಿಸಲಾಗಿದೆ. ಈ ಬಗ್ಗೆ ಡಾ.ಎಂ.ಎಂ ಕಲಬುರ್ಗಿಯವರು ಹೀಗೆ ಹೇಳುತ್ತಾರೆ. "ಬಸವಣ್ಣನವರು ಐಕ್ಯವಾದ ಸುಮಾರು ೯೦ ವರ್ಷದೊಳಗೆ ಹುಟ್ಟಿದ ಶಾಸನ ಇದಾಗಿದ್ದು, ಇಲ್ಲಿ ಬಸವಣ್ಣನವರನ್ನು ಬಿಟ್ಟರೆ ಮಿಕ್ಕವರೆಲ್ಲ ತ್ರಿಷಷ್ಠಿ ಪುರಾತನರು ಮತ್ತು ಪ್ರಾಚೀನ ಶರಣರು. ಈ ಪ್ರಾಚೀನರ ಸಾಲಿನಲ್ಲಿ ಕಲ್ಯಾಣ ಶರಣ ಸಮೂಹದಿಂದ ಬಸವಣ್ಣನವರೊಬ್ಬರನ್ನು ಮಾತ್ರ ಈ ಶಾಸನ ಹೆಸರಿಸಿರುವುದು ಗಮನಾರ್ಹ. 'ಭಕ್ತ ಸಂದೋಹ' ಎಂಬ ಪದದ ಮೂಲಕ ಬಸವಣ್ಣನವರ ಭಕ್ತಿಮಾರ್ಗವನ್ನು ಸೂಚಿಸುವ ಇದು ಅವರನ್ನು ಕುರಿತು ಲಭ್ಯವಾದ ಪ್ರಾಚೀನತಮ ಶಾಸನ"[೧೮] ಎಂದು ಗುರುತಿಸಲಾಗುತ್ತದೆ.

**೭. ಮರಡಿಪುರ ಶಾಸನ(ಕ್ರಿಶ ೧೨೮೦)**

ಈ ಶಾಸನದ ಕಾಲ ಕ್ರಿಶ ೧೨೮೦. ಇದು ಹೊಯ್ಸಳ ವೀರಬಲ್ಲಾಳನ ಆಳ್ವಿಕೆಗೆ ಸಂಬಂಧಿಸಿದ ಶಾಸನವಾಗಿದ್ದು, ಶರಣರ ದಾಸ ಶೋವನಸಿಂಗ ಮಾರೆನಾಯಕ ಮತ್ತು ಹಲವು ಗಾವುಂಡಗಳು ಕೂಡಿ ಕಲಿದೇವರಿಗೆ ಗ್ರಾಮವೊಂದನ್ನು ದಾನ ನೀಡಿದ ವಸ್ತುವನ್ನೊಳಗೊಂಡಿದೆ. ಶಾಸನ ಪಾಠ ಹೀಗಿದೆ; "ಸಿರಿಯಾಳುವ ದಾಸ ದಸವರ್ಮ್ಮದಿಹಿಲ ಉದ್ಭಟ ನಂಬಿ ಕುಂಬಾರಗುಂಡ ಆಂಡವಲ ಕರಿಕಾಲಚೋಳ ಭೋಗದೇವ ಬಾಣ ಮಯೂರ ಕಾಳದಾಸ ಕೇಸಿರಾಜದಣ್ಣಾಯಕ ಸುರಿಗೆಯ ಚಲ್ವಡರಾಯ ಸಂಗನಬಸವಯ್ಯ ಲಿನಿಮಿತಿಕೇಶವರಾಜ ಜಗದೇವದಣ್ಣಾಯಕ ಏಕಾನ್ತದರಾಮಯ್ಯ ಸೊನಲಿಗೆಯರಾಮಯ್ಯ ಹುಲಿಗೆಱೆಯಪೊನ್ನಯ ನೆಲುವಿಗೆಯಸಾಂತಯ್ಯ ಸಕಳಗಣ ಪರಿವೇಷ್ಟಿತ ಶ್ರೀ ಕಲಿದೇವರ ಪ್ರಶಸ್ತಿಮಂಗಳಂ"[೧೯] ಇಲ್ಲಿ ಉಲ್ಲೇಖಿಸಿರುವ ದಾಸ ಎಂಬ ಪದವು ದಾಸಿಮಯ್ಯನನ್ನು ಕುರಿತದ್ದು ಎಂದು ತಿಳಿಯುತ್ತದೆ. ಇದೇ ಶಾಸನದಲ್ಲಿ 'ನವಿಲೆಯ ಜಡೆಯ ಶಂಕರದೇವರ ಪಡಿಹಾರ ದಾಸಯ್ಯ' ಎಂದು ಶಂಕರದಾಸಿಮಯ್ಯನನ್ನು ಉಲ್ಲೇಖಿಸಲಾಗಿದೆ.

**೮. ಅಬ್ಬಲೂರು ಶಾಸನ**

ಈ ಶಾಸನದ ಏಕಾಂತರಾಮಯ್ಯನ ಆದ್ಯಂತ ಚರಿತ್ರೆಯನ್ನು ಬಿಡಿಸಿ ಹೇಳುತ್ತದೆ. ಇದು ಒಂದು ಪುಟ್ಟ ಚಂಪೂ ಕಾವ್ಯವೇ ಆಗಿದೆ. ಸುಮಾರು ೧೦೫ ಚರಣಗಳವರೆಗೆ ಬೆಳೆದು ನಿಂತಿದೆ. ಇಲ್ಲಿಯೂ ದಾಸಿಮಯ್ಯನ ಬಗ್ಗೆ ಒಂದು ಪದ್ಯವಿದೆ.

"ಓಹಿಲ ದಾಸ ಚೆನ್ನ ಸಿರಿಯಾಳ ಹಳಾಯುಧ ಬಾಣನುದ್ಭಟ।
ದೇಹದೊಲೊಂದಿ ಬಂದ ಮಳಯೇಶ್ವರ ಕೇಶವರಾಜರಾದಿಯಾ।
ಗೈಹಿಕ ಸೌಖ್ಯಮೊ ಬಿಸುಟಸಂಖ್ಯಗಣಂ ನಿಜವಾದ ಭಕ್ತಿಸ।
ದ್ಗೇಹದೊಳಿಲ್ಲಿರಲ್ ಸಮಯಮುತ್ಕಟಮಾದುದು ಜೈನಭೌದ್ಧರೊಳ್।"[೨೦]

ಇಲ್ಲಿ 'ದಾಸ' ಎಂಬ ಪದ ದಾಸಿಮಯ್ಯನನ್ನು ಸೂಚಿಸುತ್ತದೆ. ಇತರ ಶರಣರೊಂದಿಗೆ ದಾಸಿಮಯ್ಯನನ್ನು ಮತ್ತು ಆತನ ಭಕ್ತಿಯನ್ನು ನೆನೆಯಲಾಗಿದೆ. ಇದೇ ಅಬ್ಬಲೂರಿನ ಸೋಮೇಶ್ವರ ದೇವಾಲಯದ ಪೌಳಿಯ ಮೇಲೆ ಹಲವು ಶರಣರ ಚಿತ್ರಗಳನ್ನು ಕೊರೆಯಿಸಲಾಗಿದ್ದು ಅದರಲ್ಲಿ "ಜೇಡರದಾಸಿಮಯ್ಯಗಳು ದೇವರಿಗೆ ವಸ್ತ್ರದಾನ ಕೊಡುವ ಠಾವು"[೨೧] ಎಂದು ಬರೆದು ದಾಸಿಮಯ್ಯನ ಚಿತ್ರ ಕೆತ್ತಲಾಗಿದೆ.

**೯. ಬನವಾಸಿಯ ಮಧುಕೇಶ್ವರ ದೇವಾಲಯದ ಶರಣರ ಶಿಲ್ಪ**

ಮೇಲಿನ ಎಲ್ಲಾ ಶಾಸನಗಳೊಂದಿಗೆ ಗಂಗಮ್ಮ ಎಚ್.ಎಸ್ ಇವರು ಬನವಾಸಿಯ ಮಧುಕೇಶ್ವರ ದೇವಾಲಯದ ಶರಣರ ಶಿಲ್ಪಗಳಲ್ಲಿ ದಾಸಿಮಯ್ಯನ ವಿಗ್ರಹವಿದೆ ಎಂದು ಗುರುತಿಸಿದ್ದಾರೆ. ಆದರೆ ಎಂ.ಎಂ ಕಲಬುರ್ಗಿ ಅವರ ಶಾಸನಗಳಲ್ಲಿ ಶಿವಶರಣರು ಕೃತಿಯ ಕೊನೆಯಲ್ಲಿ ಕೊಟ್ಟಿರುವ ಛಾಯಾಚಿತ್ರಬಸಂಗ್ರಹದಲ್ಲಿ ಆ ವಿಗ್ರಹ ಲದ್ದೆ ಸೋಮಣ್ಣನದು ಎನ್ನಲಾಗಿದೆ.

**೧೦. ಹಾವಿನಾಳ ಶಾಸನ**

ಈ ಶಾಸನದ ಕಾಲ ಕ್ರಿಶ ೧೦೮೫. ಮುದನೂರು ಗ್ರಾಮದ ಸಮೀಪದ ಹಾವಿನಾಳ ಎಂಬಲ್ಲಿ ಈ ಶಾಸನವಿದೆ. ಈ ಶಾಸನದ ಕೊನೆಯಲ್ಲಿ "ದೇವರ ದಾಸಿಯುಭಯಲಿಪಿ ಲಿಖಿತ....."[೨೨] ಎಂಬ ಉಲ್ಲೇಖವಿದೆ. ಇಲ್ಲಿ ದೇವರದಾಸಿಯು ಎನ್ನುವ ಹೆಸರು ದೇವರ ದಾಸಿಮಯ್ಯನದೇ ಆಗಿರುವಂತೆ ತೋರುತ್ತದೆ. ಮೇಲಿನ ಎಲ್ಲ ಶಾಸನಗಳನ್ನು ಅನುಲಕ್ಷಿಸಿದಾಗ ಎಲ್ಲಿಯೂ 'ದೇವರ' ವಿಶೇಷಣದ ಉಲ್ಲೇಖವಿರುವುದಿಲ್ಲ. ಆ ಉಲ್ಲೇಖವಿರುವ ಒಂದೇ ಒಂದು ಶಾಸನ ಇದಾಗಿದೆ. ಇಲ್ಲಿ ಸ್ವತಃ ದಾಸಿಮಯ್ಯನೇ ಈ ಶಾಸನ ರಚಿಸಿರುವುದಾಗಿ ಹೇಳಲಾಗಿದೆ. ಇದು ನಿಜವಾದಲ್ಲಿ ಈ ಶಾಸನದ ಕರ್ತೃ ದೇವರದಾಸಿಮಯ್ಯನಾಗುತ್ತಾನೆ.

ಈ ಎಲ್ಲ ಶಾಸನಾದಾರಗಳಲ್ಲಿ ಹಾವಿನಾಳ ಶಾಸನವನ್ನು ಹೊರತುಪಡಿಸಿ ಇನ್ನಾವುದೇ ಶಾಸನಗಳಲ್ಲಿ ದೇವದಾಸಿಮಯ್ಯ ಎಂಬ ಹೆಸರಿನ ಉಲ್ಲೇಖಗಳಿಲ್ಲ. ಜೇಡರದಾಸಿಮಯ್ಯ, ದಾಸ, ದಾಸಿಮಯ್ಯ, ದೋಡರದಾಸ, ದಾಸನೀಸ, ಮುದೇನೂರ ದಾಸಯ್ಯ, ಜಾಡರದಾಸಯ್ಯ ಎಂಬ ಉಲ್ಲೇಖಗಳಿವೆ. ಮೇಲಿನ ಒಂದು ಶಾಸನವನ್ನು ಹೊರತು ಪಡಿಸಿದರೆ, ಉಳದ ಶಸನಗಳಲ್ಲಿ ತವನಿಧಿ ಪಡೆದಬಗ್ಗೆ, ಇತರ ಶರಣರ ಸಾಲಿನಲ್ಲಿ, ಆತನ ಶಿಷ್ಯ ಸಂಪ್ರದಾಯವನ್ನು ನೆನೆಯುವಾಗ ಹೀಗೆ ಜೇಡರದಾಸಿಮಯ್ಯನ ಉಲ್ಲೇಖಗಳಿವೆ. ಅದರಲ್ಲಿಯೂ ಗೊಬ್ಬೂರು, ಚಿಕ್ಕ ಮುದೇನೂರು, ಬಿದಿರೆ, ಕರಿಯಿಂಡಿ, ಗೀಜಗನಹಳ್ಳಿ ಅಬ್ಬಲೂರು ಶಾಸನಗಳು ಆತನ ಸಂಪೂರ್ಣ ಹೆಸರನ್ನು ದಾಖಲಿಸಿವೆ. ಹಿರಿಯೂರು ಶಾಸನದಲ್ಲಿ 'ಧರೆ ಕೊಂಡಾಡುವ ದಾಸಿಮಯ್ಯ' ಎಂದಿರುವುದರಿಂದ ಆತ ಆಂದಿನ ಕಾಲಕ್ಕೆ ಪ್ರಸಿದ್ಧಿ ಪಡೆದ ಜೇಡರದಾಸಿಮಯ್ಯನೇ ಇರಬೇಕೆನಿಸುತ್ತದೆ. ಇನ್ನು ಮರಡಿಪುರ ಶಾಸನದಲ್ಲಿ ಎಲ್ಲ ಶರಣರೊಟ್ಟಿಗೆ ಶಂಕರದಾಸಿಮಯ್ಯ ಹಾಗೂ ಜೇಡರದಾಸಿಮಯ್ಯನನ್ನು ನೆನೆಯಲಾಗಿದೆ. ಈ ಎಲ್ಲ ಶಾಸನಗಳು ದಾಸಿಮಯ್ಯನ ಊರು, ಶಿಷ್ಯ ಪರಂಪರೆ, ವಂಶ ಮೊದಲಾದವುಗಳ ಬಗ್ಗೆ ವಿಷೇಶ ಮಾಹಿತಿ ಒದಗಿಸುತ್ತವೆ.

**೩.೨. ವಚನಗಳು**

'ಕರ್ನಾಟಕ ಶಿವಶರಣರ ಇತಿಹಾಸವನ್ನು ಅವಲೋಕಿಸಿದಾಗ ಉಪಲಬ್ಧ ಮಾಹಿತಿಗಳ ಆಧಾರದಿಂದ ದೇವರದಾಸಿಮಯ್ಯನು ತೀರ ಪ್ರಾಚೀನ ಶಿವಶರಣನಾಗಿ ಕಂಡುಬರುತ್ತಾನೆ. ಈಗಾಗಲೇ ಭಾವಿಸಿರುವಂತೆ ಜೇಡರದಾಸಿಮಯ್ಯನೇ ವಚನಕಾರ. ಈತನು ತನ್ನ ವಚನಗಳ ಮೂಲಕ ಸಾಮಾಜಿಕ ರಾಜಕೀಯ, ಆರ್ಥಿಕವಾದಂತಹ ಕಳಕಳಿಯನ್ನು ತೋರಿದ್ದಾನೆ. ವಿಶೇಷವೆಂದರೆ ಆತನ ವಚನಗಳಲ್ಲಿಯೇ ಆತನ ವೈಯಕ್ತಿಕ ವಿವರಗಳನ್ನು ಅಲ್ಲಲ್ಲಿ ಹೇಳಿ ಕೊಂಡಿದ್ದನ್ನು ಕಾಣಬಹುದು. ಇವುಗಳಿಂದ ಆತನ ಸಾಮಾಜಿಕ ಸ್ಥಾನಮಾನ, ವೃತ್ತಿ, ವೈವಾಹಿಕ ಜೀವನ ಮುಂತಾದವು ತಿಳಿದು ಬರುತ್ತವೆ. ಇದರ ಹೊರತಾಗಿ ಅನ್ಯ ವಚನಕಾರರೂ ದಾಸಿಮಯ್ಯನ ಬಗ್ಗೆ ಹೇಳಿದ ಉಲ್ಲೇಖಗಳು ದೊರೆಯುತ್ತವೆ. "ದಾಸಿಮಯ್ಯನ ಎರಡು ವಚನಗಳಾದಿಯಾಗಿ ಬಸವಣ್ಣ, ಅಕ್ಕಮಹಾದೇವಿ, ಸಿದ್ಧರಾಮ, ಪ್ರಭುದೇವ, ಉರಿಲಿಂಗಪೆದ್ದಿ, ಸತ್ಯಕ್ಕ, ಸೊಡ್ಡಳ ಬಾಚರಸ, ಅಂಬಿಗರ ಚೌಡಯ್ಯ, ಆದಯ್ಯ, ಸಕಲೇಶ ಮಾದರಸ ಈ ಎಲ್ಲ ಶರಣರಿಗೆ ಸಂಬಂಧಿಸಿದ ಒಟ್ಟು ಮೂವತ್ತಾರು ವಚನಗಳಲ್ಲಿ ದಾಸಿಮಯ್ಯನ ಉಲ್ಲೇಖವಿರುವುದನ್ನು ಗುರುತಿಸಲಾಗಿದೆ."[೨೩]

**ಜೇಡರದಾಸಿಮಯ್ಯನ ವಚನಗಳು**

ಜೇಡರದಾಸಿಮಯ್ಯ ಬಸವಣ್ಣನ ಹಿರಿಯ ಹಾಗೂ ಮಾದರ ಚೆನ್ನ, ಓಹಿಲದೇವ, ಡೋಹರ ಕಕ್ಕಯ್ಯ ಇವರ ಸಮಕಾಲೀನನಾಗಿರಬೇಕು. ಬಸವಣ್ಣನು ತನ್ನ ವಚನಗಳಲ್ಲಿ ಈ

ಎಲ್ಲ ವಚನಕಾರರೊಂದಿಗೆ ದಾಸಿಮಯ್ಯನನ್ನು ಸೇರಿಸಿಕೊಂಡಿದ್ದಾನೆ. ದಾಸಿಮಯ್ಯನ ವಚನ ಒಂದು ಹೀಗಿದೆ.

ಕೀಳು ಡೋಹರ ಕಕ್ಕ, ಕೀಳು ಮಾದರ ಚೆನ್ನ
ಕೀಳು ಓಹಿಲದೇವ, ಕೀಳು ಉದ್ಭಟಯ್ಯ
ಕೀಳಿಂಗಲ್ಲದೆ ಹಯನು ಕರೆಯದು ಕಾಣಾರಾಮನಾಥ[೨೪]

ಕಾಲದ ದೃಷ್ಟಿಯಿಂದ ನೋಡಿದಾಗ ಈ ಎಲ್ಲರೂ ದಾಸಿಮಯ್ಯನ ಸಮಕಾಲೀನರೋ, ಹಿರಿಯರೋ ಆಗಿರಬೇಕು ಎನಿಸುತ್ತದೆ. ಮಾದರ ಚೆನ್ನಯ್ಯ ಚೋಳ ಚಕ್ರವರ್ತಿಯ ಕುದುರೆಗೆ ಹುಲ್ಲು ಕೊಯ್ಯುವ ಕಾಯಕದಲ್ಲಿದ್ದವನು. ತನ್ನ ಗುಡಿಸಲಿಗೆ ಬಂದ ಶಿವನಿಗೆ ಮಡಿಕೆ ಅಂಬಲಿಯನ್ನು ಮಾಡಿ ಉಣಿಸಿ ಶಿವನನ್ನು ಒಲಿಸಿಕೊಂಡವನೆಂಬ ಕಥೆಯಿದೆ. ಡೋಹರ ಕಕ್ಕಯ್ಯ ತನ್ನ ತಮಟೆಯನ್ನು ಬಾರಿಸಿ ಶಿವನನ್ನು ಕುಣಿಸಿದವನು. ಅಂತೆಯೇ ಓಹಿಲದೇವ ತನ್ನ ದೇಹವನ್ನೇ ಸುಟ್ಟುಕೊಂಡು ಶಿವನನ್ನು ಒಲಿಸಿಕೊಂಡವನು. ನಂತರ ಓಹಿಲದೇವ ದಿವ್ಯ ದೇಹವನ್ನು ಧರಿಸಿದ್ದನು. ಉದ್ಭಟ ತನ್ನ ನೂರು ಪದ್ಯಗಳಲ್ಲಿ ಶಿವನನ್ನು ಸ್ತುತಿಸಿ ತದ ನಂತರ ಊರನ್ನು ಕೈಲಾಸವಾಗಿಸಿದ. ಕಾಮಧೇನು ವಾಲ್ಮೀಕಿಗೆ ತನ್ನ ಕೆಚ್ಚಲ ಅಮೃತವನ್ನು ಧಾರೆಯಾಗಿಸಿದ್ದು, ಈ ಎಲ್ಲ ಅಂಶಗಳನ್ನು ಒಳಗೊಂಡ ಈ ವಚನ ಕೀಳು ಎಂದು ಕರೆಸಿಕೊಂಡವರು ಶಿವ ಪಾರಮ್ಯದಿಂದ ಅದ್ಭುತ ಫಲಗಳನ್ನು ಪಡೆದುದನ್ನು ಸಾರಸಂಗ್ರಹವಾಗಿ ಹೇಳಿದೆ. ಇದಕ್ಕೆ ಪೂರಕವೆಂಬಂತೆ ಜೇಡರದಾಸಿಮಯ್ಯನ ಮತ್ತೊಂದು ವಚನ 'ಹೊಲೆಯರ ಬಾವಿಯಲೊಂದು ಎಲುಹ ನೆಟ್ಟರೆ' ಎನ್ನುವುದು. ಹೊಲೆಯರ ಬಾವಿಯಲ್ಲಿ ಎಲುಹನ್ನು ನೆಟ್ಟಿರುತ್ತಾರೆ. ಎಲುಬು ಮನುಷ್ಯನ ಕೀಳು ಕುಲದ ದ್ಯೋತಕ ಎಂದಾದರೆ ಮಾನವ ದೇಹವೇ ಎಲುಬುಗಳ ಕುಟೀರ ಇದಕ್ಕೆ ಹೊಲೆತನವಿಲ್ಲ ಎಂಬುದನ್ನು ಪ್ರಶ್ನಿಸುತ್ತಾನೆ.

ನಂಬಿದ ಚೆನ್ನನ ಅಂಬಲಿಯನುಂಡ
ಕೆಂಬಾವಿ ಭೋಗಯ್ಯನ ಹಿಂದಾಡಿಹೋದ
(ಗುಂಡಯ್ಯನ) ಕುಂಭದ ಗತಿಗೆ ಕುರೆಲಿಂದ ಕುಣಿದ
ನಂಬದೆ ಕರೆದವರ ಹಂಬಲವನೊಲ್ಲನೆಮ್ಮ ರಾಮನಾಥ[೨೫]

ಮೇಲ್ಕಂಡ ವಚನದಲ್ಲಿ ಶಿವಶರಣರು ಕೀಳು ಕುಲದವರಾಗಿದ್ದರೂ ಭಕ್ತಿಯಿಂದ ಶಿವನನ್ನು ಒಲಿಸಿಕೊಂಡ ಬಗೆಯನ್ನು ಹೇಳಿದ್ದು, ಅಂತಹ ನಂಬಿಕೆಯುಳ್ಳ ಭಕ್ತಿಗೆ ಶಿವ ಸೋಲದಿರಲಾರ ಎಂಬುದು ಈ ವಚನದ ಸಾರ. ಆದರೆ ದಾಸಿಮಯ್ಯನು ಕಾಯಕ ನಿಷ್ಠತೆಯನ್ನು ತೋರಲು ಶಿವನು ತವನಿಧಿಯನ್ನು ನೀಡಿದನು ಎನ್ನುವುದನ್ನು ಮರೆಯುವಂತಿಲ್ಲ. ಈ ವಚನದಲ್ಲಿ

ಚೆನ್ನಯ್ಯ ಹಾಗೂ ಗುಂಡಯ್ಯರೊಂದಿಗೆ ಭೋಗಯ್ಯನನ್ನು ನೆನೆದಿದ್ದಾನೆ. ಕೆಂಬಾವಿ ಭೋಗಯ್ಯನು ರಾಜಾಜ್ಞೆಯಂತೆ ಊರು ಬಿಟ್ಟು ಹೊರಡಲು ಅನುವಾದಾಗ ಆ ಊರಿನ ನೂರಾರು ಲಿಂಗದ ಕಲ್ಲುಗಳು ಎದ್ದು ಆತನ ಹಿಂದೆಯೆ ನಡೆದವು. ಆಗ ಊರಿನ ಜನ ಚಂದಿಮರಸನನ್ನು ಮುಂದಕ್ಕೆ ಬಿಟ್ಟು ಆತನ ಮಧ್ಯಸ್ಥಿಕೆಯಲ್ಲಿ ಭೋಗಯ್ಯನ ಕಾಲಿಗೆ ಬಿದ್ದು ಆತನನ್ನು ಹಿಂದಕ್ಕೆ ಕರೆತಂದಾಗ ಆ ಲಿಂಗಗಳೂ ಮರಳಿ ದೇವಾಲಯದ ಪಾಣಿಪೀಠಗಳನ್ನು ಅಲಂಕರಿಸಿದವು. ಈ ಕತೆಯಲ್ಲಿ ಚಂದಿಮರಸನ ಮುಂದಾಳತ್ವ ಬರುತ್ತದೆ. ಚಂದಿಮರಸನ ಕಾಲವನ್ನು ಕವಿಚರಿತೆಕಾರರು ಹೇಳುವಂತೆ ಇವನೂ ಸಹ ಇವರ ಸಮಕಾಲೀನನೇ ಆಗಿದ್ದಾನೆ. ದಾಸಿಮಯ್ಯನ ಇನ್ನೊಂದು ವಚನ ಅಂದಿನ ವೀರಶೈವ ಪಂಥದ ನಿಲುವಿನ ಸ್ಥಿತಿಯನ್ನು ತಿಳಿಸುತ್ತದೆ.

ದಾಸನ ಕುಲವಿಂದಾತ ಈಶಂಗಲ್ಲದೆ ಶರಣೆನ್ನ
ಆಸೆ ಮಾಡನೋಡ ಅನ್ಯ ದೈವಂಗಳಿಗೆ
ದೇಶದ ಪಿಶಾಚಿಗಳಿಗೆ ಆಸೆ ಮಾಡನೋಡ
ಆಸೆ ಮಾಡಿದನಾದೊಡೆ ಅವ ದಾಸ ಕುಲವಲ್ಲ
ಅವನನ್ಯ ಕುಲ ಕಾಣ ರಾಮನಾಥ.[೨೬]

'ದಾಸ ಕುಲ' ಎಂದು ಇಲ್ಲಿ ಬಿಂಬಿಸಿರುವುದು ಶಿವದಾಸರ ಒಂದು ಪಂಗಡವನ್ನು ಸೂಚಿಸುತ್ತದೆ. 'ದೇವರದಾಸಿಮಯ್ಯನ ಕಾಲಕ್ಕಾಗಲೇ ಇಂಥ ಶಿವದಾಸರ ಒಂದು ಪಂಥ ಪ್ರವರ್ತನಗೊಂಡು ಮುಂದೆ ಒಂದು ಶತಮಾನದ ಮೇಲೆ ಬಸವಣ್ಣನ ನೇತೃತ್ವದಲ್ಲಿ ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ ಎಂಬ ಶಿವಧರ್ಮ ಪ್ರಭುತ್ವವನ್ನು ಸ್ಥಾಪಿಸಿ ರಾಜರ ನಿರಂಕುಶ ಪ್ರಭುತ್ವಕ್ಕೆ ಅನಿರೀಕ್ಷಿತ ಪ್ರಹಾರವನ್ನು ಕೊಟ್ಟಿತು' ಎಂದು ಅಂದಿನ ಸಾಮಾಜಿಕ ಪರಿಸ್ಥಿತಿಯನ್ನು ರಾಜತ್ವದ ನಡುವೆಯೇ ಮೊಳೆತ ವಚನಕಾರರ ಕಾಂತಿಯನ್ನು ಡಾ. ಎಲ್ ಬಸವರಾಜು ಅವರು ಹೀಗೆ ಹೇಳಿದ್ದಾರೆ. ಆದರೆ ಈ ವಚನದಲ್ಲಿ ಮುಖ್ಯವಾಗುವುದು ದಾಸಿಮಯ್ಯನ ಕಾಲದಲ್ಲಿ ಒಂದು ಶರಣ ಪಂಥ ನಿರ್ಮಾಣವಾದುದು. ಈ ಪಂಥವೇ ಮುಂದಿನ ಕ್ರಾಂತಿಗೆ ಕಾರಣವಾದುದು. ಕುಲಗಳ ಭಿನ್ನತೆಗಳು ಅಳಿಯುವಂತಾಗಿ ಭಕ್ತರ ಅಥವಾ ಶರಣರ (ದಾಸ) ಕುಲ ಒಂದೇ ಎಂಬ ಶರಣರ ಅಸ್ತಿತ್ವದ ಬಗೆಗಿನ ಪ್ರೌಢ ಪಟ್ಟಿ ದಾಸಿಮಯ್ಯನದಾಗಿತ್ತು. ಅವನ ಅನಾಪೇಕ್ಷಾನಿರತ ದಾರ್ಶನಿಕ ನಡಿಗೆಗೆ ಆತನ ವಚನಗಳೇ ಸಾಕ್ಷಿ. 'ಆಸೆ ಮಾಡಿದನಾದಡೆ ಅವ ದಾಸನ ಕುಲವಲ್ಲ' ಎನ್ನುವ ಮಾತು ಮಾನವನ ಸಾಮಾನ್ಯ ಆಮಿಷಗಳನ್ನು ತೊರೆಯದ ಹೊರತು ದಾಸಕುಲವಾಗಲಾರದು ಎನ್ನುವುದನ್ನು ತಿಳಿಸುತ್ತದೆ. ವಚನಕಾರರು ಅಥವಾ ಶರಣರು ತಮ್ಮ ಅನುಭಾವಿಕ ಬೆಳವಣಿಗೆಗೆ ಒಂದು

ಪಂಥವನ್ನು ಅವಲಂಬಿಸಿದ್ದು, ಇಂತಹ ಒಂದು ಪಂಥವೇ ಈ ಎಲ್ಲದಕ್ಕೂ ಪ್ರೇರಣೆಯಾಗಿತ್ತು. ಈ ವಚನದಲ್ಲಿ ಬರುವ ದಾಸ ಪರಂಪರೆ ಶೈವ ಎಂಬುದೇನೋ ನಿಜ. 'ಈಶಂಗಲ್ಲದೆ ಶರಣೆನ್ನ' ಎಂದಿರುವುದು ಅದನ್ನೇ ಸೂಚಿಸುತ್ತದೆ. ಆದರೆ ಇದು ವೀರಶೈವವೇ ಎಂಬುದು ಸ್ಪಷ್ಟಗೊಳ್ಳುವುದಿಲ್ಲ. ಇಲ್ಲಿ 'ದಾಸಕುಲ'ವಲ್ಲ ಎಂದಿರುವುದು ಹಾಗೂ 'ಅನ್ಯಕುಲ'ದವರು ಎಂದಿರುವುದು, ಜಾತಿ ಹಾಗೂ ವರ್ಗವ್ಯವಸ್ಥೆಯ ದ್ಯೋತಕವಾಗಿದೆ.

ಉಂಕೆಯ ನಿಗುಚಿ ಸರಿಗೆಯ ಸಮಗೊಳಿಸೆ
ಸಮಗಾಲನಿಕ್ಕಿ (ಅಣಿಯೊಳೆರಡ) ಮೆಟ್ಟಿದೆ
ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು
ಈ ಸೀರೆಯ ನೇಯ್ದವ ನಾನೋ ನೀನೊ ರಾಮನಾಥ[೨೭]

ಈ ವಚನ ಜೇಡರದಾಸಿಮಯ್ಯನ ವೈಯುಕ್ತಿಕ ಬದುಕನ್ನು ನಿರ್ಧರಿಸುತ್ತದೆ. ಈತ ನೇಯ್ಗೆ ಕಾಯಕದವನು ಎಂಬುದನ್ನು ಈ ವಚನ ಸ್ಪಷ್ಟಗೊಳಿಸುತ್ತದೆ. "ಮನೆಮನೆಗೆ ಮಗ್ಗ ಹಾಸಿದೆ ಲಿಂಗ, ನೂಲು, ತನ್ನಂಗವನ್ನು ನವುರಾಗಿ ನೂತು ಅಡ್ಡ ನೂಲು ಮಾಡಿ ನೆಯ್ಯಬೇಕು. ತನ್ನಂತರೀಯ ಉತ್ತರೀಯವನ್ನು ಅದರಂಚಿಗೂ ಆಚಾರದ ಸರಿಗೆ ಮಿಂಚಬೇಕು. ಜ್ಞಾನ ಕ್ರಿಯೆಗಳ ಸಮಗಾಲನ್ನಿಕ್ಕಿ, ಸಂಕಲ್ಪ ವಿಕಲ್ಪದ ಅಡಿಪಟ್ಟಿಗಳನ್ನು ತುಳಿದು ದೃಢ ಮನಸ್ಸಿನ ಲಾಳಿಯೊಳಗಿಟ್ಟ ಪ್ರಾಣ ಕಂಡಿಕೆಯನ್ನು ಬೀಸಿ ನೇಯುತ್ತಿರಲು ದೇಹ ನೂಲು ಮುಗಿಯುವುದು, ಉಳಿಯುವುದು ಶಿವನ ಶ್ರೇಷ್ಠ ಪ್ರಸಾದವಾದ ದಿವ್ಯ ಜೀವನ ವಸ್ತ್ರ ಮಾತ್ರ. ಇಂಥ ವಸ್ತ್ರವನ್ನು ನೇಯ್ದವನು ತಾನೆಂಬ ಹಮ್ಮಿಲ್ಲ ಜೀವಕ್ಕೆ ಆ ಜೀವಕ್ಕೆ, ಜೀವಜಾಲವೆಲ್ಲಾ ಜೀವಂತ ಶಿವನಾಗಿ ಕಾಣುತ್ತಿರುವುದರಿಂದ".[೨೮] ಇಲ್ಲಿ ಪ್ರಧಾನವಾಗುವುದು ಮೊದಲನೆಯದಾಗಿ ಕಾಯಕದಲ್ಲಿ ಪ್ರಾಮಾಣಿಕನಾಗಿರುವುದು. ಎರಡನೆಯದಾಗಿ ತನ್ನ ಕಾಯಕ ನಿಷ್ಠೆಯಿಂದ ದೈವಕ್ಕೆ ಸವಾಲಾಗಿರುವುದು. ಈ ಎರಡು ಅಂಶಗಳು ಪ್ರಮುಖವಾಗುತ್ತದೆ. ಇಲ್ಲಿ ಒಂದು ರೀತಿಯ ಸ್ಪರ್ಧಾ ಮನೋಭಾವದ ಅಂತರಂಗ ಶುದ್ಧತೆಯ ಗರ್ವ ಕಂಡು ಬರುತ್ತದೆ. 'ಜೇಡರದಾಸಿಮಯ್ಯನವರು, ಮೊಟ್ಟಮೊದಲು ಕಾಯಕಕ್ಕೆ ಉನ್ನತವಾದ ಮೌಲ್ಯವನ್ನು ತಂದುಕೊಟ್ಟರು. 'ಕಾಯಕ ಭಕ್ತಿ' ಮತ್ತು 'ಕಾಯಕ ಪ್ರೀತಿ'ಯು ದಾಸಿಮಯ್ಯನವರ ಅವಿಭಾಜ್ಯ ಅಂಗಗಳಾಗಿದ್ದವು' ಎನ್ನುವ ಎಲ್.ಬಸವರಾಜು ಅವರ ಮಾತು ಈ ವಚನವನ್ನು ಪ್ರತಿಬಿಂಬಿಸುತ್ತದೆ. ದಾಸಿಮಯ್ಯನ ವಚನಗಳಲ್ಲಿ ವೈಯುಕ್ತಿಕವಾಗಿ ತಮ್ಮ ದಾಂಪತ್ಯವನ್ನು ತಿಳಿಸುವ ವಚನವು ದೊರೆಯುತ್ತದೆ.

ಬಂದುದನರಿದು ಬಳಸುವಳು
ಬಂದುದ ಪರಿಣಾಮಿಸುವಳು

ಬಂಧು ಬಳಗವ ಮರೆಸುವಳು

ದುಗ್ಗಳೆಯ ತಂದು ಬದುಕಿದನು ಕಾಣಾ ರಾಮನಾಥ[೨೯]

ಅಂದಿನ ಸಮಾಜದಲ್ಲಿ ಪತಿ-ಪತ್ನಿಯರ ಸಮಾಗಮದ ಬಾಹ್ಯ ವ್ಯಕ್ತಪಡಿಕೆಗಳು ಕಂಡುಬರುವುದಿಲ್ಲ. ಕಾವ್ಯಗಳಲ್ಲಿ, ರಾಜ-ರಾಣಿಯರ ವಿಷಯದಲ್ಲಿ, ದೇವತೆಗಳ ವರ್ಣನೆಯ ಸಂದರ್ಭವನ್ನೂ ಕಾಣಬಹುದು. ಪತ್ನಿಯನ್ನು ಹೊಗಳಿ ವಚನ ಬರೆದವರಲ್ಲಿ ಈತನೇ ಮೊದಲಿಗನಾಗುತ್ತಾನೆ. ದಾಸಿಮಯ್ಯನ ಸಂಸಾರದ ಭವ ಬಂಧನವನ್ನು ಈ ವಚನ ನಿರ್ವಚಿಸುತ್ತದೆ. ಪತ್ನಿಯ ಅದ್ವಿತೀಯ ಗುಣಗಳನ್ನು ಇಲ್ಲಿ ಹೇಳಲಾಗಿದೆ. ಬದುಕಿನ ಸಂಕಷ್ಟಗಳನ್ನು ಅರಿತು ಪತಿಯೊಂದಿಗೆ ನಡೆಯುವವಳು, ಅಂತಹ ತೊಡಕುಗಳಿಗೆ ತಾನೂ ಹೆಗಲಾಗುವವಳು, ಬಂಧು ಬಳಗ ಇತ್ಯಾದಿ ಸಂಬಂಧಗಳನ್ನು ಮರೆಸುವ ಶಕ್ತಿ ಆಕೆಯದು. ಇಂತಹ ಪತ್ನಿಯನ್ನು ತಂದು (ವಿವಾಹವಾಗಿ) ಬದುಕಿದ ಜೀವನಕ್ಕೆ ಧನ್ಯತಾಭಾವವನ್ನು ವ್ಯಕ್ತಪಡಿಸುತ್ತಾನೆ. ಆತನ ಇನ್ನೊಂದು ವಚನವೂ ಸತಿಪತಿಗಳು ಒಂದಾಗಿರುವಿಕೆಯನ್ನು ತಿಳಿಸುತ್ತದೆ. "ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ ಸತಿಪತಿಗಳೊಂದಾಗದವನ ಭಕ್ತಿ ಅಮೃತದೊಳು ವಿಷ ಬೆರೆತಂತೆ ಕಾಣ"[೩೦] ದಾಸಿಮಯ್ಯ ತನ್ನ ಪತ್ನಿಯಾದ ದುಗ್ಗಳೆಯನ್ನು ಪರೀಕ್ಷಿಸಿ ವಿವಾಹವಾದುದು ಹಾಗೂ ಸಂಸಾರ ಹೆಚ್ಚೋ, ಸನ್ಯಾಸ ಹೆಚ್ಚೋ ಎಂಬ ಶರಣರ ಪ್ರಶ್ನೆಗೆ ದುಗ್ಗಳೆಗೆ ಕೆಲವು ಕೆಲಸಗಳನ್ನು ಹೇಳಿ, ಅಂತಹ ಕೈಗೆಟುಕುವ ಬಾಲಿಶ ಕಾರ್ಯಗಳಿಗೂ ಎದುರು ಮಾತಾಡದ ಆಕೆಯ ಸ್ಥಿತಿಯನ್ನು ತೋರಿ ಇಂತಹ ಹೆಂಡತಿ ಸಿಗಲು ಸಂಸಾರ ಲೇಸು ಎಂದು ಹೇಳಿದುದು, ಈ ಎಲ್ಲವೂ ಅವರ ದಾಂಪತ್ಯದ ಪರಾಕಾಷ್ಠೆಯನ್ನು ತೋರುತ್ತವೆ. ಚರಿತ್ರೆಯಲ್ಲಿ ಮಾದರಿ ದಂಪತಿಗಳಾಗಿ ಕಂಡು ಬರುವ ಜೋಡಿಗಳಲ್ಲಿ ಇವರದ್ದು ಒಂದು. ಶಿವ ಪಂಥ ಅಥವಾ ಶರಣ ಪಂಥದಲ್ಲಿ ಸಂಸಾರ ತ್ಯಾಜ್ಯವಲ್ಲ ಎಂಬ ಧ್ವನಿಯು ಇವರ ವಚನಗಳಲ್ಲಿದೆ. 'ಸತಿಪತಿ ಗಳೊಂದಾಗದವನ ಭಕ್ತಿ ಅಮೃತದೊಳು ವಿಷ' ಎಂಬಲ್ಲಿ ವಿಷಮ ದಾಂಪತ್ಯದ ಕಹಿಫಲವನ್ನು ಕುರಿತ ಪ್ರಾತಿನಿಧ್ಯವಿದೆ.

## ಜೇಡರದಾಸಿಮಯ್ಯನ ಕುರಿತ ಇತರ ವಚನಕಾರರ ವಚನಗಳು

ದಾಸಿಮಯ್ಯನ ವಿಚಾರವನ್ನು ಹೇಳುವ ಅಥವಾ ಆತನನ್ನು ಸ್ಮರಿಸುವ ಇತರ ವಚನಕಾರರು. ಬಸವಣ್ಣ, ಅಕ್ಕಮಹಾದೇವಿ, ಸಿದ್ಧರಾಮ, ಪ್ರಭುದೇವ, ಉರಿಲಿಂಗಪೆದ್ದಿ, ಸತ್ಯಕ್ಕ, ಸೊಡ್ಡಳ ಬಾಚರಸ, ಅಂಬಿಗರ ಚೌಡಯ್ಯ, ಆದಯ್ಯ, ಸಕಲೇಶ ಮಾದರಸ ಮೊದಲಾದವರು. ಇವರ ವಚನಗಳನ್ನು ಗಮನಿಸಿದಾಗ ದಾಸಿಮಯ್ಯನ ಅತಿ ಹೆಚ್ಚು ಪ್ರಭಾವವಿರುವುದು ಬಸವಣ್ಣನ ಮೇಲೆಯೇ. ಅಂತೆಯೇ ಬಸವಣ್ಣ ದಾಸಿಮಯ್ಯನನ್ನು ಕುರಿತು ತನ್ನ ೧೮ ವಚನಗಳಲ್ಲಿ

ಉಲ್ಲೇಖಿಸಿದ್ದಾನೆ. ಇನ್ನುಳಿದ ವಚನಕಾರರು ತಮ್ಮ ಎರಡು ಮೂರು ವಚನಗಳಲ್ಲಿ ಮಾತ್ರವೇ ಆತನನ್ನು ನೆನೆದಿದ್ದಾರೆ. ಅಷ್ಟೇ ಅಲ್ಲದೆ ಬಸವಣ್ಣನ ವಚನಗಳಲ್ಲಿ ದೇವರದಾಸಿಮಯ್ಯನ ವಚನಗಳನ್ನು ಬಿಂಬಿಸುವಂತಹ ೨೧ ವಚನಗಳು[೩೧] ದೊರೆಯುತ್ತವೆ.

"ಬಸವಣ್ಣನವರ ವಚನಗಳಲ್ಲಿ ಜೇಡರದಾಸಿಮಯ್ಯನ ಜೀವನ ಸಂಬಂಧವಾಗಿ ಬಂದಿರುವ ಪ್ರಸ್ತಾಪಗಳು ಅತ್ಯಂತ ಪುರಾತನ. ಅವುಗಳಿಗಿಂತ ಹಿಂದಕ್ಕೆ ಹೋದರೆ ಸಿಕ್ಕುವುದು ದಾಸಿಮಯ್ಯನ (ಎಲ್ಲೋ ಕೆಲವು) ವಚನಗಳು ಮಾತ್ರ, ಆ ವಚನಗಳಲ್ಲಿ ಸಿಗುವುದು ಅವನ ಭಾವನಾತ್ಮಕವಾದ ವ್ಯಕ್ತಿಚಿತ್ರವೇ ಹೊರತು, ಘಟನಾತ್ಮಕವಾದ ಜೀವನ ಚಿತ್ರಣವಲ್ಲ, ಆದುದರಿಂದ ದಾಸಿಮಯ್ಯನ ಜೀವಿತದ ಭಾವನಾಂಶ ಮತ್ತು ಚರಿತ್ರಾಂಶಗಳೆರಡನ್ನೂ ಮೇಳೈಸಿ ಮೂಡಿಸುವಲ್ಲಿ ಬಸವಣ್ಣನವರ ವಚನಗಳು ಮೊತ್ತಮೊದಲ ಉತ್ತಮ ಮೂಲ"[೩೨] ಎಂಬ ಎಲ್.ಬಸವರಾಜು ಅವರ ಮಾತುಗಳು ನಿರ್ಧಿಷ್ಟತೆಯನ್ನು ವ್ಯಕ್ತಪಡಿಸುತ್ತವೆ. ಬಸವಣ್ಣನ ವಚನಗಳಲ್ಲಿ ಜೇಡರದಾಸಿಮಯ್ಯನ ಜೀವನ ಕುರಿತ ಘಟನೆಗಳ ಕೆಲವು ಉಲ್ಲೇಖಗಳಲ್ಲದೇ, ಅವು ಸಾಂದರ್ಭಿಕರಿಸಿದ ಕೆಲವು ಉಲ್ಲೇಖಗಳಾಗಿದ್ದು, ಆತನ ಜೀವನದ ನೈಜ ಘಟನೆಗಳಿಗೆ ತಳುಕು ಹಾಕಿಕೊಂಡ ಕೊಂಡಿಗಳ ರೀತಿಯಲ್ಲಿ ಉಕ್ತ ಗೊಂಡಿದೆ ಎನ್ನುವುದು ಅವರ ಅಭಿಪ್ರಾಯ. ಬಸವಣ್ಣನು ಭಕ್ತಿಯನ್ನು ತೋರುವಾಗ, ಆತನ ಭಕ್ತಿಯನ್ನು ಸಾಬೀತುಪಡಿಸುವಾಗ ಜೇಡರದಾಸಿಮಯ್ಯನ ವೃತ್ತಿ, ಕಾಯಕನಿಷ್ಠೆ, ಪತ್ನಿ ದುಗ್ಗಳೆಯ ಬಗ್ಗೆ, ತವನಿಧಿಯ ಪ್ರಸಂಗ, ನೇಯ್ಗೆಯ ಪ್ರಸಂಗಗಳನ್ನು ಸಂದರ್ಭಕ್ಕೆ ತಕ್ಕಂತೆ ಭಕ್ತಿಯನ್ನು ವಿವರಿಸುವಾಗ ಉಲ್ಲೇಖಿಸಿರುವುದನ್ನು ಕಾಣಬಹುದು.

"ಬಸವಣ್ಣನವರು ತಮ್ಮ ಷಟ್‌ಸ್ಥಳ ವಚನಗಳಲ್ಲಿ ಅನೇಕ ಜನ ಶರಣರನ್ನು ಉಲ್ಲೇಖಿಸಿದ್ದಾರೆ. ಈ ಉಲ್ಲೇಖಗಳನ್ನು ಬಿಡಿಯಾಗಿ ನೋಡದೆ ಒಂದೆಡೆ ಸಂಗ್ರಹಿಸಿ, ವರ್ಗೀಕರಿಸಿ ನೋಡಿದರೆ ಬಸವಣ್ಣನವರು ಆಯಾ ಶರಣರಲ್ಲಿ ಗುರುತಿಸಿದ್ದ ವಿಶೇಷತೆಗಳು ಯಾವುವು ಎಂಬುದು ಸ್ಪಷ್ಟವಾಗುತ್ತದೆ. ಈ ದೃಷ್ಟಿಯಿಂದ ಅಭ್ಯಾಸಯೋಗ್ಯ ವಸ್ತುವೆನಿಸಿದ್ದಾನೆ ಜೇಡರದಾಸಿಮಯ್ಯ".[೩೩] ಬಸವಣ್ಣನವಚನಗಳಲ್ಲಿ ದಾಸಿಮಯ್ಯನ ಕುರಿತು ನೆನೆಯುವಾಗ ನಿರ್ಧಿಷ್ಟವಾಗಿ ಎರಡು ರೀತಿಯಲ್ಲಿ ಭಕ್ತಿ ಪರಂಪರೆಯು ಕಂಡುಬರುವುದಾಗಿ ಎಂ.ಎಂ.ಕಲಬುರ್ಗಿಯವರು ವಿವರಿಸುತ್ತಾರೆ.

೧. ಭಕ್ತಿಯ ಅಸಾಧಾರಣ ಪ್ರತೀಕಗಳಾದ ಸಿರಿಯಾಳ, ಸಿಂಧುಬಲ್ಲಾಳರೊಂದಿಗೆ ದಾಸಿಮಯ್ಯನನ್ನು ಬಸವಣ್ಣ ಹೋಲಿಸಿ ನೆನೆದು ಆತನನ್ನು ಭಕ್ತಿಯ ಪಾರಮ್ಯಕ್ಕೆ ಏರಿಸಿದ್ದು.

೨. ಬಸವಣ್ಣನ ಹಿರಿಯರು ಆದ ಮೂಲತಃ ಅಂತ್ಯಜರಾಗಿದ್ದ ಕಕ್ಕಯ್ಯ–ಚೆನ್ನಯ್ಯರ ಜೊತೆ ದಾಸಿಮಯ್ಯನನ್ನು ಉಲ್ಲೇಖಿಸಿದ್ದು, ಇಲ್ಲಿ ಎರಡು ಪರಂಪರೆಯನ್ನು ಕಾಣಬಹುದು. ಸಿರಿಯಾಳ ಬಲ್ಲಾಳರ ಪರಂಪರೆ. ಮತ್ತೊಂದು ಕಕ್ಕಯ್ಯ–ಚೆನ್ನಯ್ಯರ ಪರಂಪರೆ. ಮೊದಲಿನದು

ಅಂದಿನ ಕಾಲಕ್ಕೆ ಕಥೆಯಾಗಿ ಹೋದ ಇಬ್ಬರು ಭಕ್ತರ ಪರಂಪರೆ. ಎರಡನೆಯದು ದಾಸಿಮಯ್ಯನ ಸಮಕಾಲೀನವೆನಿಸಿದ ಹಾಗೂ ಶ್ರೇಷ್ಠ ಭಕ್ತರೆನಿಸಿದ ಇಬ್ಬರು ಶರಣರ ಪರಂಪರೆ.

ಇಲ್ಲಿ ಗುರುತಿಸಬಹುದಾದ ವಿಂಗಡಣೆಯು ೧೨ನೇ ಶತಮಾನದ ಎರಡು ಪರಂಪರೆಗಳನ್ನು ವಿವರಿಸುತ್ತದೆ. ಒಂದು ಭಕ್ತಿ ಪರಂಪರೆ, ಮತ್ತೊಂದು ವರ್ಗ ಅಥವಾ ವರ್ಣ ಪರಂಪರೆ. ಎರಡರಲ್ಲಿಯೂ ಸಮಾನವಾಗಿರುವುದು ನಿಶ್ಚಲ ಭಕ್ತಿ ಮತ್ತು ಅದರಿಂದ ಶಿವನನ್ನು ಒಲಿಸಿಕೊಳ್ಳಬಹುದಾದ ರೀತಿ. ದಾಸಿಮಯ್ಯನ ವಚನಗಳಲ್ಲಿಯೇ ದೊರೆಯಬಹುದಾದ ಭಕ್ತಿ ಪರಂಪರೆ ಹಾಗೂ ಅಂದಿನ ಕಾಲದಲ್ಲಿನ ವರ್ಣ ಪದ್ಧತಿಯನ್ನು ಮೀರಿ ಮೆರೆದ ಭಕ್ತಿಯ ಅನಾವರಣ ಎರಡನ್ನೂ ಇಲ್ಲಿ ಕಾಣಬಬಹುದು.

**ದಾಸಿಮಯ್ಯನ ಕುರಿತ ಬಸವಣ್ಣನ ವಚನಗಳು**[೩೪]

೧. ದಾಸಿದೇವ ತನ್ನ ವಸ್ತ್ರವನ್ನಿತ್ತು ತವನಿಧಿ ಪ್ರಸಾದವ ಪಡೆದ
ಸಿರಿಯಾಳ ತನ್ನ ಮಗನನ್ನಿತ್ತು ಪ್ರಾಣ ಪ್ರಸಾದ ಪಡೆದ
ಬಲ್ಲಾಳದೇವ ತನ್ನ ವಧುವನ್ನಿತ್ತು ಸಮತೆ–ಪ್ರಸಾದವ ಪಡೆದ
ಇವರೆಲ್ಲರೂ ತಮ ತಮಗೆ ಮಾಡಿ ಪಡೆದರು ಸಮ್ಯಕ್ ಪದವಿಯನು
ನಾನೇನೂ ಅರಿಯದ ಭಕ್ತಿಯ
ಬಡವಂಗೆ ಕರುಣಿಸು ಕೂಡಲಸಂಗಮ ದೇವಾ

೨. ದೇವನಿಂತಹನೆಂದು ತೋರಿಕೊಡುವೆನು ಗಣಂಗಳಿಗೆ
ಬಲ್ಲಾಳ ವಧುವ ಬೇಡಿದಾತನೇ ದೇವ
ದೇವನಿಂತಹನೆಂದು ತೋರಿಕೊಡುವೆನೀ ಗಣಂಗಳಿಗೆ
ದಾಸನ ವಸ್ತ್ರವ ಬೇಡಿದಾತ ನೀ ದೇವ
ದೇವನಿಂತಹನೆಂದು ತೋರಿಕೊಡುವೆನೀ ಗಣಂಗಳಿಗೆ
ಸಿರಿಯಾಳನ ಮಗನ ಬೇಡಿದಾತನೀ ದೇವ
ಕೂಡಲಸಂಗಮ ದೇವ ಜಂಗಮ ಮುಖಿಯಾಗಿ
ಕಾಡಿ ನೋಡುವ ಬೇಡಿ ನೋಡುವ.

೩. ದಾಸನ ವಸ್ತ್ರವ ಬೇಡಿದ ಮುನ್ನ
ತವನಿಧಿಯನಿತ್ತಡೆ ನಿಮ್ಮ ದೇವನೆಂಬೆ
ಸಿರಿಯಾಳನ ಮಗನ ಬೇಡಿದ ಮುನ್ನ

ಕಂಚಿಯಪುರವ ಕೈಲಾಸಕೊಯ್ದಡೆ ನಿಮ್ಮ ದೇವನೆಂಬೆ
ಬಲ್ಲಾಳನ ವಧುವ ಬೇಡಿದ ಮುನ್ನ
ಸ್ವಯ ಲಿಂಗವ ಮಾಡಿದಡೆ ನಿಮ್ಮ ದೇವನೆಂಬೆ
ದೇಹಿ ನೀನು, ವ್ಯಾಪಾರಿಗಳು ನಮ್ಮವರು
ಬೇಡು ಕೂಡಲ ಸಂಗಮದೇವಾ ನಮ್ಮವರ ಕೈಯಲು

೪. ದ್ವಿಜರಿಗೆ ಕೊಟ್ಟು ಹಳಬರು ಕೆಟ್ಟರು
ಉದ್ಧರಿಸುವನೊಬ್ಬ ಶಿವಶರಣ ಸಾಲದೆ?
ನಾರಾಯಣ ವೃದ್ಧ ಬ್ರಾಹ್ಮಣನಾಗಿ ಬಂದು
ಬಲಿಯ ಭೂಮಿಯ ದಾನವ ಬೇಡಿದ
ಕೊಟ್ಟ ಬಲಿ ಬಂಧನಕ್ಕೊಳಗಾದ
ಈಶ ಭಕ್ತನಾಗಿ ಬಂದು ದಾಸನ ವಸ್ತ್ರವ ಬೇಡಿದ
ಕೊಟ್ಟದಾಸ ತವನಿಧಿಯ ಪಡೆದ
ಕಪಟದಿಂದ ನಾರಾಯಣ ಹಾರುವನಾಗಿ ಬಂದು
ಕರ್ಣನ ಕವಚವ ಬೇಡಿದ
ಕೊಟ್ಟ ಕರ್ಣ ಕಳದಲ್ಲಿ ಮಡಿದ
ಕಾಮಾರಿ ಜಂಗಮವಾಗಿ ಬಂದು ಸಿರಿಯಾಳನ ಮಗನ ಬೇಡಿದ
ಕೊಟ್ಟ ಸಿರಿಯಾಳ ಶೆಟ್ಟಿಕಂಚಿಯ ಪುರವ ಕೈಲಾಸಕೊಯ್ದ
ನಾರಾಯಣ ಹಾರುವನಾಗಿ ಬಂದು ನಾಗಾರ್ಜುನನ ಶಿರವ ಬೇಡಿದ
ಕೊಟ್ಟ ನಾಗಾರ್ಜುನನ ಶಿರಹೋಯ್ತು
ಶಿವನು ಜಂಗಮನಾಗಿ ಬಂದು ಸಿಂಧು ಬಲ್ಲಾಳನ ವಧುವ ಬೇಡಿದ
ಕೊಟ್ಟ ಸಿಂಧು ಬಲ್ಲಾಳ ಸ್ವಯಲಿಂಗವಾದ
ಇದು ಕಾರಣ ಇಲ್ಲಿಯೂ ಲೇಸು, ಅಲ್ಲಿಯೂ ಲೇಸು
ಕೂಡಿರೇ ನಮ್ಮ ಕೂಡಲ ಸಂಗನ ಶರಣರಿಗೆ

೫. ಮುನ್ನಿನವರು ಹೋದ ದಾರಿ ಭಯ ಕಾಣಿರಣ್ಣ
ಬಲ್ಲಾಳನ ವಧುವಿನೊಡನೆ ಸರಸವಾಡಿದಂದಿಂದ ಭಯ ಕಾಣಿರಣ್ಣ
ಸಿರಿಯಾಳನ ಮಗನ ಬೇಡಿದಂದಿಂದ ಭಯಕಾಣಿರಣ್ಣ

೬. ಎಲ್ಲಿಹೊಕ್ಕಲ್ಲಿ ನಿನ್ನ ವಿಕಾರವ ಮುಣೆ ಗುವತನವೆ?

ದಾಸನ ವಸ್ತ್ರವನುಡುವುದೊಂದು ಗುರುತನವೆ?
ಸಿರಿಯಾಳನ ಮಗನ ಬೇಡುವುದೊಂದು ಗುರುತನವೆ?
ಬಲ್ಲಾಳನ ವಧುವ ಬೇಡುವುದೊಂದು ಗುರುತನವೆ?
ಕೋಡಗವ ಹುಲ್ಲಲ್ಲಿ ಮುಸುಕಿದಂತೆ
ಕೂಡಲಸಂಗಮ ನಿಮ್ಮ ಪರಿ

೭. ಭಕ್ತಿ ಎಂತಹದಯ್ಯ? ದಾಸಯ್ಯ ಮಾಡಿದಂತಹುದು
ಭಕ್ತಿ ಎಂತಹದಯ್ಯ? ಸಿರಿಯಾಳ ಮಾಡಿದಂತಹುದು
ಭಕ್ತಿ ಎಂತಹದಯ್ಯ? ಸಿಂಧು ಬಲ್ಲಾಳ ಮಾಡಿದಂತಹುದು
ಭಕ್ತಿ ಎಂತಹದಯ್ಯ? ಕೂಡಲ ಸಂಗಮದೇವಾ
ನೀ ಬಾಣನ ಬಾಗಿಲ ಕಾಯ್ದಂತಹುದು

೮. ನೆರೆ ನಂಬೋ ನೆರೆ ನಂಬೋ ಧರಧುರವಿಲ್ಲದೆ ಸಾಮವೇದಿಗಳಂತೆ
ನೆರೆ ನಂಬೋ ನೆರೆ ನಂಬೋ ದಾಸ ದುಗ್ಗಳೆಯರಂತೆ
ನೆರೆ ನಂಬೋ ನೆರೆ ನಂಬೋ ಸಿರಿಯಾಳ ಚಂಗಳೆಯರಂತೆ
ನೆರೆ ನಂಬೋ ನೆರೆ ನಂಬೋ ಸಿಂಧು ಬಲ್ಲಾಳನಂತೆ
ನೆರೆ ನಂಬಿದೆಯಾದಡೆ ತನ್ನನೀವ ಕೂಡಲಸಂಗಮದೇವಾ

೯. ಸೋಲಬಲ್ಲವರು ಗೆಲಲರಿಯರಯ್ಯ
ತನುಮನಧನದಲ್ಲಿ ವಂಚನೆಯನರಿಯರಯ್ಯಾ
ದಾಸ–ಸಿರಿಯಾಳನವರು
ಕೂಡಲಸಂಗನ ಶರಣರು ಉಪಚಾರವನರಿಯರಯ್ಯ

೧೦. ಬಾಣ ಮಯೂರನಂತೆ ಬಣ್ಣಿಸಬಲ್ಲೆನೆ?
ಸಿರಿಯಾಳನಂತೆ ಎಣಲಿಕ್ಕೆ ಬಲ್ಲೆನೆ?
ದಾಸಿಮಯ್ಯನಂತೆ ಉಡಕೊಡಬಲ್ಲನೆ?
ಉಂಡುಟ್ಟುಕೊಟ್ಟರೆ ಮುಯ್ಯಿಗೆ ಮುಯ್ಯಿನಿಸಿತ್ತು
ಎನಕೆ ಕೊಟ್ಟರೆ ಧರ್ಮ ಕೂಡಲಸಂಗಮದೇವಾ

೧೧. ವೇಷ ಅವಿಚಾರದಲ್ಲಿ ನಡೆಯಿತ್ತೆಂದು
ಅಸುರದಲ್ಲಿ ಬಗುಳುವ ಕುನ್ನೀ, ನೀ ಕೇಳಾ
ಹರಿಯನೆ ದಾಸನ ವಸ್ತ್ರವ?

ಎಣ್ಣನೆ ಚೆನ್ನನ ಸಂಗಾತ?
ಪರವಧುವ ಕೊಳ್ಳನೆ ಸಿಂಧುಬಲ್ಲಾಳನ?
ಬೇಡನೆ ಸಿರಿಯಾಳನ ಮಗನ?
ನಡಿವುದು ನುಡಿವುದು ಅವಿಚಾರವೆಂದು
ಭಾವ ವಿಭಾವವೆಂದು ಕಂಡನಾದಡೆ
ತಪ್ಪೆನ್ನದು, ಮೂಗ ಕೊಯ್ಯಿ! ಕೂಡಲಸಂಗಮದೇವಾ

೧೨. ಅರ್ಥ ಪ್ರಾಣಾಭಿಮಾನ ಕೊಟ್ಟೆನೆಂಬರಲ್ಲದೆ
ಕೊಟ್ಟ ಶಿವಭಕ್ತನಾರನೂ ಕಂಡುದಿಲ್ಲ
ದಾಸ ತನ್ನ ವಸ್ತ್ರವ ಕೊಟ್ಟನಲ್ಲದೆ, ತನ್ನ ಕೊಟ್ಟುದಿಲ್ಲ
ಸಿರಿಯಾಳ ತನ್ನ ಮಗನ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ
ಇದೆಲ್ಲ ಹೊರಗಣ ಮಾತು
ಕೂಡಲಸಂಗಮ ದೇವರಲ್ಲಿ ತನ್ನ ಕೊಟ್ಟು ಸಿಂಧು ಮರಾಳ

೧೩. ಒಬ್ಬನ ಮನೆಯಲ್ಲುಂಡು ಹೊತ್ತುಗಳೆವೆ
ಒಬ್ಬನ ಮನೆಯಲುಡಲೊಂದು ಗಳಿಸಿದೆ
ಗರ್ವ ಬೇಡ ಬೇಡ ಎನಗೆ
ಚೆನ್ನಯ್ಯನ ಮನೆಯಲ್ಲಂಬಲಿಯನುಂಡು ಬದುಕಿದೆ
ಗರ್ವ ಬೇಡ, ಬೇಡ
ಕೂಡಲಸಂಗಯ್ಯ ಸಿರಿಯಾಳನಿಂದ ಮುನಿಸಲೋಕಗಂಡೆ

೧೪. ದಾಸನಂತೆ ತವನಿಧಿಯ ಬೇಡುವವನಲ್ಲ
ಚೋಳನಂತೆ ಹೊನ್ನ ಮಳೆಯ ಕರೆಸೆಂಬವನಲ್ಲ
ಅಂಜದಿರು ಅಂಜದಿರು ಅವರಂದದವನ ನಾನಲ್ಲ
ಎನ್ನ ತಂದೆ ಕೂಡಲಸಂಗಮದೇವಾ
ಸದ್ಭಕ್ತಿಯ ಕರುಣಿಸೆನಗೆ

೧೫. ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ
ಕಷ್ಟದ ಹೊರೆಯ ಹೊರಿಸದಿರಯ್ಯ
ಕಕ್ಕಯ್ಯನೊಕ್ಕುದನಿಕ್ಕ ನೋಡಯ್ಯ
ದಾಸಯ್ಯ ಶಿವದಾವನೆರೆಯ ನೋಡಯ್ಯ

ಮನ್ನಣೆಯ ಚೆನ್ನಯ್ಯನೆನ್ನುವ ಮನ್ನಿಸ
ಉನ್ನತ ಮಹಿಮ ಕೂಡಲ ಸಂಗಮದೇವಾ, ಶಿವಧೋ, ಶಿವಧೋ

೧೬ ಭಕ್ತಿಯಿಲ್ಲದ ಬಡವ ನಾನಯ್ಯ
ಕಕ್ಕಯ್ಯನ ಮನೆಯಲೂ ಬೇಡಿದೆ
ಚೆನ್ನಯ್ಯನ ಮನೆಯಲೂ ಬೇಡಿದೆ
ದಾಸಯ್ಯನ ಮನೆಯಲೂ ಬೇಡಿದೆ
ಎಲ್ಲಾ ಪುರಾತನರು ನೆರೆದು ಭಕ್ತಿ ಭಿಕ್ಷವನಿಕ್ಕಿದರೆ
ಎನ್ನ ಪಾತ್ರೆ ತುಂಬಿತ್ತು, ಕೂಡಲಸಂಗಮದೇವಾ

೧೭ ತೊತ್ತಿಂಗೆ ಬಲ್ಲಹನೊಲಿದಡೆ ಪದವಿಯು ಮಾಡದೆ ಮಾಣ್ಬನೇ?
ಜೇಡರದಾಸಿಮಯ್ಯನಿಗೊಲಿದಾತ, ಮತ್ತೊಬ್ಬ ದೇವನೇ ಅಯ್ಯಾ
ಮಾದಾರ ಚೆನ್ನಂಗೆ, ಡೋಹರ ಕಕ್ಕಯ್ಯಂಗೆ
ತೆಲುಗು ಬೊಮ್ಮಯ್ಯಂಗೆ ಒಲಿದಾತ ,ಮತ್ತೊಬ್ಬ ದೇವನೆ ಅಯ್ಯಾ?
ಎನ್ನ ಮನದ ಪಂಚೇಂದ್ರಿಯ ನಿಮ್ಮತ್ತಲಾದಡೆ
ತನ್ನತ್ತ ಮಾಡುವ ಕೂಡಲಸಂಗಮದೇವ

೧೮ ದೇವಾ ನಿಮ್ಮ ಪೂಜಿಸಿ ಚೆನ್ನನ ಕುಲ ಚೆನ್ನಾಯಿತ್ತು
ದೇವಾ ನಿಮ್ಮ ಪೂಜಿಸಿ ದಾಸನ ಕುಲ ದೆಸೆವಡೆಯಿತ್ತು
ದೇವಾ ನಿಮ್ಮಡಿಗೆರಗಿದ್ದ ಮಡಿವಾಳ ಮಾಚಯ್ಯ ನಿಮ್ಮಡಿಯಾದ
ನೀನೊಲಿದ ಕುಲಕ್ಕೆ ನೀನೊಲ್ಲದ ಹೊಲೆಗೆ ಮರೆಯುಂಟೆ ದೇವಾ?
ಶ್ವಪಚೋಪಿ ಮುನಿಶ್ರೇಷ್ಠೋಯಸ್ತುಲಿಂಗಾರ್ಚನೆ ರತಃ।
ಲಿಂಗಾರ್ಚನ ವಿಹೀನೋಪಿ ಬಾಹ್ಮಣಃ ಶ್ವಪಚಾಧಮ॥ ಎಂದುದಾಗಿ
ಜಾತಿ ವಿಜಾತಿಯಾದಡೇನು ಅಜಾತಂಗೆ ಶರಣೆನ್ನದವನು
ಆತನೆ ಕುಡಲಸಂಗಮದೇವಾ.

ಜೇಡರದಾಸಿಮಯ್ಯನ ಕುರಿತ ಇತರ ಎಲ್ಲಾ ಶರಣರ ವಚನಗಳನ್ನು ಒಂದೆಡೆ ಇಟ್ಟು ನೋಡುವುದಾದರೆ ಬಸವಣ್ಣನ ವಚನಗಳನ್ನು ಒಂದು ಭಾಗವಾಗಿ ಗುರುತಿಸಲು ಸಾಧ್ಯವಿದೆ. ಬಸವಣ್ಣನ ವಚನಗಳಲ್ಲಿ ಜೇಡರದಾಸಿಮಯ್ಯನ ಜೀವನ ಕುರಿತ ಘಟನೆಗಳ ಉಲ್ಲೇಖಗಳಿವೆ ಯಲ್ಲದೇ, ಭಕ್ತಿಯ ನಿರ್ವಚನದ ಆಕರವಾಗಿ ಜೇಡರದಾಸಿಮಯ್ಯನನ್ನು ಇಲ್ಲಿ ಕಾಣಲಾಗಿದೆ. ಬಸವಣ್ಣನ ವಚನಗಳಲ್ಲಿ ಸಾಮಾನ್ಯವಾಗಿ ಜೇಡರದಾಸಿಮಯ್ಯನನ್ನು ಸಿರಿಯಾಳ, ಸಿಂಧೂ

ಬಲ್ಲಾಳ, ಕಕ್ಕಯ್ಯ-ಚೆನ್ನಯ್ಯರೊಂದಿಗೆ ಸ್ಮರಿಸುವ ರೂಢಿ ಕಂಡುಬರುತ್ತದೆ. ಅಂದರೆ ಭಕ್ತಿಯಿಂದ ತಮ್ಮನ್ನು ಅರ್ಪಿಸಿಕೊಂಡು, ಶಿವನಿಂದ ವರ ಪಡೆದ ಪರಂಪರೆಯ ಪ್ರತಿನಿಧಿಯಾಗಿಯೂ ಜೇಡರದಾಸಿಮಯ್ಯ ಕಂಡುಬರುತ್ತಾರೆ. ಹಾಗೆಯೇ ಸಾಮಾಜಿಕ ಆಯಾಮಗಳಲ್ಲಿ ಒಂದಾದ ಜಾತಿ ಪದ್ಧತಿ, ಬಡತನ ಮುಂತಾದುವನ್ನು ಪ್ರಶ್ನಿಸುವ ಸಂದರ್ಭದಲ್ಲಿ ಪೂರ್ವಜರೊಂದಿಗೆ ಇಟ್ಟು ಗ್ರಹಿಸಿರುವುದು ಕಂಡುಬರುತ್ತದೆ. ಇದನ್ನೇ ಡಾ. ಎಂ. ಎಂ. ಕಲಬುರ್ಗಿಯವರು ಈ ರೀತಿಯಾಗಿ ವಿಶ್ಲೇಷಿಸಿದ್ದಾರೆ. ಬಸವಣ್ಣನ ವಚನಗಳಲ್ಲಿನ ದಾಸಿಮಯ್ಯನ ಉಲ್ಲೇಖದ ಪ್ರಧಾನ ಆಶಯ ಭಕ್ತಿ ಹಾಗೂ ಸಾಮಾಜಿಕ ಸಮಸ್ಯೆಗಳಾದ, ಬಡತನ, ಜಾತಿ ವ್ಯವಸ್ಥೆ. ದಾಸಿಮಯ್ಯ ವಸ್ತ್ರವನ್ನು ನೀಡಿ ತವನಿಧಿ ಪಡೆದದ್ದು, ದಾಸ ದುಗ್ಗಳೆಯರನ್ನು ಸತಿಪತಿಗಳ ಸಾಲಿನಲ್ಲಿ ಉಲ್ಲೇಖಿಸಿದ್ದು, ದಾಸಯ್ಯನೊಟ್ಟಿಗೆ ಚೆನ್ನಯ್ಯ-ಕಕ್ಕಯ್ಯನನ್ನು, ನೆನೆದಿದ್ದು ಎಲ್ಲವೂ ಆತನ ಬಗ್ಗೆ ಇರುವ ಅನುಮಾನಗಳಿಗೆ ಸ್ಪಷ್ಟ ರೂಪ ಒದಗಿಸುತ್ತವೆ.

"ಈ ವಚನಗಳಲ್ಲಿ ಬಂದ ಬಲ್ಲಾಳ, ಸಿರಿಯಾಳರು ಮಾಡಿದ ಭಕ್ತಿ ಭಯ ಸ್ವರೂಪದ್ದು ಅದರಲ್ಲೂ ಉಗ್ರಭಕ್ತಿ. ಬಸವಣ್ಣನವರು ಈ ಮೂವರನ್ನು ಜೊತೆಜೊತೆಯಾಗಿಯೇ ಬಳಸುತ್ತ, ಇವರು ಹೋದ ಭಕ್ತಿಮಾರ್ಗ ಭಯ ಸ್ವರೂಪದ್ದು, ಇವರು ಅಘಟಿತ, ಘಟಿತರು, ವಿಪರೀತ ಚರಿತರು ಎಂದು ಹೇಳುತ್ತಾ, ದಾಸಿಮಯ್ಯ ಇವರಂತೆಯೇ ಉಗ್ರ ಭಕ್ತಿಯನ್ನು ತೋರಿರಬೇಕು. ಬಹುಶಃ ಆತ ಜಂಗಮನಿಗೆ ನೇಯ್ದ ವಸ್ತ್ರವನ್ನಲ್ಲದೆ. ತೊಟ್ಟ ವಸ್ತ್ರವನ್ನೇ ಬಿಚ್ಚಿ ಕೊಟ್ಟಿರಬೇಕು"[೨೫] ಎಂಬ ಅಭಿಪ್ರಾಯವನ್ನು ಡಾ. ಎಂ. ಎಂ ಕಲಬುರ್ಗಿಯವರು ಮಂಡಿಸುತ್ತಾರೆ.

ದಾಸಿಮಯ್ಯನಿಗೆ ವಸ್ತ್ರವನ್ನು ಬೇಡುವ ಮೊದಲೇ ತವನಿಧಿಯನ್ನು ನೀಡಿದ್ದಾದರೆ, ನಿನ್ನನ್ನು ದೇವನೆಂದು ಮೆಚ್ಚುತ್ತಿದ್ದೆ ಹಾಗೂ 'ದಾಸ ತನ್ನ ವಸ್ತ್ರವ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ' ಎಂಬಲ್ಲಿ ದಾಸಯ್ಯನ(ಪೂರ್ವಜರ) ಭಕ್ತಿಯನ್ನು ಪ್ರಶ್ನಿಸಿದ್ದಾನೆ. ಅಂತೆಯೇ ವರ ನೀಡಿದ ಶಿವನನ್ನು ಪ್ರಶ್ನಿಸಿರುವುದು ಕಂಡುಬರುತ್ತದೆ. ಅದೇನೇ ಇದ್ದರು ಬಸವಣ್ಣನ ವಚನಗಳು ದಾಸಿಮಯ್ಯನ ಕುರಿತ ಪ್ರಧಾನ ಆಕರಗಳಾಗಿ ಇರುವುದಂತೂ ಸತ್ಯ. ಬಸವಣ್ಣನಂತೆಯೇ ದಾಸಿಮಯ್ಯನ ಬಗ್ಗೆ ಇನ್ನೂ ಹಲವು ವಚನಕಾರರು ತಮ್ಮ ವಚನಗಳಲ್ಲಿ ಉಲ್ಲೇಖಿಸಿರುವುದನ್ನು ಕಾಣುತ್ತೇವೆ.

**ಅಲ್ಲಮಪ್ರಭುವಿನ ವಚನ**

ಹಾಸುಹೊಕ್ಕಿನ ಠಾವ ದಾಸಯ್ಯ ಬಲ್ಲ
ಉಂಬ ಉಡುವ ಠಾವ ಸಿಯಾಳ ಬಲ್ಲ
ಕೊಂಬ ಕೊಡುವ ಠಾವ ಬಲ್ಲಾಳ ಬಲ್ಲ

ಲಿಂಗ ಜಂಗಮದ ಠಾವ ಬಸವಣ್ಣ ಬಲ್ಲ
ನಮ್ಮ ಗುಹೇಶ್ವರನ ನಿಲವ
ಸೊನ್ನಲಿಗೆಯ ಸಿದ್ಧರಾಮಯ್ಯನೆ ಬಲ್ಲ.[೩೬]

**ಚೆನ್ನಬಸವಣ್ಣ**

ನೆರೆನಂಬೋ ನೆರೆನಂಬೋ ಗುರುಲಿಂಗ ಜಂಗಮವ
ನೆರೆನಂಬೋ ನೆರೆನಂಬೋ ಧರಧುರವಿಲ್ಲದೆ ಸಾಮವೇದಿಗಳಂತೆ
ನೆರೆನಂಬೋ ನೆರೆನಂಬೋ ದಾಸ ದುಗ್ಗಳೆಯರಂತೆ
ನೆರೆನಂಬೋ ನೆರೆನಂಬೋಸಿರಿಯಾಳ ಚೆಂಗೆಯೆಯರಂತೆ
ನೆರೆನಂಬೋ ನೆರೆನಂಬೋ ಸಿಂಧುಬಲ್ಲಾಳನಂತೆ
ನೆರೆನಂಬಿದೆ ಯಾದಡೆ ತನ್ನನೀವ ಕೊಡಲಚೆನ್ನಸಂಗಮದೇವ.[೩೭]

ಅನ್ನವನಿಕ್ಕಿದಡೇನ? ಪುಣ್ಯವಹುದು
ವಸ್ತ್ರವಕೊಟ್ಟಡೇನು? ಧರ್ಮವಹುದು
ಹಣವ ಕೊಟ್ಟಡೇನು? ಶ್ರೀಯಹುದು
ತ್ರಿಕರಣ ಶುದ್ಧ ಎಂದಡೇನು?
ಮುಕ್ತಿಯಹುದು ಕೂಡಲ ಚನ್ನಸಂಗಮದೇವಾ.[೩೮]

**ಅಂಬಿಗರ ಚೌಡಯ್ಯ**

ಬೇಡಂಗೆ ಜೇಡಂಗೆ ಡೋಹರಂಗೆ ಹೊಲೆಯಂಗೆರೂಢಿಗೀಶ್ವರ
ನೊಲಿದ ಪರಿಯ ನೋಡಾ
ಲೋಕದ ಮಾನವರು ಮಾಡುವರು ಸಮಯಂಗಳನು.
ಮೂಡಲಿಕ್ಕೆ ಅವರೇನು ಸ್ವತಂತ್ರರೇ?
ಇವನೊಡ್ಡಿದ ಠಾವಿನಲ್ಲಿ ಕಲ್ಲು ಮುಳ್ಳು ಮಾಡುವ ವೇದಾಂತ
ನಮ್ಮ ಅಂಬಿಗರ ಚೌಡಯ್ಯ[೩೯]

**ಆದಯ್ಯ**

ವೈದಿಕರಪ್ಪ ವೇದವಿತ್ತುಗಳೊಂದು ಕೋಟಿಗೆ ಅನ್ನವನಿಕ್ಕಿದ ಫಲಕ್ಕೆ
ಕೋಟಿ ಮಿಗಿಲು ಶಿವ ಶರಣಂಗೆ ಒಂದು ಬಿಕ್ಷುವನಿಕ್ಕಿದ ಫಲ
ಕೋಟಿ ಕನ್ಯಾದಾನ ಫಲಕ್ಕೆ ಮಿಗಿಲು, ಒಬ್ಬ ಬಸ್ಮಾಂಗಿಯ ಒಂದು ವೇಳೆಯ ತೃಪ್ತಿ
ಇದಕ್ಕೆ ಸಾಕ್ಷಿ ಕ್ಷೀರ ಕುಂಭ ಸಹಶ್ರೇಣ। ಘೃತಕುಂಭ ಶತೇನ ಚ।

ಭಸ್ಮಾಂಗಿ ಭಿಕ್ಷ ಮಾತ್ರೇಣ। ಕೋಟಿಯಜ್ಞಂ ಫಲಂ ಭವೇತ್।

ಎಂಬುದಾಗಿ ಚತುರ್ವೇದಗಳಿಗೆ ಅನ್ನವನಿಕ್ಕಿದ ಅಕ್ಷಪಾದಂಗೆ

ಗೋವಧ ಬಂದಿತ್ತು. ಒಬ್ಬ ಶಿವಶರಣ ಚೋಳದಾಸ ಉಣಲುಡಲಿತ್ತ ಕೈಯೊಡನೆ ಹೊನ್ನ ಮಳೆ ತವನಿಧಿಯ ಪಡೆದರು. ಇದು ಕಾರಣ ನೆಮ್ಮುಗೆವಿಡಿದು ಮಾಡುವ ಭಕ್ತಂಗೆ ಇದೆ ಮಾಟವಯ್ಯ ಸೌರಾಷ್ಟ್ರ ಸೋಮೇಶ್ವರ.[೪೦]

**ಉರಿಲಿಂಗಪೆದ್ದಿ**

ಕೊಡುವ ಲಿಂಗವ ಬೇಡಿಕೊಳಲರಿಯದ ಮಾನವರ ನಾಶಮಾಡಿ ಕೆಡಬೇಡ ಕೆಡಬೇಡ ಕೇಳಿರಣ್ಣ.. ಎಂಬ ವಚನದಲ್ಲಿ "ಚೋಳಂಗೆ ಹೊನ್ನ ಮಳೆಯ ಕರೆಸಿದ. ದಾಸಂಗೆ ತವನಿಧಿಯ ಕೊಟ್ಟ, ದೇವದಾನವರಿಗೆಯೂ ಅವರವರು ಬೇಡಿದ ಪದಂಗಳ ಕೊಟ್ಟ ನೋಡಿರೆ"[೪೧]

**ಸತ್ಯಕ್ಕ**

ಹಿರಿತನಕ್ಕೆ ಪಥವೇ ಬಾಣನ ಮನೆಯ ಬಾಗಿಲಕಾಯ್ವುದು
ಮಹಂತನಕ್ಕೆ ಪಥವೇ ನಂಬಿಗೆ ಕುಂಟಣಿಯಾದುದು
ಕರುಣತನಕ್ಕೆ ಪಥವೇ ಸಿರಿಯಾಳನ ಮಗನ ಕೊಂದು
ಜಂಗಮಕ್ಕೆ ಉಣಲಿಕ್ಕಿದವರುಂಟೇ?
ನೀವು ಕೊಡುವುದು ಕೌತುಕವಲ್ಲ, ಶಂಭುಜಕ್ಕೇಶ್ವರಾ,
ಎನ್ನೊಡೆಯನ ಸಾತ್ವಿಕ ಸದ್ಭಕ್ತರ ಮಹಿಮೆಗೆ ನಾನು ನಮೋ ಎಂಬೆ[೪೨]

**ಸೊಡ್ಡಳ ಬಾಚರಸ**

ವೇದದವರನೊಲ್ಲದೆ ನಮ್ಮಮಾದಾರ ಚೆನ್ನಯ್ಯಂಗೊಲಿದ
ಶಾಸ್ತ್ರನವರನೊಲ್ಲದೆ .ಶಿವರಾತ್ರೆಯ ಸಂಕಣ್ಣಂಗೊಲಿದ
ಕರ್ಮಿಗಳನೊಲ್ಲದೆ ಓಹಿಲ ಉದ್ಧಟರಿಗೊಲಿದ ಅಣ್ಣ ಕೇಳಾ, ಸೋಜಿಗವ
ದಾಸದುಗ್ಗಳೆಗೊಲಿದ ಮುಕ್ಕಣ್ಣ ಸೊಡ್ಡಳ ಹಾರುವಣ್ಣಗಳಿಗೆ
ಹೇಸಿ ಕದವ ಮುಚ್ಚಿಕೊಂಡನು.[೪೩]

**ಸಕಲೇಶ ಮಾದರಸ**

ದಾಸ ವಸ್ತ್ರವನಿತ್ತ ಠಾವುಲೇಸಾಯಿತು
ತವನಿಧಿಯ ಪಡೆಯ ಠಾವು ಹೊಲ್ಲೆಹವಾಯಿತ್ತು[೪೪]

ವಚನಕಾರರಲ್ಲಿ ಅಥವಾ ವೀರಶೈವ ಪರಂಪರೆಯಲ್ಲಿ ಶಿವಭಕ್ತಿಗೆ ನೇಮಿಸಿದಂತೆ, ಅನ್ನವನಿಟ್ಟುದಕ್ಕೆ ಚೆನ್ನಯ್ಯನು ಪ್ರಭಾವಿಯಾದರೆ. ಉಡಲು ಕೊಟ್ಟುದಕ್ಕೆ ದಾಸಿಮಯ್ಯ ಪ್ರಭಾವಿಯಾಗುತ್ತಾನೆ. ಮೂಲಭೂತ ಅವಶ್ಯಕತೆಗಳೇ ಇಲ್ಲಿ ಪ್ರಧಾನ. ಆತನ ಜೀವನದ ಪ್ರಭುತ್ವ, ರಾಜಕಾರಣ, ಬಡತನ, ಅದಕ್ಕೆ ಪರಿಹಾರ ಒದಗಿಸುವ ಹುನ್ನಾರ ಎಲ್ಲವೂ ಭಕ್ತಿಯ ಪ್ರಭುತ್ವವನ್ನು ಆಶ್ರಯಿಸಿದ್ದಾಗಿ ವಚನಕಾರರು ಇದನ್ನು ಬಿಂಬಿಸಿದ್ದಾರೆ. ಮೂಲಭೂತ ಅವಶ್ಯಕತೆಗಳನ್ನು ಪ್ರಧಾನಿಸಿ ಅಂದರೆ ಅವುಗಳನ್ನು ಶಿವನಿಗರ್ಪಿಸಿ ಅದರಿಂದ ಶಿವ ಸಾಕ್ಷಾತ್ಕಾರ ಪಡೆದು ಮುಕ್ತಿ ಪಡೆಯುವುದು ಒಂದೆಡೆಯಾದರೆ, ಶಿವನಿಂದ ಪಡೆಯುವ ವರವು ಇನ್ನೊಂದೆಡೆ. ಇದು ದಿನನಿತ್ಯದ ಜನರ ಸೌಕರ್ಯಕ್ಕೆ ಅನುಕೂಲವಾಗುವಂತಹ ಸಮಾಜ ಕಾರ್ಯವೇ ಆಗಿದೆ. ಅಂದಿನ ಸಾಮಾಜಿಕ ಆಂದೋಲನದ ಮುಖ್ಯ ಭಾಗ ಇದೇ ಆಗಿತ್ತು. ಹೀಗೆ ಇವುಗಳನ್ನು ಶಿವನಿಗೆ ಅರ್ಪಿಸಿದ ಮಹಾನ್ ಶರಣನಾಗಿ ಜೇಡರದಾಸಿಮಯ್ಯ ಪ್ರಮುಖನಾಗುತ್ತಾರೆ. ಜೇಡರದಾಸಿಮಯ್ಯನ ವಿಷಯಕ್ಕೆ ಬಂದರೆ ನಂತರದ ಶರಣರು, ವಚನಕಾರರು ಈತನ ಚರಿತ್ರೆಯನ್ನು ಹಾಡಿ ಹೋಗಳಿದುದು ಕಂಡುಬರುತ್ತದೆ. ಇಲ್ಲಿ ಇತರ "ಶರಣರ ವಚನಗಳನ್ನು ಗಮನಿಸಿದಾಗ; ೧. ದಾಸಿಮಯ್ಯನ ವ್ಯಕ್ತಿತ್ವದ ಜೀವಾಳ ಭಕ್ತಿ; ಆತ ಅದನ್ನು ಅಘಟಿತ ಘಟನೆಯ ಮೂಲಕ ಪ್ರಕಟಿಸಿದ. ೨. ದಾಸಿಮಯ್ಯನದು ಮೂಲತಃ ಕೀಳುಕುಲ; ಆತನು ಅದನ್ನು ಭಕ್ತಿಯ ಮೂಲಕ ಕಳಚಿಕೊಂಡ"[೪೫] ಎಂಬ ಗ್ರಹಿಕೆ ಪ್ರಧಾನವೆನಿಸುತ್ತದೆ.

**೩. ಕಾವ್ಯಗಳು**

ಭಾರತೀಯ ಸಂದರ್ಭದಲ್ಲಿ ಮಹಾಕಾವ್ಯಗಳ ವಸ್ತುವು ರಾಜನೋ, ದೈವೀಪುರುಷನೋ ಆಗಿರುವುದು ಸಾಮಾನ್ಯ. ಆದರೆ ೧೨ನೇ ಶತಮಾನದ ನಂತರ ಅದರ ವಸ್ತುಸ್ಥಿತಿ ಬದಲಾಗತೊಡಗಿತು. "ಜಗತ್ತಿನ ಅತ್ಯಂತ ಪ್ರಾಚೀನ ಧರ್ಮಗಳಲ್ಲಿ ಒಂದಾದ ಭಾರತದ ಒಳಗೂ ಹೊರಗೂ ವ್ಯಾಪಿಸಿದ್ದ ಶೈವಧರ್ಮದ ಶಾಖೆಯು ಕ್ರಿಸ್ತಪೂರ್ವದ ಅನೇಕ ಶತಮಾನಗಳಿಂದ ದಕ್ಷಿಣ ಭಾರತದ ಜನ ಜೀವನದಲ್ಲಿ ಹಾಸುಹೊಕ್ಕಾಗಿ ಬೆರೆತು, ಅವರ ಬಾಳನ್ನು ಹಸನುಗೊಳಿಸುತ್ತ ಬಂದಿತು. ಚೋಳ, ಚೇರ, ಪಾಂಡ್ಯ ಮೊದಲಾದ ಅನೇಕ ರಾಜಮನೆತನಗಳವರು ಅದನ್ನು ಅಂಗೀಕರಿಸಿ, ಪ್ರಚಾರಗೊಳಿಸಿ ಉಚ್ಚ್ರಾಯಸ್ಥಿತಿಗೆ ತಂದಿದ್ದರು".[೪೬] ಜೈನಧರ್ಮ, ಬೌದ್ಧ ಧರ್ಮಗಳು ಪ್ರಾಬಲ್ಯ ಹೊಂದಿದ ನಂತರ ಆ ಶೈವಧರ್ಮದ ಪ್ರಭಾವ ಕುಂದುತ್ತಾ ಬಂದಿತು. ಅಂಥಾ ಸಂದರ್ಭದಲ್ಲಿ ಅದನ್ನು ಪುನರುತ್ಥಾನ ಮಾಡಿದವರು ತಮಿಳುನಾಡಿನ ೬೩ಜನ ಶೈವಸಂತರು. ಇವರ ಕುರಿತಾದ ಚರಿತ್ರೆ ಕಾವ್ಯಗಳಲ್ಲಿಯೂ ಕಂಡುಬರುತ್ತದೆ. ಇವರ ಸಾಲಿಗೆ ತದನಂತರದಲ್ಲಿ ನಮ್ಮ ಕರ್ನಾಟಕದ ವೀರಶೈವ ಶರಣರು ಸೇರಿಕೊಳ್ಳುವುದು ಚರಿತ್ರೆಯ ಒಂದಂಶ. ವೀರಶೈವ

ಶರಣರು ಅವರ ಹಾದಿಯಲ್ಲಿಯೇ ನಡೆದು, ನಿಷ್ಠೆ, ಪ್ರಾಮಾಣಿಕತೆ, ಅನುಭಾವಿಕತೆಗಳ ಮೂಲಕ ಜನರ ಮೇಲೆ ಪ್ರಭಾವ ಬೀರುತ್ತಾ ಸಾಮಾಜಿಕ ನಾಯಕರಾದುದು ಕಂಡುಬರುತ್ತದೆ. ಜನರೇ ಇವರನ್ನು ದೈವತ್ವಕ್ಕೇರಿಸುವ ಪ್ರಯತ್ನವನ್ನು ಮಾಡಿದರು ಎನ್ನುವುದು ಒಂದೆಡೆಯಾದರೆ, ವೀರಶೈವ ಮತ ಪ್ರಚಾರದ ಅನಿವಾರ್ಯತೆಯನ್ನು, ಅದರ ಪ್ರಬುದ್ಧವಾದ ವಿಚಾರಗಳನ್ನು ತಿಳಿಸುವ ಹಂಬಲದಿಂದ ವೀರಶೈವ ಪುರಾಣಗಳು ಹುಟ್ಟಿಕೊಂಡವು, ಅದರ ನಾಯಕರು ನಮ್ಮ ವೀರಶೈವ ಶರಣರು ಎನ್ನುವುದು ಮತ್ತೊಂದು ಸಾಧ್ಯತೆ. ಕಾವ್ಯಗಳು ಇಡಿಯಾಗಿ ಒಬ್ಬ ವ್ಯಕ್ತಿಯನ್ನು ಆಧರಿಸಿಯೂ ರಚಿತವಾಗಿವೆ. ಅಂತೆಯೇ ಒಬ್ಬ ಶರಣನ ಜೀವನವನ್ನು ನಿರೂಪಿಸುವ ಸಂದರ್ಭದಲ್ಲಿಯೂ ಇತರ ಶಿವಶರಣರ ಜೀವನ ಮತ್ತು ಸಾಧನೆಗಳನ್ನು ಅವಶ್ಯಕ ಸನ್ನಿವೇಶಗಳಿಗೆ ತಕ್ಕಂತೆ ಬಳಸಿಕೊಂಡು ರಚಿಸಿದ್ದೂ ಇದೆ. ವೀರಶೈವ ಧರ್ಮದ ಪ್ರಭಾವ ಕೊಂಚ ಮಟ್ಟಿಗೆ ಕಳೆಗುಂದುತ್ತಿರುವ ಸಂದರ್ಭದಲ್ಲಿ ಈ ರೀತಿಯ ಕೃತಿಗಳು ಹೇರಳವಾಗಿ ರಚನೆಯಾಗುತ್ತಾ ಬಂದವು ಎಂದರೆ ತಪ್ಪಾಗಲಾರದು ವಚನಕಾರರು "ಬೇರೆ ಬೇರೆ ಪಂಗಡಗಳಿಗೆ ಸೇರಿದವರು, ಸಮಾಜದಲ್ಲಿ ನಾನಾ ಮಟ್ಟದಲ್ಲಿ ಸ್ಥಾನಮಾನಗಳನ್ನು ಹೊಂದಿದವರಾಗಿದ್ದರು. ಅವರ ಗುಂಪಿನಲ್ಲಿ ಪುರುಷರೂ ಇದ್ದರು. ಸನ್ಯಾಸಿಗಳೂ ಇದ್ದರು. ಅನುಪಮ ಶಿವಭಕ್ತಿ ಶಿವಜ್ಞಾನಗಳೂ ಶಿವನಲ್ಲೂ ಶಿವನ ಭಕ್ತರಲ್ಲೂ ನಿಷ್ಠಾಯುಕ್ತ ಸೇವೆಯು, ಪರಧರ್ಮಗಳನ್ನು ಮೂಲೋತ್ಪಾಟನೆಗೆಯ್ವ ಉಜ್ವಲ ಅಭಿಮಾನವು ಬಹುವಾಗಿ ಅವರ ಪ್ರಧಾನ ಗುಣಗಳಾಗಿದ್ದವು. ಅವರು ಕೈಗೊಂಡ ವ್ರತಗಳು, ಆರಾಧನಾ ವಿಧಾನಗಳೂ ವೈವಿಧ್ಯಪೂರ್ಣವಾಗಿದ್ದು, ಪರಮಾತ್ಮನ ಸಾಕ್ಷಾತ್ಕಾರದ ಗುರಿಯನ್ನು ಮುಟ್ಟುವ ಆತ್ಮನ ಪ್ರಗತಿಯ ವಿವಿಧ ಪಥಗಳಾಗಿರುತ್ತಿದ್ದವು"[೬೭] ಎಂಬ ಮೀನಾಕ್ಷಿ ಸುಂದರಂ ಅವರ ಮಾತು ಅರವತ್ಮೂರು ಶೈವಯತಿಗಳ ಬಗೆಗಿನದಾದರೂ, ಇದೇ ಮಾತು ನಮ್ಮ ಕರ್ನಾಟಕದ ವೀರಶೈವ ಶರಣರ ಬಗೆಗೂ ಅನ್ವಯಿಸುತ್ತದೆ. ಇಂತಹ ಶರಣರ ಅಸಾಮಾನ್ಯ ಶಕ್ತಿಯು ಮುಂದೆ ಜನರ ಮೆಚ್ಚುಗೆಯನ್ನು ಪಡೆಯಿತು. ರಾಜ್ಯದ ರಾಜರ ಮೆಚ್ಚುಗೆಯನ್ನು ಪಡೆಯುವಂತಾಯಿತು. ಅಂತವರ ಚರಿತ್ರೆಯನ್ನು ಶಾಶ್ವತವಾಗಿಸುವ ಸಲುವಾಗಿ ಅನೇಕ ಕಾವ್ಯಗಳು ಪುರಾಣಗಳು ಹುಟ್ಟಿಕೊಂಡವು. ಇಂತಹ ಮಹಾನ್ ವ್ಯಕ್ತಿಗಳ ಕಥೆಯನ್ನು ಓದಿ ಜನರು ಪುಣ್ಯವಂತರಾಗಲಿ ಎನ್ನುವುದು ಒಂದು ಕಾರಣವಾದರೆ, ಮತ್ತೊಂದು ಈ ಮೂಲಕ ವೀರಶೈವ ಧರ್ಮ ಪ್ರಸಾರ ಕಾರ್ಯ ಸುಗಮವಾಗುತಿದ್ದಿತು. ಪ್ರತಿ ಕಾವ್ಯದ ಪ್ರಾರಂಭದಲ್ಲಿಯೊ ಅಥವಾ ಅಂತ್ಯದಲ್ಲಿಯೊ ಈ ಕಾವ್ಯ ಓದಿದವರಿಗೆ ಪುಣ್ಯ ಲಭಿಸುವುದು ಎಂಬ ಕವಿಯ ಅಂತಃಕರಣದ ಮಾತು ವ್ಯಕ್ತವಾದೆ. ಇದು ಬರೆಯುವವನ ಅಳಲೊ ಅಥವಾ ಬರೆಯುವಂತೆ ಪ್ರೇರೇಪಿಸಿದವನ ಅಳಲೊ ಎಂಬ ಪ್ರಶ್ನೆಯು ಮೂಡುತ್ತದೆ.

ನಂತರ ಮೊದಲ ಪ್ರಮುಖ ವೀರಶೈವ ಕವಿಯಾಗಿ ಕಾಣಿಸಿಕೊಳ್ಳುವ ಹರಿಹರನು; ಶಿವ ಶರಣರ ಬದುಕು, ಸಾಹಿತ್ಯಗಳಿಂದ ಸ್ಫೂರ್ತಿ ಪಡೆದಿರುವ ಅವನ ಸಾಹಿತ್ಯವು ಶಿವನನ್ನು ಹಾಗೂ ಶಿವ ಸ್ವರೂಪರೇ ಆದ ಶಿವಶರಣರನ್ನು ಸ್ತುತಿಸಲು ಮಾತ್ರ ಮೀಸಲಾಗಿದೆ. ಸಾಹಿತ್ಯ ಸೃಷ್ಟಿ ಸ್ವಂತಸ್ಸುಖಾಯವಷ್ಟೇ ಅಲ್ಲ, ಜನಮನವನ್ನು ತಿದ್ದಲು, ಜನ ಮನದಲ್ಲಿ ಶಿವಭಕ್ತಿ ಶಿವ ಪ್ರೇಮವೆನ್ನುವ ಬೀಜಾರೋಪಣ ಮಾಡಲು ಎಂಬುದು ಅವನ ಸಿದ್ಧಾಂತ. ಹೀಗಾಗಿ ಅವನು ಸಂಪ್ರದಾಯವನ್ನು ಮುರಿದು ಶಿವಭಕ್ತರ ಕಥೆಯನ್ನು, ಶಿವಶರಣರ ಬದುಕನ್ನು ತಮಿಳುನಾಡಿನ ನಾಯನ್ಮಾರರ ಜೀವನ ನಿಷ್ಠೆಯನ್ನು ಕುರಿತು ಕೃತಿ ರಚನೆ ಮಾಡಿರುವನು. ಪಿಂಡೋತ್ಪತ್ತಿ, ಪುಷ್ಪ ಲಿಂಗಾರ್ಚನೆ, ಹಂಪೆಯರಸ ಇವೇ ಮೊದಲಾದ ಸಂಕೀರ್ಣ ವಿಷಯಕ ರಗಳೆಗಳನ್ನು ಬರೆದಿರುವ ಹರಿಹರ ರಗಳೆಯನ್ನೇ ಛಂದೋಮಾಧ್ಯಮವಾಗಿ ಬಳಸಿದನು"[೪೮] ಎಂಬ ಮಾತು ಅಕ್ಷರಶಃ ಸತ್ಯ.

ಹರಿಹರನ ಶಂಕರದಾಸಿಮಯ್ಯನ ರಗಳೆ, ಪಂಪಾಶತಕ, ರಕ್ಷಾಶತಕ ಕೃತಿಗಳಲ್ಲಿ ದಾಸಿಮಯ್ಯನ ಉಲ್ಲೇಖ ಕಂಡುಬರುತ್ತದೆ. ಆತನ ಕುರಿತ ಸಂಪೂರ್ಣ ಕಥೆ ಇಲ್ಲವಾದರೂ ನಿರ್ಣಾಯಕವೆಂಬಂತೆ ಆತನ ಬಗ್ಗೆ ತಿಳಿಸುವ ರಗಳೆ ಶಂಕರದಾಸಿಮಯ್ಯನ ರಗಳೆ. ಇನ್ನುಳಿದ ಅನೇಕ ಕೃತಿಗಳಲ್ಲಿ ಕೇವಲ ಸಾಂದರ್ಭಿಕವಾಗಿ ಸ್ತೋತ್ರಮಾಡುವ ರೀತಿಯಲ್ಲಿ ಉಲ್ಲೇಖಗಳು ಬಂದು ಹೋಗುತ್ತವೆ. ಹರಿಹರ ಅರವತ್ತಮೂರು ಶೈವರ ಕುರಿತು ರಗಳೆಗಳನ್ನು ಬರೆದಂತೆಯೇ ನಮ್ಮ ಶಿವಶರಣರಾದ ಬಸವಣ್ಣ, ಕೇಶಿರಾಜದಣ್ಣಾಯಕ, ತೆಲುಗು ಬೊಮ್ಮಯ್ಯ, ಬಾಹೂರ ಬೊಮ್ಮಿತಂದೆ, ಮಾರಡಿಗೆ ನಾಚಿತಂದೆ, ರೇವಣಸಿದ್ದೇಶ್ವರ, ಕೋವೂರು ಬೊಮ್ಮಯ್ಯ, ಆದಯ್ಯ, ಅಕ್ಕಮಹಾದೇವಿಯರ ಬಗ್ಗೆಯೂ ರಗಳೆಗಳನ್ನು ಬರೆದಿದ್ದು ಶಂಕರದಾಸಿಮಯ್ಯನ ರಗಳೆಯೂ ಇದರಲ್ಲಿ ಒಂದು. ಶಂಕರದಾಸಿಮಯ್ಯನು ಜೇಡರದಾಸಿಮಯ್ಯನ ಸಮಕಾಲೀನನಾಗಿದ್ದು ಆತನ ಗರ್ವಭಂಗ ಮಾಡಿದ ಪ್ರಸಂಗ ಶಂಕರದಾಸಿಮಯ್ಯನ ರಗಳೆಯಲ್ಲಿ ಚಿತ್ರಿತಗೊಂಡಿದೆ.

ಜೇಡರದಾಸಿಮಯ್ಯನ ಕುರಿತು ದೊರೆಯುವ ಎಲ್ಲಾ ಆಧಾರಗಳಲ್ಲಿ ಕಾಲದ ಮಿತಿಯಿಂದ ಅತಿ ಹೆಚ್ಚು ನಂಬತಕ್ಕ ಹಾಗೂ ಕಾಲದ ದೃಷ್ಟಿಯಿಂದ ಸಮೀಪದ ಕೃತಿಯಾಗಿದ್ದು, ಅಧ್ಯಯನದ ದೃಷ್ಟಿಯಿಂದ ಅಧಿಕೃತವೆಂಬಂತೆ ಪರಿಗಣಿಸಬಹುದಾದ ರಗಳೆ ಕೃತಿ ಇದಾಗಿದೆ. ಪ್ರಧಾನವಾಗಿ ರಗಳೆಯ ಕೇಂದ್ರ ವಸ್ತು ಶಂಕರದಾಸಿಮಯ್ಯ ಮತ್ತು ಶಂಕರದಾಸಿಮಯ್ಯನ ಭಕ್ತಿ ಹಾಗೂ ಮಹತ್ವವನ್ನು ತಿಳಿಸುವುದಾಗಿದೆ. ರಗಳೆಯು

ಅಪ್ರತಿಮ ಪ್ರಭುವಜಾಂಡಕುಳಪ್ರಭು ಸರ್ವದೇವರಾ
ಜಪ್ರಭು ನಿರ್ಮಳ ಪ್ರಭು ನಿರಾವರಣ ಪ್ರಭು ಕೇಳಿ ಭಾಳನೇ

ತ್ರಪ್ರಭು ಹಂಪೆಯಾಳ್ವನೊಲವಿಂ ಮಿ ಗೆ ಶಂಕರದಾಸಿಮಯ್ಯನಂ
ವಿಪ್ರಕುಲಾರ್ಕನಂ ಮೆರೆದನಾನಜಂಗಮ ಮಂಗಳಾಸ್ಪದಂ॥[೪೯]

ಎಂದು ಪ್ರಾರಂಭವಾಗುತ್ತದೆ. ಕಂದಶಿಲೆ ಎಂಬ ಊರಿನಲ್ಲಿ ಒಬ್ಬ ವಿಪ್ರ ಗೋವಿಂದ ದೇವ ಎಂಬ ಹೆಸರಿನವ ಇದ್ದ. ಆತ ವೈರಾಗ್ಯಹೊಂದಿ ವಾರಣಾಸಿಗೆ ಹೋಗುವುದಾಗಿ ಮನದಲ್ಲಿ ನೆನೆದು ಕಂದಶಿಲೆಗೆ ಗಾವುದ ದೂರದಲ್ಲಿರುವ ನವಿಲೆಯನ್ನು ಪ್ರವೇಶಿಸಲು.

ಜಡೆಯಶಂಕರ ದೇವನೊಲಿದು ತಾನೆಲೆಸಿರ್ಪ
ನವಿಲೆಯೊಳು ಪದಪಿಂದೆ ಸ್ಥಾಮಂ ಮಾಡಿ
ಶಿವನಿಲಯಮಂ ಪೊಕ್ಕ ನೊಲವಿಂದದಂ ನೋಡಿ
ರಂಗಮಂಟಪದೊಳಗೆ ಒಂದು ಕುಳಿರ್ದಿರಲು[೫೦]

ಅಲ್ಲಿನ ಪೂಜಾ ವೈಭವ, ಸಕಲ ಗೀತಾ ವಾದ್ಯಗಳ ನಾದ, ನೃತ್ಯ ಶರಣ ಸಂಗತಿಗಳನ್ನೆಲ್ಲ ಕಂಡು

ಇಂತೆಸೆವ ಪರಮನುತ್ಸಾಹ ಸಂಕುಳವಲ್ಲಿ
ಕಂತುಮದವೈರಿಯ ನಿರಂತ ಸಂಪದವಲ್ಲಿ
ತನ್ನಯ ಮನಕ್ಕೆ ಸುಖಮಂ ಕೊಡುತ್ತಿರಬಂದು
ಇನ್ನೇಕೆ ವಾರಣಾಸಿಗೆ ಪಯಣವೆನಗೆಂದು[೫೧]

ಗೆಳೆಯ ಶಂಕರದೇವರ ದರ್ಶನ ಮಾಡಿ ಅಲ್ಲಿಯೇ ಬೀಡು ಬಿಟ್ಟನು. ಅಲ್ಲಿಯೇ ಧ್ಯಾನಾಸಕ್ತನಾಗಿ ಶಿವನನ್ನು ಒಲಿಸಿಕೊಂಡು ಆತನಿಂದ ಹಣೆಯ ನೊಸಲ್ಗಣ್ಣನ್ನು ಪಡೆದು ಶಂಕರದಾಸಿಮಯ್ಯನಾಗಿ ದೈವಜ್ಞೆಯಂತೆ ನಡೆದನು. ಆತನ ಕೀರ್ತಿ ಲೋಕ ಪ್ರಸಿದ್ಧಿಯಾಗಲು, ಇತ್ತ ಜೇಡರದಾಸಿಮಯ್ಯನು ಮುದನೂರಿನಲ್ಲಿ ತವನಿಧಿಯನ್ನು ಪಡೆದ ಕೀರ್ತಿ ಹರಡುತ್ತಿತ್ತು. ಶಂಕರದಾಸಿಮಯ್ಯನ ಹರಪ್ರತಾಪ ರೂಪವು ಹೆಸರುಗೊಂಡು ನವಿಲೆಯಲ್ಲಿ ಸಕಲ ಸುಖದಿಂದ ಇರುತ್ತಿದ್ದನು.

"ಮುದನೂರೊಳು ಜೇಡರ ದಾಸಿಮಯ್ಯಂ ರಾಮನಾಥ ಪ್ರಸಾದ ಸಗರ್ವ ಹೃದಯಂ ಶಿವನಿಂ ತವನಿಧಿಯಂ ಪಡೆದೊಂದು ದಿವಸಂ ಶಿವನಂತೆ ಕೊಡುವವರು ಎನ್ನಂತೆ ಪಡೆದವರಿಲ್ಲೆಂಬ ಗರ್ವಂ ತನ್ನ ಮನದೊಳು ಹೊಳೆಯೆ"[೫೨] ಶಿವನು ಆ ಗರ್ವವನ್ನು ತಿಳಿಯಲು ಶಂಕರದಾಸಿಮಯ್ಯನ ಕನಸಿನಲ್ಲಿ ಬಂದು "ಮಗನೇ ನೀನು ಇದ್ದೆಡೆಯಲ್ಲೇ ಇರದೆ ಸಮಸ್ತ ಶಿವಪುರಗಳನ್ನು ಹೊಕ್ಕು, ದಿವ್ಯ ಸ್ಥಾನಗಳನ್ನು ಕಂಡು ಸದ್ಭಕ್ತರನ್ನು ಸಂದರ್ಶಿಸಿ ಸಾಮರ್ಥ್ಯವನ್ನು ತೋರಿ ಪ್ರತಾಪವನ್ನು ಬೀರಿ ಮರಳಿ ಬಾ" ಎಂದು ಅಪ್ಪಣೆ ಮಾಡಿದನು.

ಶಂಕರದಾಸಿಮಯ್ಯನ ಗೆಳೆಯ ಶಂಕರನನ್ನು ಬೀಳ್ಕೊಂಡು, ಪತ್ನಿ ಶಿವದಾಸಿ ಹಾಗೂ ಶಿಷ್ಯ ವಕ್ತ್ರಪಾದನನ್ನು ಕರೆದುಕೊಂಡು, ಗುಂಜಾದಿ ವಿಷಯತ್ರಯವನ್ನು ತಲೆ ಮೇಲಿಟ್ಟುಕೊಂಡು ನಡೆದನು.

ಜೇಡರದಾಸಿಮಯ್ಯ ಗರ್ವ ಪಡುತ್ತಿರಲು "ಶಂಕರದಾಸಿಮಯ್ಯಂ ಪಶ್ಚಿಮಾಭಿಮುಖವಾಗಿ ನಡೆತರುತಂ ನೋಡಿದರ್ಗೆ ನವ್ಯಸಂಪದ ಮನೀವುತಂ ನುಡಿಸಿದರ್ಗೆ ಧರಣೀಶ್ವರತ್ವಮಂ ಕರುಣಿಸುತಂ, ಮೆಟ್ಟಿದ ಪ್ರಾಣಿಗಳಂ ಸಗ್ಗಕ್ಕೆ ಕಳುಪುತ್ತಂ ಮುಟ್ಟಿದರಂ ಮುಕ್ತಿ ಪಥಕ್ಕೆ ಸಲಿಸುತ್ತಂ ಕೆಲವೆಡೆಗೆ ಪಲವೂರ್ಗಳಂ ಕಳಿದು ದಾಸನ ಮನದಿ ಗರ್ವಂ ಸಡಿಲ್ಚಿ ತವನಿಧಿಯ ಪೆಚ್ಚಿಸಲೆಂದು ಶಿವಭಕ್ತಿ ಭೂಷಣರೆನಿಪ ಪುರಾತನರ ವೃದ್ಧಾಚಾರ ಭಕ್ತಿರಸಂ ಮಡುಗಟ್ಟಿದಂತಿರ್ದ ಮುದನೂರಂ ಪೊಗುತಪ್ಪಾಗಳು"[೫೩] ಎಂದು ಶಂಕರದಾಸಿಮಯ್ಯ ಮುದನೂರಿಗೆ ಹೋದ ಕಾರಣವನ್ನು ಈ ಕಾವ್ಯ ತಿಳಿಸುತ್ತದೆ.

ಮಾಗಧ, ಮಾಳವ, ವಂಗ, ಕಳಿಂಗ, ಗೌಳ, ಲಾಳ, ತಿಗುಳ, ತೆಲುಂಗ, ಗುರ್ಜರ, ಹಮ್ಮೀರ, ಕರ್ನಾಟಕದ ಕಲ್ಯಾಣ ಮೊದಲಾದ ಪ್ರದೇಶಗಳನ್ನು ಭೇಟಿ ಮಾಡಿ ಮುಂದುವರೆಯುತ್ತಿರಲು ಜೇಡರದಾಸಿಮಯ್ಯನಿಗೆ ಈಶ್ವರನು ನೀಡಿದ ತವನಿಧಿಯ ಬಗ್ಗೆ ತಿಳಿದು ಸಂಭ್ರಮವನ್ನು ಪಡುತ್ತಾ ಶಂಕರದಾಸಿಮಯ್ಯ ಮುದನೂರನ್ನು ಹೊಕ್ಕನು. ರಾಮನಾಥ ಲಿಂಗಕ್ಕೆ ನಮಸ್ಕರಿಸಿ ದೇವಾಲಯದ ಬಳಿಯೇ ಬಿಡಾರ ಹೂಡಿ ಬೀಡುಬಿಟ್ಟು ಆಯಾಸ ಕಳೆಯುತ್ತಿದ್ದನು. ಈ ವಿಷಯ ಕೇಳಿದ ಜೇಡರದಾಸಿಮಯ್ಯನು ಶಂಕರದಾಸಿಮಯ್ಯನ ಬಳಿಬಂದು ನಮಸ್ಕರಿಸಿ 'ರವಿಯ ಹತ್ತಿರೆ ಚಂದ್ರಮಂ ಕುಳ್ಳಿರ್ಪಂತೆ ಕೆಲದೊಳು ಕುಳಿತನು'. ಅಲ್ಲಿ ನಡೆಯುತ್ತಿದ್ದ ಶಿವಕಾರುಣ್ಯ ಗೋಷ್ಠಿಯನ್ನು (ಶಿವ ಕಥಾಗೋಷ್ಠಿ) ಕಂಡು ತಾನೂ ಪಾಲ್ಗೊಂಡು ಹರ್ಷ ಚಕಿತನಾಗಿ ಹೊರಡಲನುವಾದನು. ಅದೇ ಸಮಯದಲ್ಲಿ ಶಂಕರದಾಸಿಮಯ್ಯನ ಹೆಂಡತಿ ಧಾನ್ಯಕ್ಕಾಗಿ ಶಿಷ್ಯ ವಕ್ತ್ರಪಾದನನ್ನು ಕಳುಹಿಸಲು, ಜೇಡರದಾಸಿಮಯ್ಯ ಇದನ್ನು ಕೇಳಿ "ಸಗರ್ವ ಹೃದಯಂ ತವನಿಧಿಯುಟೆಂಬ ಗರ್ವದಿಂ ಮುಂದುಗಾಣದೆ ಮೇಲನರಿಯದೆ ಶಿವಭಕ್ತರು ಪಿರಿಯರ್ಗೆ ಪರಿಯರುಂಟೆಂದರಿಯದೆ ವಿಚಾರಿಸದೆ ಶೀತಕರಂಗೆ ತಂಪನೀವಂತೆ ಭಾಸ್ಕರಂಗೆ ಬೆಳಗಂ ಕೊಡುವಂತೆ ಅಗ್ನಿಗೆ ಉಷ್ಣತೆಯಂ ಕೊಡುವೆಂಬಂತೆ ನಿಂದಿರ್ದ ಕೈ ಮುಗಿದು ದೇವಾ ದೇವರೋಗರಕ್ಕೆ ಧಾನ್ಯಮಂ ಪುಲೇಕೇ? ಎನ್ನ ಮನೆಯೊಳು ಸುಕುಮಾರಕ ಧಾನ್ಯಮುಂಟು, ಇಲ್ಲಿ ನೀವಿರ್ಪನ್ನೆವರಂ ಧಾನ್ಯಕ್ಕೆ ಪೋಗಲಾಗದವ ನಿರೋದಂ ಬೇಡ, ಹತ್ತಿಪ್ಪತ್ತು ಸಾವಿರ ನೆಲ್ಲ ಹೇರಂ ಕಳುಹುವೆಂ"[೫೪] ಎಂದು ಹೇಳುತ್ತಾ ನೀವಿರುವವರೆಗೂ ಧಾನ್ಯಕ್ಕೆ ಎಲ್ಲಿಯೂ ಹೋಗುವುದು ಬೇಡ ಎಂದನು.

ಇದರಿಂದ ಆಕ್ಷೇಪಗೊಂಡ ಶಂಕರದಾಸಿಮಯ್ಯ ಮುಗುಳು ನಕ್ಕು 'ಆಗಲಿ ಬಡ ಭಕ್ತರಾದ ನಮಗೆ ನೆಲ್ಲೆಲ್ಲಿಯದು? ರುದ್ರನ ಮಕ್ಕಳಿಗೆ ಸಿರಿಯೆಲ್ಲಿಯದು ದಾಸ?' ಎನುತ ಬಿಡಾರದ ಮನೆಯ ಮುಂದಣ ತಿಪ್ಪೆಯನ್ನು ಕೆದರಿಸಿದ. ಅಲ್ಲಿ ಹೊನ್ನನ್ನು ತೋರಿಸಿ ನಿನಗೆ ಬೇಕಾದಷ್ಟು ತೆಗೆದುಕೋ ಎಂದು ಅಣಕವಾಡಿ 'ನಿನಗೆ ತವನಿಧಿಯನ್ನು ಕೊಟ್ಟ ದೇವರು ತಾನೇ ಹಿಂಪಡೆಯುವನೆಂದು, ನೀನಿನ್ನು ಹೋಗು' ಎಂದು ಗದರಿದನು. ಇದರಿಂದ ಭಯಭೀತನಾದ ದಾಸಿಮಯ್ಯ ಮನೆಗೆ ಬಂದು ನೋಡಲು. ಮನೆಯ ತವನಿಧಿಯು ಬಯಲಾಯಿತು, ನಡೆದದ್ದನ್ನೆಲ್ಲ ದುಗ್ಗಳೆಗೆ ಹೇಳಲು, ಆಕೆ ನಡೆಯಿರಿ ಎಂದು ಶಂಕರದಾಸಿಮಯ್ಯ ನೊಂದಿಗೆ ಸಲುಗೆ ಸಲ್ಲುವುದೇ? ನಮ್ಮ ಭಕ್ತಿ ಎಷ್ಟು? ನಾವೆಷ್ಟು? ಕ್ಷಮೆಯಾಚಿಸುವ ಎಂದು ಗಂಡನನ್ನು ಕರೆದುಕೊಂಡು ಹೋದಳು.

"ಸ್ವಾಮಿ ಶಿಶುವಿನಲ್ಲಿ ನೀತಿಯಂಟೇ? ಪಶುವಿನಲಿ ಬುದ್ಧಿಯಂಟೇ? ಸತಿಯ ಅಪರಾಧವನ್ನು ಪತಿ ಬೆದಕುವನೇ? ಕೃಪಾ ಸಮುದ್ರನೆನಿಸಿದ ನೀನೇ ಕರುಣೆದೊರು"[೨೫] ಎಂದು ಜೇಡರ ದಾಸಿಮಯ್ಯ ಹಾಗೂ ದುಗ್ಗಳೆಯರು ಶಂಕರದಾಸಿಮಯ್ಯನಲ್ಲಿ ಬೇಡಿಕೊಂಡು ಪಾದಗಳಿಗೆ ನಮಸ್ಕರಿಸಲು, ಶಂಕರದಾಸಿಮಯ್ಯನು ಅವರ ಪ್ರಾಯಶ್ಚಿತಕ್ಕೆ ಕರಗಿ, ತವನಿಧಿಯು ಮರುಕಳಿಸಲಿ ಎಂದು ಹೇಳಿ, 'ಇನ್ನು ರಾಮನಾಥನು ಕೊಟ್ಟ ಅಪಾರ ತವನಿಧಿಯನ್ನು ಒಳಗಿನಿಂದ ಎತ್ತಿ ತರುವ ಆಯಾಸವನ್ನು ಬಿಡಿ' ಇದು 'ಮೇಲುಬಾಯಿಂದುಕ್ಕಿ ಬರಲೆಂದು ವರವಂ'(ತವನಿಧಿ ಮೇಲಿಂದ ಉಕ್ಕಿ ಹರಿಯಲಿ) ನೀಡಿ ಆ ದಂಪತಿಗಳನ್ನು ಕಳುಹಿಸಿದನು. ಮನೆಗೆ ಬಂದು ನೋಡಲು ಉಕ್ಕಿ ಪುಟಿಯುತ್ತಿರುವ ತವನಿಧಿಯನ್ನು ಕಂಡು ಆ ದಂಪತಿಗಳು ಸಂತಸಗೊಂಡರು. ತವನಿಧಿ ಹೆಚ್ಚಾದಂತೆ ಭಕ್ತರೂ ಹೆಚ್ಚಾದರು. ನಿತ್ಯಸುಖದಿಂದ ಬದುಕುತ್ತಿದ್ದರು. ಹೀಗೆ ಹರಿಹರನ ಶಂಕರದಾಸಿಮಯ್ಯನ ರಗಳೆಯಲ್ಲಿ ತವನಿಧಿ ಬಯಲಾದ ಕಥೆ ವ್ಯಕ್ತಗೊಂಡಿದೆ. ಜೇಡರದಾಸಿಮಯ್ಯನ ಬಗ್ಗೆ ದೊರೆಯುವ ಆಕರಗಳಲ್ಲಿ ಮೊದಲ ಕೃತಿಯಾಗಿ ಇದು ಮಹತ್ವವನ್ನು ಪಡೆದಿದೆ.

**ಬಸವಪುರಾಣ**

ಬಸವಪುರಾಣ ಎಂದೊಡನೆ ಸಾಮಾನ್ಯವಾಗಿ ಪಾಲ್ಕುರಿಕೆ ಸೋಮನಾಥ ಹಾಗೂ ಭೀಮಕವಿ ಇಬ್ಬರೂ ಪ್ರಮುಖರೆನಿಸುತ್ತಾರೆ. ಪಾಲ್ಕುರಿಕೆ ಸೋಮನಾಥ ತೆಲುಗಿನಲ್ಲಿ ಬರೆದ ಬಸವಪುರಾಣವನ್ನು ಭೀಮಕವಿ ಕನ್ನಡ ಭಾಷೆಗೆ ಒಗ್ಗಿಸಿ ಅನುವಾದಿಸಿದನು. ತೆಲುಗು ಹಾಗೂ ಕನ್ನಡ ಬಸವ ಪುರಾಣಗಳ ಕಥಾವಸ್ತು ಪಾತ್ರಗಳು ಮಾತ್ರ ಒಂದೇ. ಆದರೆ ಭೀಮಕವಿ ಮೂಲಕ್ಕೆ ಮತ್ತಷ್ಟು ಶರಣರ ಕಥೆಗಳನ್ನು ಸೇರಿಸಿ ರಚಿಸಿದ್ದಾನೆ.

"ವೀರಶೈವ ಪುರಾಣ ರಚನಾ ಪರಂಪರೆಗೆ ಮಾರ್ಗಕಾರನು ಶರಣ ಬಸವಣ್ಣನ ಬದುಕನ್ನು ಮೊದಲಿಗೆ ಪೌರಾಣಿಕ ನೆಲೆಯಲ್ಲಿ ವಿಜೃಂಭಿಸಿದವನೂ ಆದ ಆಂಧ್ರದ ಪಾಲ್ಕುರಿಕೆ ಸೋಮನಾಥನು ಆಂಧ್ರದಲ್ಲಿ ನಡೆದ ವೀರಶೈವ ಚಳುವಳಿಯಲ್ಲಿ ನಾಯಕ ಸ್ಥಾನವನ್ನು ವಹಿಸಿದನು. ಇವನ ಕೃತಿಯನ್ನು ಕನ್ನಡಕ್ಕೆ ರೂಪಾಂತರಿಸಿ ಹೇಳುವುದರ ಮೂಲಕ ಭೀಮಕವಿ (೧೩೬೯) ತನ್ನ ಮುಂದಣ ವೀರಶೈವ ಕವಿಗಳಿಗೆ ಪುರಾಣ ರಚನಾ ಪದ್ಧತಿಗೆ ಗಟ್ಟಿಯಾದ ಬುನಾದಿ ಹಾಕಿಕೊಟ್ಟನು. ಬಸವಪುರಾಣದ ರಚನಾ ವಿನ್ಯಾಸ ಗಮನಾರ್ಹವಾದುದು. ಬಸವಣ್ಣನ ಜೀವಿತ ವೃತ್ತಾಂತ ಮಾತ್ರವೇ ಇಲ್ಲಿ ಪ್ರಧಾನವಲ್ಲ. ಬಸವಪೂರ್ವದ, ಬಸವ ಸಮಕಾಲೀನ ಶಿವಶರಣರ, ಶಿವಭಕ್ತರ, ತಮಿಳುನಾಡಿನ ನಾಯನ್ಮಾರರ ಕಥೆಯೂ ಕೂಡ ಪ್ರಧಾನವಾಗುತ್ತದೆ. ಈ ಭಕ್ತರ ಕಥೆಗಳು ಮುತ್ತುಗಳಾದರೆ ಅವುಗಳನ್ನು ಒಂದೆಡೆ ಭದ್ರವಾಗಿ ಬಂಧಿಸುವ ಸೂತ್ರವಾಗಿದೆ. ಬಸವನ ಕಥೆ ಮೂಲಕಥೆಗೆ ಪೋಷಕವಾಗಿ ನೂರಾರು ಉಪಕಥೆಗಳು ಬರುತ್ತವೆ."[೫೬] ಅಂತಹ ಕಥೆಗಳಲ್ಲಿ ಜೇಡರದಾಸಿಮಯ್ಯ, ದೇವರದಾಸಿಮಯ್ಯ, ಶಂಕರದಾಸಿಮಯ್ಯನ ಕಥೆಗಳು ಸೇರಿಕೊಳ್ಳುತ್ತವೆ. ಇದು ಒಂದು ವರ್ಣಕ ಕಾವ್ಯವಾಗಿದ್ದು ಬಸವಪುರಾಣ, 'ಪುರಾಣ' ಎಂಬ ಹೆಸರನ್ನು ಹೊತ್ತ ಮೊದಲ ವೀರಶೈವ ಕೃತಿಯಾಗಿದೆ.

ಎರಡು ಬಸವಪುರಾಣಗಳನ್ನು ಒಂದೆಡೆ ಇಟ್ಟು ನೋಡಿದರೆ ಪಾಲ್ಕುರಿಕೆ ಸೋಮನಾಥನ ಕೃತಿಯಲ್ಲಿ ಆಶ್ವಾಸಗಳಲ್ಲಿ ವ್ಯಕ್ತವಾದ ವಸ್ತು, ಭೀಮಕವಿಯಲ್ಲಿ ಸಂಧಿಗಳಲ್ಲಿ ನಿರೂಪಿಸಲ್ಪಟ್ಟಿದೆ. 'ಪಾಲ್ಕುರಿಕೆ ಸೋಮನಾಥನಲ್ಲಿ ನಾಲ್ಕು ಐದು ಆರನೇ ಆಶ್ವಾಸಗಳಲ್ಲಿ ಶಂಕರದಾಸಿಮಯ್ಯ, ದೇವರದಾಸಿಮಯ್ಯ ಹಾಗೂ ದುಗ್ಗಳೆಯ ಕಥೆಗಳು ಬರುತ್ತವೆ. ಭೀಮಕವಿಯ ಬಸವಪುರಾಣವೂ ಇದಕ್ಕೆ ಹೊರತಾಗಿಲ್ಲ'. ಎಂಬ ಡಾ. ಶ್ರೀಕಂಠಶಾಸ್ತ್ರಿಯವರ ಮಾತುಗಳನ್ನು ಇಲ್ಲಿ ಅಲ್ಲಗಳೆಯು ವಂತಿಲ್ಲ. (ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ ಭಿನ್ನರೆಂಬ ವ್ಯತ್ಯಾಸವನ್ನು ಇವರು ಒಪ್ಪಿರುವುದಿಲ್ಲ) ಈ ಲೆಕ್ಕದಲ್ಲಿ ನೋಡಿದರೆ ಭೀಮಕವಿಯಲ್ಲಿ ಬಸವಪುರಾಣದ ೫೦ನೇ ಸಂಧಿಯಲ್ಲಿ ದೇವರದಾಸಿಮಯ್ಯನ ಕಥೆ ಬರುತ್ತದೆ.

ಪಾಲ್ಕುರಿಕೆ ಸೋಮನಾಥನ ಬಸವಪುರಾಣದ ನಾಲ್ಕನೆ ಆಶ್ವಾಸದಲ್ಲಿ ಜೇಡರದಾಸಿಮಯ್ಯ ಹಾಗೂ ಶಂಕರ ದಾಸಿಮಯ್ಯನ ಕಥೆಯಿದೆ. 'ಜಡೆಯ ಶಂಕರ ಮಹಾ ಸ್ಥಾನವರರಲಿ ಕೀರ್ತಿತ ಶರಣನು ಶಂಕರದಾಸಿ' ಎಂಬ ಉದ್ಗಾರದಿಂದ ಕಥೆಯು ಆರಂಭವಾಗುತ್ತದೆ. ಶಂಕರ ದಾಸಿಮಯ್ಯನು ತನ್ನ ಶಕ್ತಿ, ಲೀಲೆಗಳನ್ನು ತೋರುತ್ತಾ ಊರೂರು ಅಲೆಯುತ್ತಾ ನಶ್ವರ ಲೀಲೆಯಿಂದ ಪ್ರಚ್ಛನ್ನ ವೇಷವೊಂದರಲ್ಲಿ ತನ್ನ ಸಿಂಪಿಗ ವೃತ್ತಿಯನ್ನು(ಹೊಲಿಗೆ ಕಾಯಕ) ಬಳಸಿಕೊಂಡು ಕಂತೆ ಬೊಂತೆಗಳನ್ನು ಹೊಲಿಯುತ್ತಾ ನಡೆಯುತ್ತಿರುತ್ತಾನೆ. ಈತ ತನ್ನ ಕಾಯಕದಿಂದ ಬಂದ ಐದು ಮಾನಗಳಿಂದ ಜಂಗಮ ಕೋಟಿಗೆ ಸಮುಚಿತಾರ್ಚನೆ(ದಾಸೋಹ) ಮಾಡುತ್ತಿರುತ್ತಾನೆ.

ಈತನಿದ್ದಲ್ಲಿಗೆ ಜೇಡರದಾಸಿಮಯ್ಯ ಬಂದು 'ಸಂತಸ ಮನದಿ ತುಳುಕಾಡಲು ಮೊಕ್ಕಿ ಒಂದಿಷ್ಟು ಸುಖಿಗೊಷ್ಠಿಯಲ್ಲಿದ್ದು' ಹೊರಡುವಾಗ ಇಂಥ ಲಿಂಗವಂತನಲ್ಲಿ ಸ್ವಲ್ಪವೂ ಧಾನ್ಯವಿಲ್ಲವೆಂದು ಬೇಸರಗೊಂಡು ದುಗ್ಗಳೆಗೆ ಹೇಳಿ ಕನಿಕರದಿಂದ ಶಂಕರದಾಸಿಮಯ್ಯನಿಗೆ ಚಿಕ್ಕಗೋಡೆಯ ಧಾನ್ಯ ಕಳಿಸೆನಲು ಪತಿಯ ಆಜ್ಞೆಯಂತೆ ಆಕೆ ಕಳುಹಿಸುತ್ತಾಳೆ. ಶಂಕರದಾಸಿಮಯ್ಯನು ಅನ್ಯ ಮನಸ್ಸಿನಿಂದ 'ಧಾನ್ಯಕ್ಕೆ ಮುನ್ನಿತ ಬಟ್ಟೆಯ ನೆಯ್ದು, ಇಂದೇನು ಕೇಳ್ವನೊ ಸಾಧ್ಯವೆ ನಮಗೆ?. ನೆನೆಸಿಕೊಂಡಿದ್ದ ಕಳಿಸಿದ ಸಾಲದೇನು ಕೊಡಲಿಕ್ಕೆ ತನ್ನಲ್ಲಿ ಏನಿಹುದು' ಎನ್ನುತಾ ಧಾನ್ಯವನ್ನು ಹಿಡಿಯಲ್ಲಿ ಹಿಸುಕಿದನು ಆಗ ಅಲ್ಲಿನ ಧಾನ್ಯವೆಲ್ಲ ಲಯಿಸಿ, ದಾಸಿಮಯ್ಯನ ಮನೆಯ ತವನಿಧಿಯು ಲಯಿಸಿತು. ನಂತರ ದುಗ್ಗಳೆ ಶಂಕರದಾಸಿಮಯ್ಯನ ಮಹಿಮೆಯನ್ನು ಹೊಗಳಲು ಜೇಡರ ದಾಸಿಮಯ್ಯನಿಗೆ ತನ್ನ ಅಹಾಂಕಾರದ ಅರಿವಾಗಿ ಶಂಕರದಾಸಿಮಯ್ಯನೊಂದಿಗೆ ನಡೆದುಕೊಂಡ ತಪ್ಪಿನ ಅರಿವಾಗುತ್ತದೆ. ದಂಪತಿಗಳು ಶಂಕರದಾಸಿಮಯ್ಯನಲ್ಲಿಗೆ ಬಂದು ಕ್ಷಮೆಯನ್ನು ಕೋರುತ್ತಾರೆ. ತವನಿಧಿ ಮತ್ತೆ ತುಂಬಿ ಮೊದಲಿನಂತಾಯ್ತು. ಇದು ಶಂಕರದಾಸಿಮಯ್ಯ ಅವತಾರಗೊಂಡು ದಾಸಿಮಯ್ಯನ ಅಹಂಕಾರವನ್ನು ಕಳೆದುದರ ಕಥೆ. ಈ ಕಥೆಯು ತವನಿಧಿಯನ್ನು ಪಡೆದ ನಂತರದೆಂಬುದು ಸ್ಪಷ್ಟ. ತವನಿಧಿ ಪಡೆದ ನಂತರ ಶಂಕರದಾಸಿಮಯ್ಯ ಹಾಗೂ ಜೇಡರ ದಾಸಿಮಯ್ಯರು ಭೇಟಿಯಾಗಿರುವುದು ಸ್ಪಷ್ಟವಾಗುತ್ತದೆ. ಬಸವಪುರಾಣದಲ್ಲಿಯೂ ಹರಿಹರನ ಶಂಕರದಾಸಿಮಯ್ಯನ ರಗಳೆಯ ಕಥೆಯೇ ದಾಖಲಾಗಿದೆ.

**ದೇವರದಾಸಿಮಯ್ಯನ ಕಥೆ**

ಪಾಲ್ಕುರಿಕೆ ಸೋಮನಾಥನ ಬಸವಪುರಾಣದ ಆರನೇ ಆಶ್ವಾಸದಲ್ಲಿ ದೇವರದಾಸಿಮಯ್ಯನ ಕಥೆ ಬರುತ್ತದೆ. ಇಲ್ಲಿ ಆತನೆ ಹೇಳಿರುವಂತೆ 'ತೇಡರ ದಾಸಿಮಯ್ಯ'ನ ಕಥೆಯೆಂದಿದೆ. ಈ ಕುರಿತು 'ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ: ಚರ್ಚೆ' ಎಂಬ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಭೀಮಕವಿಯ ಬಸವಪುರಾಣದ ಐವತ್ತನೆಯ ಸಂಧಿಯಲ್ಲಿ ಈ ಕಥೆ ನಾಲ್ಕನೆ ಆಶ್ವಾಸದ ಕಥೆಗಿಂತ ಭಿನ್ನವಾಗಿದೆ. ಇದರಲ್ಲಿ ತವನಿಧಿಯ ಪ್ರಸ್ತಾಪವಿಲ್ಲದೆ ಸುಗ್ಗಲದೇವಿ ಹಾಗೂ ಜಯಸಿಂಹನ ಕುರಿತ ಕಥೆಯನ್ನು ಒಳಗೊಂಡಿದೆ. ಕಥೆಯು ಹೀಗೆ ಪ್ರಾರಂಭವಾಗುತ್ತದೆ.

> ಶ್ರಾವಕರಣಪಹರಿಸಿ ಸುಗ್ಗಲ
> ದೇವಿಯರ ಗುರು ದಾಸಿಮಯ್ಯನು
> ಶೈವನಂ ಮಾಡಿದನೊಲಿದು ದೇಸಿಂಗರಾಯನನೊ[೫೭]

ದಾಸಿಮಯ್ಯ ಜೈನರನ್ನು ಶೈವರನ್ನಾಗಿಸಿದ ವಿವರವನೊಳಗೊಂಡಿರುವುದಾಗಿದೆ. ಕವಿ ಪ್ರಾರಂಭದಲ್ಲಿ ಸೂಚಿಸಿದ್ದಾನೆ.

ಮೊಟ್ಟಚೆರು (ಪೊಟ್ಟಲಕೆರೆ) ಎಂಬಲ್ಲಿ ಒಬ್ಬ ಜೈನ ಗುರು ಜಯಸಿಂಹನಿಗೆ ಪ್ರಮುಖನೆನಿಸಿದ ಆತನಿಗೆ ಮಾರ್ಗದರ್ಶನವನ್ನು ನೀಡುತ್ತಾ ಆಸ್ಥಾನದ ಧಾರ್ಮಿಕ ಪ್ರಮುಖನಾಗಿದ್ದನು. ಅಂತೆಯೇ ಆಸ್ಥಾನದಲ್ಲಿ ಜೈನಧರ್ಮ ಪ್ರಮುಖವಾದ ಧರ್ಮವಾಗಿದ್ದು ಪ್ರಬುದ್ಧವಾಗಿತ್ತು. ಏಳುನೂರು ಬಸದಿಗಳು ಇಪ್ಪತ್ತು ಸಾವಿರ ಜೈನ ಮುನಿಗಳು ಆಸ್ಥಾನದಲ್ಲಿದ್ದರು. ಜಯಸಿಂಹ(ಸಿಂಗ ಬಲ್ಲಾಳ)ನ ರಾಣಿ ಸುಗ್ಗಲದೇವಿ ಆಕೆ ರಾಜನ ರಾಜಧರ್ಮವನ್ನು ಒಪ್ಪಿಕೊಳ್ಳದೆ ಶೈವತತ್ವವನ್ನು ಅನುಸರಿಸು ವವಳಾಗಿದ್ದಳು. ಒಮ್ಮೆ ದಾಸಿಮಯ್ಯನಲ್ಲಿ ಬಂದು

ಮನುಜರಂ ಬೋಧಿಸುತಿರಲ್ಕಾ
ಜನಪನಹ ದೇಸಿಂಗರಾಯನ
ವನಿತೆ ಸುಗ್ಗಲೆದೇವಿ ದೇವರ ದಾಸಿಮಯ್ಯಗಳ
ಘನದಯಾಮೃತ ಕರತಳೋದರ
ಜನಿತೆಯಾಗಿಯು ತನ್ನ ಸದ್ಗುರು
ವೆನಿಪ ದಾಸಯ್ಯಂಗಳಿಗೆ ತಾನೀ ಸ್ಥಿತಿಯಂತಿಲ್ಲ.[೫೮]

ಭಿನ್ನವಿಸಿಕೊಂಡು ದಾಸಿಮಯ್ಯನನ್ನು ಹೊಟ್ಟಲಕೆರೆಗೆ ಬರಮಾಡಿಕೊಳ್ಳುತ್ತಾಳೆ. ಜೈನ ಮುನಿಗಳು ರಾಜನಲ್ಲಿಗೆ ಬಂದು ಈ ಕುರಿತು ದಾಸಿದೇವ ಸುಗ್ಗಲೆಯ ಸಹಾಯದಿಂದ ತಮ್ಮನ್ನು ಲೆಕ್ಕಿಸದೆ ಊರನ್ನು ಪ್ರವೇಶಿಸಿರುವುದಾಗಿ ತಿಳಿಸುತ್ತಾರೆ. ರಾಜನು ಶಿವಭಕ್ತೆಯಾದ ತನ್ನ ಹೆಂಡತಿಯನ್ನು ಕುರಿತು "ಪತಿಗೆ ಸತಿಗೆಯು ಬೇರೆ ಬೇರೆಂ ಗತಿಗಳುಂಟೆ ಯಾವ ನಾಡೊಳ್ ಸತಿಗೆ ಪತಿಯೇ ಗುರುವಲಾ ಪತಿದೇವ ಗುರು ಎನ್ನುತ್ತ' ಜೈನರಿದ ತಿಳಿದರೆ ವಿಪರೀತವಾದೀತು ಇನ್ನು ಸಾವಿರ ಮಾತೇಕೆ ನಿನ್ನ ಸ್ವಾಮಿಗಳಂ ಕಳುಹಿಸು ಎನ್ನುತ್ತಾನೆ. ಅದಕ್ಕೆ ಸುಗ್ಗಲೆಯು ಕೋಪಗೊಂಡು ಅಧಮ ಜೈನರ ಕೊಬ್ಬನ್ನು ಇಳಿಸಬೇಕೆಂದೇ ಬಂದವರವರು

ಪತಿಗೆ ಸತಿಗೆಯು ಮುಂದೆಯೊಂದೇ
ಗತಿಯಹುದು ಗಡ ಮತ್ತೆಬೇರೆಂ
ಗತಿಗಳುಂಟೇ ಗುರು ಶಿಶುಗಳಿಗೆ...[೫೯]

ಎಂದು ಸುಗ್ಗಲೆ ಪತಿಪತ್ನಿಯರಿಗೆ ದಾರಿಯೊಂದೇ ಆಗುವುದಾದರೆ ಗುರುಶಿಷ್ಯರಿಗೆ ಬೇರೆ ಬೇರೆ ದಾರಿಯುಂಟೇ? ನಾನು ನಿನ್ನೊಂದಿಗೆ ವಿವಾಹ ಕಾಲದಲ್ಲಿ ಮಾಡಿಕೊಂಡ ಒಪ್ಪಂದವನ್ನು ನೆನೆಯಿರಿ (ಸುಗ್ಗಲಾದೇವಿಯ ಒಂದು ಶಾಸನದಲ್ಲಿ ಈ ಕುರಿತು ಆಕೆಯ ವಿವಾಹ ಕಾಲದಲ್ಲಿನ ಒಪ್ಪಂದವನ್ನು ಕುರಿತು ಇದೆ) ನೀವು ಇನ್ನೊಬ್ಬಳನ್ನು ಮದುವೆಯಾಗಿ ನನ್ನನ್ನು ಬಿಟ್ಟು ಬಿಡಿ. ನಾನು ಶಿವನನ್ನು ಹೊರತಾಗಿ ಮತ್ತೆ ಏನನ್ನೂ ಒಲ್ಲೆ, ಈ ಎಲ್ಲವೂ ಆಗುವುದು ಬೇಡ

ಎನ್ನುವುದಾದರೆ ವೇದ-ಆಗಮ-ತರ್ಕ-ಶಾಸ್ತ್ರ-ಪುರಾಣಗಳಲ್ಲಿ ದಾಸಿಮಯ್ಯನನ್ನು ಜೈನರು ಸೋಲಿಸಬೇಕು ಎಂದು ತನ್ನ ನಿರ್ಣಯ ತಿಳಿಸಿದಳು. ಅಂತೆಯೇ ರಾಜ ದಾಸಿಮಯ್ಯನನ್ನು ತನ್ನ ಆಸ್ಥಾನಕ್ಕೆ ಕರೆಯಿಸಿದನು. ದಾಸಿಮಯ್ಯನು ಈ ಎಲ್ಲಾದರಲ್ಲಿಯೂ ಪ್ರವೀಣನಾಗಿದ್ದನು. ಆತನ ಸವಾಲು "ಅದ್ವಿತೀಯನಾದ ರಾಮನಾಥನೇ ಕರ್ತ ಸದ್ವಿಧಿ ಸರ್ವೇಶ್ವರನು ಶೃತಿಯು ಏಕಮೇಮ ರುದ್ರೋ ಎಂದೂ; ಲಿಂಗಮಧ್ಯೇ ಜಗತ್‌ಸರ್ವಂ ಎಂದೂ ಲಿಂಗಬಾಹ್ಯತ್ ಪರಂ ನಾಸ್ತಿ ಎಂದು ಹೇಳುತ್ತಿದೆ. ಆದ್ದರಿಂದ ಎಲ್ಲವೂ ಈಶ್ವರಮಯವು ದಕ್ಷತೆಯಿದ್ದರೆ ತರ್ಕಮಾಡಿ".[೬೦] ಇದಕ್ಕೆ ಜೈನರ ಪ್ರಶ್ನೆ ಲಿಂಗವೇ ಎಲ್ಲವೂ ಆದರೆ ಶಂಕರ ಎಲ್ಲೆಡೆಯೂ ಇರುವುದಾದರೆ ಶಿವನು ಸಂಚಾರಚರಕ್ಕೆ ಅಂಗವೋ, ಜೀವವೋ, ಆತ್ಮವೋ?.

ಈ ರಾಜ್ಯಕೆಲ್ಲರೆ ರಾಜನಲ್ಲದೆಯೇ
ಧಾರುಣಿಯಲಿ ಹೇಳಲಾರಿಲ್ಲವೆಂಬ
ರೀತಿ, ಸಮಸ್ತ ಪಿಲೀಲಿಕಾದಿಗಳ
ಹೊಲೆಯ ಕಿರಾತರ ರಾಜನೆಂದಂತೆ[೬೧]

ಎನ್ನುತ ಬಂದು ರಾಜ್ಯದಲ್ಲಿ ರಾಜ ಹೇಗೊ ಹಾಗೆಯೆ ಸುಗುಣ ವಿಚಾರಿತ ವೃತ್ತಿಯವನಾದ ಸರ್ವೇಶ್ವರನು ಸರ್ವದರಲ್ಲೂ ಸಂಕೀರ್ಣನಾಗಿದ್ದಾನೆ. 'ಈಶ್ವರನು ಅದ್ವೈತನ್ನುವುದು ಸರ್ವದ್ವೃತವೆ. ಇರುವವನು ಈಶ್ವರನೊಬ್ಬನೆ ಎಂದರೆ ಸಚರಾಚರವೆಲ್ಲವು ಈಶ್ವರನೆಂದಾಗುವುದಲ್ಲವೆ ಎಂದು ಉತ್ತರವಿತ್ತನು. ಇದಲ್ಲದೆ ಗುಡಿಗೆ ಹೋಗಿ ನೀವಿನ್ನು ಭಜಿಸಲೇಬೇಕೆಂಬ ಪ್ರಶ್ನೆಗೆ ದಾಸಿಮಯ್ಯ ಚಂದ್ರಕಾಂತ ಶಿಲೆ ಚಂದ್ರ ಪಥದಲಿ ಎಲ್ಲಾ ಶಿಲೆಗಳಿದ್ದರೂ ಅದು ಮಾತ್ರ ಸ್ರವಿಸುವುದು. ಎಲ್ಲಾ ಬೆಟ್ಟಗಳ ಮೇಲೆಯೂ ಬೆಳದಿಂಗಳು ಬೀಳುವುದೇ? ಬಿದ್ದರೂ ಫಲವೇನು? ಅದು ಪ್ರಾಣ ಪಥವಲ್ಲದ ಮೇಲೆ ಎಂದು ಮರು ಪ್ರಶ್ನೆ ಕೇಳುತ್ತಾನೆ. ಚಂದ್ರಿಕೆಯಿಲ್ಲದೆ ಚಂದ್ರಕಾಂತನಿಲ್ಲ. ಚಂದ್ರಕಾಂತನಿಲ್ಲದೆ ಚಂದ್ರಿಕೆಯಿಲ್ಲ. ಸರ್ವಗತನಾದ ಶಿವನಲ್ಲಿ ಎಲ್ಲವೂ ಇದ್ದರೂ ಶರಣನ ಮನಸ್ಸು ಕರಗುವುದು ಎರಡಕ್ಕೆ ಮಾತ್ರ; ಶಿವನಿಗೂ ಶರಣನಿಗೂ ಸಮಕಳೆಯಿರುವುದರಿಂದ, ಹಾಗೆ ಉಳಿದ ಮನುಜರ ಚಿತ್ತವು ಕರಗುವುದೇ? ಅಖಿಲವೂ ಲಿಂಗಮಧ್ಯದಲ್ಲಿವೇ? ಇದ್ದರೂ ಏನು ಫಲ ಶರಣನಾಗಿಯೇ ಶಂಕರನ ಲೀಲೆಗಳು ಶಂಕರನಾಗಿಯೇ ಶರಣನ ಹೃದಯ ಎಂದು ಹೇಳಿ ಮುಂದುವರೆಸುತ್ತಾನೆ.

ಗೊಲ್ಲನು ಹಸುವನ್ನು ತನ್ನದೆಂದು ತಿಳಿಯುವನು. ಆ ಹಸುವಿಗಾದರೂ ಪ್ರೀತಿ ಕರುವಿನ ಮೇಲಲ್ಲದೆ ಗೊಲ್ಲನ ಮೇಲಲ್ಲ. ಅಂತೆಯೇ ಮನದಲ್ಲಿನ ಲಿಂಗಭಕ್ತನ ಸನ್ಮತನದಿಂದಲೆ ಎಲ್ಲವೂ ಬದುಕುತ್ತಿರುವುದು. ಬೀಳುವ ಎಲ್ಲಾ ನೀರಿಗೆ ಬಾಯಿ ತೆರೆಯದೆ ಸ್ವಾತಿ ಮಳೆಯ

ಹನಿಗೆ ಮಾತ್ರ ಬಾಯಿದೆರೆಯುವುದು ಮುತ್ತಿನ ಚಿಪ್ಪು. ಆ ಸ್ವಾತಿ ಮತ್ತು ಚಿಪ್ಪು ಈ ಲಾಭದ ಸಂಗದಿಂದ ಉದಯಿಸುವ ರತ್ನ. ಶಿವನ ಮತ್ತು ಶರಣನ ಅನುವೂ ಹಾಗೆಯೇ ಎಂದು ವಿವರಿಸುತ್ತಾನೆ. ಲಿಂಗ ಮತ್ತು ಭಕ್ತರು ಪರಸ್ಪರ ದ್ರವಿಸುವ ಸ್ನೇಹ ಲೀಲೆ ಎಲ್ಲರಿಗೂ ಅರ್ಥವಾಗದು. ಆದರೆ ಎಲ್ಲರೂ ಆನಂದದಿಂರುವುದು ಅದರಿಂದಲೆ ಎನ್ನುತ್ತಾನೆ. ಹೀಗೆ ಜೈನರ ಪ್ರಶ್ನೆಗಳಿಗೆ ದಾಸಿಮಯ್ಯ ಉತ್ತರವನ್ನಿಯುತ್ತಾ ಎಳ್ಳಿನಲ್ಲಿರುವ ಎಣ್ಣೆಯನ್ನು ದೀಪ ಉರಿಯುವುದಕ್ಕೆ ಸಹಾಯಕವಾದ ಎಣ್ಣೆಯನ್ನು ಉದಾಹರಿಸುತ್ತಾ 'ಎಳ್ಳಿನಲಿ ಎಣ್ಣೆ ಇರುವುದು ಆದರೆ ಎಣ್ಣೆಯಲಿ ಎಳ್ಳಿರುವುದೇ? ಸರ್ವಜ್ಞನಲ್ಲಿ ಸರ್ವವೂ ಇದೆ. ಸರ್ವಜ್ಞನಾದ ಶಿವನು ಎಲ್ಲದರಲ್ಲಿಯೂ ಇದ್ದಾನೆ. ಆತನಲ್ಲಿ ಎಲ್ಲವೂ ಇದೆ ಎನ್ನುತ್ತಾನೆ'.

ಜೈನರು ಅತಿರೇಕವೆಂಬಂತೆ ಮೂದಲಿಸುತ್ತಾ ಮಲಮೂತ್ರಗಳನ್ನು ಬಿಡುವ ಠಾವಿನಲಿ ಶಿವನಿರುವನೆ ಎನಲು ಶಿವನನ್ನು ಇಲ್ಲವೆನ್ನುವ ಅಧಮ ನಾಸ್ತಿಕನಾದ ನಿನ್ನ ಬಾಯಿ ಹಾಗೂ ಹೃದಯಗಳೆರಡನ್ನೂ ಬಿಟ್ಟು ಎಲ್ಲೆಡೆಯೂ ಶಿವನಿದ್ದಾನೆ ಎನ್ನುತ್ತಾನೆ. ಹೀಗೆ ಶಿವನ ಭಕ್ತಿಯನ್ನು ಕೊಂಡಾಡುತ್ತ ರಾಮನಾಥನನ್ನು ನೆನೆಯುತ್ತಿರುವಾಗ ಘಟದಲಿ ಬಂದು ವಿಷ ಸರ್ಪವನ್ನಿರಿಸಿ ಆ ಘಟದ ಬಾಯಿಗೆ ಬಟ್ಟೆಕಟ್ಟಿ ಅದನ್ನು ದೇವದಾಸಯ್ಯನಿಗೆ ತೋರಿಸುತ್ತಾ ಇದರಲ್ಲಿ ಶಿವನಿರುವನೆ ಎನಲು ದಾಸಿಮಯ್ಯನು ಅನುಮಾನವೇಕೆ? ಎಲ್ಲೆಡೆಯೂ ರಾಮಯ್ಯನಿರುವನು. ಆ ರಾಮೇಶನ ಭಕ್ತರೆ ಭೂಮಿಯಲ್ಲಿ ಶ್ರೇಷ್ಠರು. ಆತನನ್ನು ಪೂಜಿಸದವರೆ ಪಾಪಿಗಳು ಎನ್ನುವನು. ಹಾಗೆ ಆ ಘಟಕ್ಕೆ ಕೈಹಾಕಲು ಸ್ಫಟಿಕ ಲಿಂಗವಾಗಿ ಆ ಹಾವು ರೂಪಾಂತರಿಸಿತು.

ಈ ಎಲ್ಲಾ ಪರೀಕ್ಷೆಗಳಲಿ ದೇವರ ದಾಸಿಮಯ್ಯ ವಿಜಯಿಸಲು ಸುಗ್ಗಲದೇವಿ ಹರ್ಷಗೊಂಡಳು. ಬಲ್ಲಾಳನು ಸಂತೋಷದಿಂದ ಶಿವದೀಕ್ಷೆ ಪಡೆದು ಆ ಸ್ಫಟಿಕ ಲಿಂಗವನ್ನು ಅದೇ ನಗರದಲ್ಲಿ 'ಉತ್ತರೇಶ್ವರ' ಎಂಬ ಹೆಸರಿನಲ್ಲಿ ಪ್ರತಿಷ್ಠಾಪಿಸಿದನು. "ಹತ್ತು ಹನ್ನೊಂದನೆ ಶತಮಾನದಲ್ಲಿ ಭಕ್ತಿ ಪಂಥದ ಶರಣರು 'ಸೇಶ್ವರ' ಸಿದ್ಧಾಂತವನ್ನು ಸ್ಥಾಪಿಸುವುದಕ್ಕಾಗಿ ನಾಸ್ತಿಕರೆನಿಸಿಕೊಂಡಿದ್ದ ಜೈನರನ್ನು ಖಂಡಿಸಲು ಹೂಡಿದ ವಾದಗಳನ್ನು, ಮಾಡಿದ ಸಾಹಸಗಳನ್ನು ಮೇಲೆ ಉಲ್ಲೇಖಿಸಿರುವ ದೇವರದಾಸಿಮಯ್ಯನ ವಾದ ಪ್ರಸಂಗದಲ್ಲಿ ಮನಗಾಣಬಹುದು. ಇದರಿಂದ ವಾದಿ ಭಯಂಕರನಾದ ದಾಸಿಮಯ್ಯನ ಉಗ್ರ ಚಟುವಟಿಕೆಗಳು ಅವನು ತನ್ನ ಸಿದ್ಧಿಗೆ ಮತ್ತು ಸಮಾಜದ ಸುಧಾರಣೆಗೆ ಮಾರ್ಗದರ್ಶಕವಾಗಿ ಇಟ್ಟುಕೊಂಡಿದ್ದ ದರ್ಶನದ ಸ್ಥೂಲವಾದ ರೂಪರೇಖೆ ಏನು ಎಂಥವು"[೨] ಎಂಬುದನ್ನು ಇಲ್ಲಿ ಅನಾವರಣಗೊಳಿಸಲಾಗಿದೆ.

"ಜಗತ್ತು ಮಿಥ್ಯವಲ್ಲ ಅದರಲ್ಲಿ ಶಿವನು ಸರ್ವಾಂತರ್ಯಾಮಿಯಾಗಿ ವ್ಯಾಪಿಸಿರುವನು ಜೀವಾತ್ಮನು ಪರಮಾತ್ಮನಲ್ಲ ಅವನು ಪರಮಾತ್ಮನಲ್ಲಿ ವಿಲೀನವಾಗಬಲ್ಲನು. ಐಕ್ಯದ ಅರ್ಥವಾದರೂ

ಇಷ್ಟೇ ಹೊರತು ಜೀವಾತ್ಮ ಮತ್ತು ಪರಮಾತ್ಮ ಎರಡೂ ಅಭಿನ್ನ ಅದ್ಧ್ವಯ ಏಕ ಎಂದಲ್ಲ. ಶಿವನೊಡನೆ ಸಮರಸವಾಗುವಷ್ಟು ಸಮಾನ ಧರ್ಮ ಜೀವನದಲ್ಲಿ ಇರುವುದಾದರೆ ಅದು ಅದೆ ಆಗುವಷ್ಟಿಲ್ಲ. ಆದುದರಿಂದ ದೇವರದಾಸಿಮಯ್ಯನ ವಿಶಿಷ್ಟಾದ್ವೈತವೆಂಬುದು ಖಚಿತವೆಂಬ"[೬೩] ಎಸ್.ಎಸ್. ರಾಘವಾಚಾರ್ಯ, ಎ.ಎಲ್. ಶಿವರುದ್ರಪ್ಪನವರು ಹಾಗೂ ಎಲ್. ಬಸವರಾಜು ಅವರ ಮಾತನ್ನ ಒಪ್ಪಬಹುದಾಗಿದೆ. ಹರಿಹರನಲ್ಲಿ ಕಂಡಿರದ ಹೊಸ ಕಥೆ ಬಸವಪುರಾಣದಲ್ಲಿ ಉಲ್ಲೇಖಿಸಲ್ಪಟ್ಟಿದ್ದು ಇದು ದೇವರದಾಸಿಮಯ್ಯನ ಕಥೆಯಾಗಿದೆ.

**ತ್ರಿಭುವನತಾತನ ಜೇಡರದಾಸಿಮಯ್ಯನ ರಗಳೆ**

ಈ ರಗಳೆಯ ಕುರಿತಾಗಿ ಡಾ.ಎಲ್. ಬಸವರಾಜು ಅವರು ತಮ್ಮ 'ದೇವರ ದಾಸಿಮಯ್ಯನ ವಚನಗಳು' ಕೃತಿಯ ಪ್ರಸ್ತಾವನೆಯಲ್ಲಿ "ತ್ರಿಭುವನ ತಾತನೂ ಜೇಡರದಾಸಿಮಯ್ಯನ ಮೇಲೆ ಬರೆದ ಒಂದು ರಗಳೆ ದೇವರದಾಸಿಮಾರ್ಯ ಪ್ರಶಸ್ತಿಯಲ್ಲಿ ಅಚ್ಚಾಗಿದೆ"[೬೪] ಎಂದು ಹೇಳಿದ್ದಾರೆ. ಆದರೆ ಡಾ. ಎಂ ಚಿದಾನಂದಮೂರ್ತಿಯವರು ದೇವರ ದಾಸಿಮಾರ್ಯ ಪ್ರಶಸ್ತಿಯ ಭಾಗ ಒಂದರಲ್ಲಿ ಅಚ್ಚಾಗಿರುವ ಅಜ್ಞಾತ ಕವಿ(ಹೆಸರು ತಿಳಿದಿಲ್ಲದಿರುವ ವ್ಯಕ್ತಿ)ಯ ಒಂದು ರಗಳೆ ಎನ್ನುತ್ತಾರೆ. ಅದೇನೆ ಇರಲಿ ಜೇಡರದಾಸಿಮಯ್ಯನ ಕುರಿತ ಅಧ್ಯಯನದಲ್ಲಿ ಈ ರಗಳೆಯು ಪ್ರಮುಖ ಆಕರಗಳಲ್ಲಿ ಒಂದಾಗಿ ಕಂಡು ಬರುತ್ತದೆ. ಇದರ ಕಾಲ ಕ್ರಿ.ಶ. ೧೨೦೦. ಈ ರಗಳೆಯು ಲಲಿತ ರಗಳೆಯ ಲಯದಲ್ಲಿದೆ. ಕಂದ ಪದ್ಯದಲ್ಲಿನ ಸ್ತುತಿ ಪದ್ಯಗಳನ್ನು ಹೊಂದಿದೆ. ಆದರೆ ಈ ರಗಳೆಯ ಕಾಲ ತಿಳಿದು ಬಂದಿಲ್ಲ.

ಮದನಹರ ಮದನ ವಂದಿತ
ಪದಯುಗಳಂ ಕರುಣ ಸುಧೆಯ ಭಕ್ತರ ಭಾವದೋ
ಳೋದವಿಸಿದ ದಾಸಿಮಯ್ಯನ
ಮುದನೊರೊಳ್ ಮೆರೆದ ನಮ್ಮ ಗುರು ವಿಶ್ವೇಶ್ವಂ[೬೫]

ಎಂಬ ಸ್ತುತಿ ಪದ್ಯದಿಂದ ಪ್ರಾರಂಭವಾಗುತ್ತದೆ. ದಾಸಿಮಯ್ಯನ ವಾಸಸ್ಥಾನವಾದ ಮುದನೂರಿನಲ್ಲಿ ವಿಶ್ವೇಶ್ವರನು ಆಡಿ ಮೆರೆದಿದ್ದನು ಎಂಬುದು ಇದರ ಅರ್ಥ.

ಶ್ರೀ ಶಶಿಧರಂಗೆ ನಿಜದಲಯವೆನಿಸಿರ್ಪ
ಲೇಸಿಂಗೆ ಲೇಸಾದ ದೇಶಕ್ಕೆ ನಡುವೆನಿಪ
ನಾಡಿಂಗೆ ಸಕಲ ಸಂಪದ ಸಕಲ ರಾಜ್ಯದೊಳ್
ರೂಢಿಗೊಪ್ಪುತ ಸಲುಹ ಮುದನೂರ ಗ್ರಾಮದೊಳ್[೬೬]

ಸಕಲ ಸಂಪತ್ತನ್ನು ಹೊಂದಿದ ಮುದನೂರು ಎಂಬ ಗ್ರಾಮದಲ್ಲಿ ದಾಸಿಮಯ್ಯ ಎಂಬ ಭಕ್ತನಿದ್ದ. ಆತನ ಪತ್ನಿ ದುಗ್ಗಲದೇವಿ. ಈಕೆ ಆತನ ಮಾತಿಗೆ ಪ್ರತಿ ಶಬ್ಧವಿಲ್ಲದ ಸದ್ಗುಣವತಿ. ಸತಿಪತಿಗಳಿಬ್ಬರು ಕಾಯ, ವಾಚ, ಮನಸ್ಸಿನಿಂದ ಸದಾಚಾರ ಸಂಪನ್ನರಾಗಿದ್ದರು. ತನು, ಮನ, ಧನವನ್ನು ಗುರು, ಲಿಂಗ, ಜಂಗಮಕ್ಕೆ ಅರ್ಪಿಸಿ ರಾಮನಾಥನನ್ನು ತನ್ನ ಪ್ರಾಣಲಿಂಗವಾಗಿ ಒಪ್ಪಿಕೊಂಡಿದ್ದರು. ಬಡವರಾಗಿದ್ದರೂ ಇವರು ಭಕ್ತಿಗೆ ಒಡೆಯರು. ಸರ್ವದಲ್ಲಿಯೂ ಶಿವನನ್ನು ಕಾಣುವ ಮನೋಧರ್ಮವುಳ್ಳವರೂ ಆಗಿದ್ದರು.

'ತಮ್ಮ ಕೃಷಿ ವ್ಯವಸಾಯದಿಂದೆನು ಬದುಂದಂ
ಅನ್ಯ ವಳಿಯದೆ ತಿಳಿದು ಜಂಗಮಕೆ ಮಾಡುದಹುದು
ದಸರಿ ದೇವಾಂಗಳೆಂಬ ಸೀರೆಯ ನೆಯಿದು
ಹಸನಾಯಿತೆಂದೊಡವರಿತ್ತ ಕೂಲಿಯ ನೊಯಿದು
ತಮ್ಮ ಸ್ವಇಚ್ಛೆಯಲಿ ಲಿಂಗಾರ್ಚನೆಯ ಮಾಡುವರು'[೬೭]

ದಾಸಿಮಯ್ಯನು ಕೃಷಿವ್ಯವಸಾಯದಿಂದ ಬಂದುದರಿಂದ ಕೇಡು ನೆನೆಯದೆ ಜಂಗಮಕ್ಕೆ ದಾಸೋಹ ಮಾಡುತ್ತಾ, ನೇಯ್ಗೆ ವೃತ್ತಿಯನು ಕೈಗೊಂಡು ದಂಪತಿಗಳು ಗುರು ಲಿಂಗ ಜಂಗಮದ ದಾಸರಾಗಿರಲು, ಒಮ್ಮೆ ದುಗ್ಗಳೆ ತಾನು ಆರು ವರ್ಷಗಳ ಕಾಲ ನೇಯ್ದ ನೂಲನ್ನು ದಾಸಿಮಯ್ಯನಿಗೆ ನೀಡಿದಳು. ಅದನ್ನು ದಾಸಿಮಯ್ಯ ಪ್ರೀತಿಯಿಂದ ಹಾಡುತ್ತಾ ಶಿವಶರಣರ ಮಹಿಮೆಗಳಿರುವ ಚಿತ್ರವನು ಬಿಡಿಸುವ ಯೋಚನೆ ಮಾಡಿ

ಈ ನೂಲ ನೆಯಿದ ಸೀರೆಯನೀಶನೆ ಬಲ್ಲ
ನಾನಲ್ಲ ನಿದನುಂರೆ ಮೂಢಬಲ್ಲವರಿಲ್ಲ
ಎನಲು ತಮ್ಮೊಳಗೈಕ ಚಿತ್ತಶುದ್ಧಿಯು ಕೂಡಿ[೬೮]

ಮನಸ್ಸಿನಲ್ಲಿಯೇ ಉತ್ಸಾಹಗೊಂಡು ಹಾಸುಮೊಳೆ, ಉಂಕೆಯನ್ನೆಲ್ಲ ಸರಿಗುಡಿಸಿ ಶಿವರಸವೆಂಬ ಗಂಜಿಯನು ಮಾಡಿ, ಶಿವಜ್ಞಾನದಾಚಾರವೆಂಬ ಕುಂಚಿಗೆಯ ಹಿಡಿದು ಉಂಕೆಯ ಹಸಮಾಡಿ ಎಳೆಯನು ಕೆಚ್ಚಿ ಲೋಕಪ್ರಸಿದ್ದವಾದ ಪಾತ್ರಗಳನ್ನು (ಗುಣಗಳನು) ನೇಯುವೆನು ಎಂಬ ಮನಸ್ಸಿನಿಂದ ಗರ್ವಗೊಂಡು ಸಂತಸ ಪಡುತ್ತಾ ದಾಸಿಮಯ್ಯನು ಮಗ್ಗದ ಕುಳಿಗೆ ನೇಯ್ಗಿಯನು ತಂದು ಹೆಣೆದನು. ಪ್ರೀತಿಯಿಂದ ಹಾಡುತ್ತಾ ಶಿವಶರಣರ ಮಹಿಮೆಗಳಿರುವ ಚಿತ್ರವನ್ನು ಬಿಡಿಸುವ ಯೋಚನೆಯನ್ನು ಮಾಡಿದಂತೆಯೇ ಸೌರಾಷ್ಟ್ರಪುರವನ್ನು, ಕಾಶಿಪುರವನ್ನು, ಮಹಾಲಿಂಗ ನೋಲಗವನ್ನು, ಅಷ್ಟಲೋಕ ದಿಕ್ಪಾಲಕರನ್ನು, ಪರಮೇಶನೋಲಗವನ್ನು, ಯಕ್ಷರಾಕ್ಷಸರು, ರಂಭೆ–ಭೃಂಗಿಯ ನಾಟ್ಯರಂಗವನ್ನು, ಅಂಧಕಾಸುರರನು ಈಶ್ವರಕೊಂದ ಚಿತ್ರವನ್ನು ಚಿತ್ರಿಸುತ್ತಾ

ಮುಂದುವರಿದು ನಂದೀಶ ಆದಿದೈವವಾದುದನ್ನು, ವೀರೇಶ ಜನಿಸಿ ಬೆಂಬಸೆವಡೆದು ನಡೆದದ್ದು, ರುದ್ರನ ಸಭೆನಡೆದದ್ದು, ಅಮರರನ್ನು ಧ್ವಂಸಿಸಿ ಯಜ್ಞವನ್ನು ಮುರಿದದ್ದು. ಕರೆಕಂದ ಗಂಧಕ್ಷಯುವತಿ ಕೇಳಿದಳೆಂದು ಕರೆದಲೆಯನ್ನಿತ್ತು ಪ್ರಾಣವನ್ನು ಮರಳಿ ಪಡೆದದ್ದು. ಉಮೆಯರಸ ಘನಮೂರ್ತಿಯ ಚಿತ್ರ, ಹರಿಗೆ ಲಕ್ಷ್ಮೀಯನ್ನು ವಿವಾಹ ಮಾಡಿಸಿದ್ದು. ಸುರರಿಗೆ ಅಮೃತವನ್ನು ಕುಡಿಸಿದ್ದು. ವಿಷಕುಡಿದು ಕರಿಕಂಠನಾದುದು ಹೀಗೆ ಶಿವನ ಮಹಿಮೆಯ ಚಿತ್ರಗಳನ್ನು ರಚಿಸಿದನು.

ಇವುಗಳೊಂದಿಗೆ ನಂಬಿಯಣ್ಣನ ಕರಿಯು ಶಿವನೊಯ್ದುದು, ಸಿಂಧು ಬಲ್ಲಾಳ ಜಂಗಮಕ್ಕೆ ನೀಡಿದ್ದು, ಸಿದ್ಧರಾಮಯ್ಯ ಪರ್ವತದಲ್ಲಿನ ಲಿಂಗವನ್ನು ಪುರಕ್ಕೆ ತಂದುದು ಹೀಗೆ ಶಿವಶರಣರ ಮಹಿಮೆಯ ಚಿತ್ರಗಳನ್ನು ದಾಸಿಮಯ್ಯ ಬಿಡಿಸಿ ಬಟ್ಟೆಯನ್ನು (ಸೀರೆಯನ್ನು) ತಯಾರಿಸಿದ. ಈ ವಸ್ತ್ರವು ಕಣ್ಣಿಗೆ ಅತ್ಯಂತ ಮಂಗಳಕರವೆಂಬಂತೆ ಕಂಡುಬರುವ ಅತ್ಯದ್ಭುತ ಶಿಲ್ಪವೇ ಆಗಿತ್ತು. 'ಶಿವನಲ್ಲದೆ ಅನ್ಯರಿದನು ಕೊಳಲಾರರು' ಎಂದು ತಮ್ಮ ತಮ್ಮಲ್ಲಿಯೆ ಮಾತಾಡಿಕೊಳ್ಳುತ್ತಿದ್ದರು ಸತಿಪತಿಗಳು. ಆತನ ನೇಯ್ಗೆ ಕೌಶಲವನ್ನು ದುಗ್ಗಳೆ ಹೆಮ್ಮೆಯಿಂದ ಹೊಗಳಿದಳು. ದಾಸಿಮಯ್ಯನು ಆ ವಸ್ತ್ರವನ್ನು ಮಾರಲು ಸಂತೆಗೆ ತೆಗೆದುಕೊಂಡು ಹೋದಾಗ ಆ ಸೀರೆಯನ್ನು ಕಂಡು ಜನರು ಬೆರಗಾದರು. ಆ ಬೆಲೆಬಾಳುವ ವಸ್ತ್ರವನ್ನು ತೆಗೆದುಕೊಳ್ಳುವ ಧನವಂತರು ಯಾರೂ ಬರಲಿಲ್ಲ. ಸಂಜೆಯ ಹೋತ್ತಾಯಿತು. ಆ ಸೀರೆ ಮಾರಾಟವಾಗದೆ ಹಾಗೆಯೇ ಉಳಿದುಬಿಟ್ಟಿತು. ಈ ಸಮಯಕ್ಕೆ ಒಬ್ಬ ಜಂಗಮನು ದಾಸಿಮಯ್ಯನಲ್ಲಿ ಬಂದನು. ಸೋಮಧರನ ದಾಸನಂ ಮೆರೆಯಬೇಕೆಂದು ಆ ಮಹಿಮಲಿಂಗ ಜಂಗಮವಾಗಿ ಬಂದನು ಎನ್ನುತ್ತಾನೆ ಕವಿ. ಆ ಜಂಗಮನು ನೋಡಲು

ಏಕ ಜಡೆ ರುದ್ರಾಕ್ಷಿ ಬಸಿತ ಪದ ಹಾವಿಗೆಯು
ಲೋಕ ಲೋಕಂ ಲೋಕಾದಿಧೀರ ಗುಂಡಿಗೆಯು
ಪಿಡಿಲಾಕಳ ಕವುಪ ವಿರ್ಧನಿರ್ಧನನಾಗಿ
ನಡೆ ತಂದ ನೆರವಿಯಂ ನೋಡುತಂ ತಲೆದೂಗಿ
ಹೋಗಲಮ್ಮದೆ ತಮ್ಮಂದಿಯ ಹೊರಗೆ ಬಳಸುಸಿರೆ
ನಗವೊಡಂ ನಾಣ್ಬುವಂ ದಾಸಯ್ಯ ಕಾಣುತಿರ್ರ್

ಎಂದು ದಾಸಯ್ಯನಿಗೆ ಹರಸಿ, ಭಸಿತವನ್ನಿಕ್ಕಿ, ಆ ವಸ್ತ್ರವನ್ನು ಕಂಡೊಡನೆ ದಳದಳನೆ ಮೊಳದಿಂದ ಅಳೆದುನೋಡಿ ದಾಸಿಮಯ್ಯನು ಆ ಸಮಯವನ್ನು ಬಳಸಿಕೊಂಡು 'ಈ ವಸ್ತ್ರಮಂ ಕೊಟ್ಟುಧನ್ಯನಾದೆ ಮಗನೆ, ದೇವಭಕ್ತರ್ಗಿತ್ತು ನಿತ್ಯನಾಗೈ ಮಗನೆ' ಎನ್ನುತ್ತಾ ಈ ವಸ್ತ್ರವನು ಏಕೆ ನೇಯ್ದೆ, ಇದನು ಯಾರೂ ಕೇಳುವುದಿಲ್ಲ, ಕೊಳ್ಳುವುದಿಲ್ಲ ಸಂತೆಯು ಮುಗಿಯುತ್ತದೆ, ಮತ್ತೆ ಇದನು ಮನೆಗೊಯ್ದರೆ

ಇಲಿ ಕಡಿಯುವುದಿಲ್ಲವೆ ಮಗನೆ ನನಗೆ ಕೊಟ್ಟರೆ ಸುಖವಾಗಿ ಹೊದ್ದುಕೊಳ್ಳವೆ ಎಂದು ಕೇಳಿಕೊಳ್ಳುತ್ತಾನೆ. ಇದನ್ನು ಕಂಡು ದಾಸಿಮಯ್ಯನು ವಸ್ತ್ರವನ್ನು ಕೊಟ್ಟನು.

ಕೊಟ್ಟು ಮರಮರುಗಲಾಗದು ದಾಸುಗ ನಿನ್ನ
ಹೊಟ್ಟುಗೆಯ ಕೇಳಿ ಬಂದೆ ಕೊಟ್ಟು ಕಳುಹೆನ್ನ
ಎಂದು ಜಂಗಮ ನುಡಿಯೆ ದಾಸಿಮಯ್ಯನಿಂತೆಂದ
ಸಂದಹೊನ್ನಿಗೆಪಟ್ಟ ಉಂಟೆದೇವ ಎಂದ
ಮಡದಿ ದುಗ್ಗಳೆಯ ಮಸಿ ಬೇರೊಂದು ಪರಿಯಹುದೆ[೬೦]

ಎಂದು ಸತಿಪತಿಗಳು ಸೇರಿ ಆ ವಸ್ತ್ರವನ್ನು ಕೊಟ್ಟರು. ಆಗ ಜಂಗಮನು ಆ ವಸ್ತ್ರವನು ಸೀಳಿ ಎಲ್ಲವನು ಚಿಂದಿ ಚಿಂದಿ ಮಾಡಿ 'ಜಡೆಯೊಳಂ ಕೊರಲೊಳಂ ಕೈಯೊಳಂ ಕಟ್ಟಿದಂ ಪಿಡಿದಲಾಕೋಳತುಂಬಿ ಕಾಲೊಳಗೆ ಕಟ್ಟಿದನು' ಗುರುಭಕ್ತ ದಾಸನನ್ನು ಕರೆದು 'ನಿತ್ಯನಾಗು' ಎಂದು, ವರಧಾನ್ಯ ಒಮ್ಮನವ ಹಿಡಿ ಹಿಡಿ ಎನುತಾ, ಸ್ವಲ್ಪ ಧಾನ್ಯ, ಉಪ್ಪು, ಮೆಣಸು, ಸಾಂಬಾರುಗಳನು ಕೊಟ್ಟು ಹೋದನು ಅದನು ಮನೆಗೆ ತಂದು ದುಗ್ಗಳೆಗೆ ತೋರುತ್ತಾ, ತಾನು ವಸ್ತ್ರವನು ಜಂಗಮನಿಗೆ ಕೊಟ್ಟು ಆತನಿಂದ ಈ ವಸ್ತುಗಳನ್ನು ಪಡೆದುದಾಗಿ ಹೇಳಿದನು. ಆಗ ದುಗ್ಗಳೆ ಗಂಡನನು ಕೊಂಡಾಡುತ್ತ ಧನ್ಯರಾದೆವೆಂದು ಹೇಳುತ್ತಾಳೆ. ಆಕೆ ಗಂಡ ತಂದುಕೊಟ್ಟ ಭತ್ತದ ಗಂಟನ್ನು ಹಳೆಯ ಮಗ್ಗದಲ್ಲೂ, ಉಳಿದುವನ್ನೂ ಮಡಿಕೆ ಕುಡಿಕೆಗಳಲ್ಲೂ ಮುಚ್ಚಿಟ್ಟಳು. ಬೆಳಗಾಗುತ್ತಲೆ

ಹಳೆಯಮನೆ ಹೊಸದಾಗಿ ನೋಡಿ ಕಂಡಂದಾಸ
ಮಗ್ಗುವುಗಳೆಯುಂ ಹಗೆದುಂಬಿ ತವನಿಧಿಯು
ದುಗ್ಗಳೆದೇವಿ ಬೈಬೆಟ್ಟುವೆಲ್ಲ ತವನಿಧಿಯು
ಏನೇನ ತೆಗೆದೊಡಂ ಮತ್ತಲ್ಲಿ ತುಂಬಿಹವು
ಮಾನಿನಿ ನೆನೆದ ದ್ರವ್ಯಂ ಮುಂದೆ ಬಂದಿಹವು[೬೧]

ಮಗ್ಗದ ಕುಳಿ, ಮಡಿಕೆ ಕುಡಿಕೆಗಳೆಲ್ಲಾ ತವನಿಧಿಗಳಾದವು. ಶಿವನನು ನೆನೆದು ತವನಿಧಿಯಿಂದ ಜಂಗಮಾರ್ಚನೆ ಮಾಡುತ್ತಾ ದಾಸ ದುಗ್ಗಳೆಯರು ಕಾಶಿಪುರೇಶನನ್ನು ಒಲಿಸಿಕೊಳ್ಳುತ್ತಾರೆ. ಹೀಗೆ ಆರವತ್ತು ವರ್ಷ ಬಾಳಿದ ನಂತರ ಶಿವನು ಕೈಲಾಸಕ್ಕೆ ಕರೆದೊಯ್ಯುತ್ತಾನೆ. ಇದಿಷ್ಟು ಜೇಡರದಾಸಿಮಯ್ಯ ಕಥಾಸಾರ.

ಧರಣಿಯೊಳು ದಾಸದುಗ್ಗಳೆ
ಗಿರಿಜೇಶಗೆ ಭಕ್ತಿಮಾಡಿ ತವನಿಧಿಪಡೆದರ್

ಶರಣ ಪರತತ್ವ ಪದವ ಬೆರೆಸಿದ ಶರಣ

ದಾಸಯ್ಯನೆಂದು ಗುರು ವಿಶ್ವೇಶ್ವಾ[೭೨]

ಎಂಬ ಸ್ತುತಿ ಪದ್ಯದಿಂದಲೇ ಮುಕ್ತಾಯವಾಗುತ್ತದೆ. ಜೇಡರದಾಸಿಮಯ್ಯನು ತವನಿಧಿಯನ್ನು ಪಡೆದ ಸಂಪೂರ್ಣ ಚಿತ್ರಣವನ್ನು ಈ ರಗಳೆ ನೀಡುತ್ತದೆ.

### ಲಕ್ಕಣ್ಣದಂಡೇಶನ 'ಶಿವತತ್ವಚಿಂತಾಮಣಿ'

ಲಕ್ಕಣ್ಣ ದಂಡೇಶನು ಪೌಢದೇವರಾಯನ ಕಾಲದಲ್ಲಿ ಪ್ರಧಾನ ಸಚಿವನಾಗಿದ್ದ. 'ತನ್ನ ಸಮಕಾಲೀನ ಇತಿಹಾಸದಲ್ಲಿ ರಾಜಕೀಯ ಕಾರಣಕ್ಕಾಗಿ ಮಹತ್ವ ಪಡೆದಿರುವ ಲಕ್ಕಣ್ಣ ದಂಡೇಶ ಧಾರ್ಮಿಕ ಮತ್ತು ಸಾಹಿತ್ಯ ಕ್ಷೇತ್ರದಲ್ಲಿಯೂ ಅಷ್ಟೇ ಮಹತ್ವ ಪಡೆದಿರುವುದು ಆತನ ಬಹುಮುಖ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ.[೭೩]

ಈತನ ಕೃತಿ 'ಶಿವತತ್ವಚಿಂತಾಮಣಿ'ಯು ವೀರಶೈವ ಸಿದ್ಧಾಂತವನ್ನು ನಿರೂಪಿಸುವ ಕೃತಿಯಾಗಿದ್ದು, ಇದರ ಕಾಲ ಕ್ರಿ.ಶ. ೧೪೫೦. ಇದನ್ನು ವೀರಶೈವರ 'ವಿಶ್ವಕೋಶ' ಎಂದೇ ಇದನ್ನು ಕರೆಯಲಾಗುತ್ತದೆ. ಈ ಕೃತಿಯು ವಾರ್ಧಕ ಷಟ್ಪದಿಯಲ್ಲಿದೆ. ಹೆಸರಿಗೆ ತಕ್ಕಂತೆ ಸಾರ್ಥಕ್ಯ ಹೊಂದಿರುವುದು ಈ ಕೃತಿಯ ವಿಶೇಷ. ವೇದ, ಶಿವಗಾಮಗಳು, ಶಿವನ ಇಪ್ಪತ್ತೈದು ಲೀಲೆಗಳು, ಗಣಂಗಳ ಚರಿತ್ರೆ, ಶಿವಶರಣರ ಕಥೆಗಳು, ಆರವತ್ತಮೂರು ಪುರಾತನರ ಶಿವಭಕ್ತಿ ನಿಷ್ಠೆ, ಪಂಚಾಕ್ಷರಿ, ಭಸಿತಾದಿಗಳ ಮಹಿಮೆ, ಲಿಂಗಧಾರಣ, ಷಟ್‌ಸ್ಥಲ ಮುಂತಾದವುಗಳ ವರ್ಣನೆಯು ಈ ಕೃತಿಯಲ್ಲಿದೆ. ಶಿವಶರಣರ ಕಥೆಗಳನ್ನು ಹೇಳುವಾಗ ಜೇಡರದಾಸಿಮಯ್ಯನ ಕಥೆಯನ್ನು ನಿರೂಪಿಸಿದ್ದಾನೆ.

'ಜೇಡರೊಳ್ ದಾಸಯ್ಯನೆನಿಪೊರ್ವ ಭಕ್ತನಂ

ಬೇಡಿತ್ತ ಕೊಟ್ಟು ಲಿಂಗಾರ್ಚಕರ ಕೊಂಡಾಡಿ

ನೀಡುತಿಹನೊಳಿದಕಂಗಳಂಚರ ಲಿಂಗ ಬಂದನಿತರೆಲ್ಲೆನ್ನದೆ.[೭೪]

ಎಂದು ಕಥೆ ಪ್ರಾರಂಭವಾಗುತ್ತದೆ. ಈ ಕಥೆಯಲ್ಲಿರುವಂತೆ ದಾಸಿಮಯ್ಯನ ಹದಿನಾಲ್ಕು ವರ್ಣಗಳಲ್ಲಿ ಶ್ರಮಪಟ್ಟು ಉತ್ತಮವಾದ ದೇವಾಂಗ ವಸ್ತ್ರವನ್ನು ಆರು ವರ್ಷಗಳ ಕಾಲ ನೇಯ್ದು, ಬೆಲೆಕಟ್ಟಲಾರದ ವಸ್ತ್ರವನು ಸಂತೆಯೊಳು ಮಾರಲು ಅಲ್ಲಲ್ಲಿ ತಿರುಗುತ್ತಿರಲು ದಾಸಿಮಯ್ಯನನ್ನು ಅರಸುತ್ತಾ ನಳನಸಖನೇತ್ರ ಜಂಗಮವಾಗಿ ಬಂದು ದಾಸಿಮಯ್ಯನ ಎದುರು ನಿಂದು 'ಚಳೆಮಳೆಯೊಳೆಮ್ಮಂಗ ಘಾಸಿಯಾಗುತ್ತಮಿದೆ ಸಲೆ ಕೊಡುವೊಡೆಮ್ಮನದದವಸಕೆನುತ್ತ' ಕೇಳಲು, ದಾಸಿಮಯ್ಯನು ಮನದಲ್ಲಿ ಒಂದಿನಿತು ಯೋಚಿಸದೆ ಕ್ರಯನೋಡದೆ ಆ ಜಂಗಮನಿಗೆ ವಸ್ತ್ರವನ್ನು ಕೊಟ್ಟು ಬಿಡುತ್ತಾನೆ.

ಮನಸಿಜಾಂತಕ ನಗುತಲಾವಸ್ತ್ರಮಂ ಹಲವು ತುಂಡುಗಳಂ ಮಾಡಿ ಸೀಳಿ
ತನುವಿಕಾರತೆಗಳಿಂಕುಣಿವುತಂಚಟೆಗಳಂ
ತೊನೆವ ಜಡೆಗಳಂ ಕಂಠಭುಜಗಳೊಳು
ಕಟ್ಟುತಂದನುನಯದೊಆತಂನಗೆನಗೆಗಳಿಗೆ

ಕಟ್ಟಿಕೊಂಡು ದುಗ್ಗಳೆಯನ್ನು ಕೇಳಲು ನಿನ್ನ ಪತಿ (ನಿನ್ನರಸ) ಹಲವು ವರುಷ ಬಳಲಿ ನೇಯ್ದು ಸುಲಭವಾಗಿ ಧಾನ್ಯಕ್ಕೆ ನೀಡಿದ್ದಾನೆ. ಎಂದು ಹೇಳಲು ಆಕೆ ನಗುತ ಸಲಹಿದಂ ತನ್ನ ಸದ್ಭಕ್ತರಿಗೆ ಸಂದಾಗ ಕುಲವೆಲ್ಲ ಪಾವನಂ ಚರಿತಾರ್ಥರಾದೆಲ್ಲನೆ ಕಳವಳವೆ ಕಾಣದಲ್ಲಭವಂ ಎಂದು ಹೇಳಿದಳು. ಸತಿಪತಿಗಳು ಒಂದೆ ರೀತಿಯ ಮನಸ್ಸನ್ನು ಹೊಂದಿರಲು ಆ ಜಂಗಮನಿಗೆ ಸಂತೋಷವಾಯಿತು. ತನ್ನ ತೇಜಸ್ಸಿನಿಂದ ಶಿವ ಪ್ರತ್ಯಕ್ಷನಾಗಿ 'ಪ್ರತಿದಿವಸ ನಿಮ್ಮ ಬಿಡದಿರಲಿ ತವನಿಧಿಯೊಂದು ಗತಿಯನೀವೆಂ' ಎಂದು ಹರಸುತ್ತಾ ತವನಿಧಿಯನ್ನು ನೀಡಿದನು. ತ್ರಿಭುವನ ತಾತನದೆನ್ನಲಾದ ರಗಳೆಯ ಕಥಾವಸ್ತುವೇ ಇಲ್ಲಿಯೂ ರಚಿಸ್ಪಟ್ಟಿದೆ.

**ಷಡಕ್ಷರ ಕವಿಯ ವೃಷಬೇಂದ್ರ ವಿಜಯ**

ಈ ಕೃತಿಯ ಮತ್ತೊಂದು ಹೆಸರು ಬಸವರಾಜ ವಿಜಯ. ಕಾಲ ಕ್ರಿ.ಶ.೧೬೭೭. ಮಡಿವಾಳ ಮಾಚಿದೇವನು ಬಸವೇಶ್ವರನಿಗೆ ಉಪದೇಶ ಮಾಡಿದ ಸಂದರ್ಭದಲ್ಲಿ ಜೇಡರ ದಾಸಿಮಯ್ಯನ ಕಥೆ ಬರುತ್ತದೆ. ಈ ಕೃತಿಯ ತ್ರಯೋದಶ ಶ್ವಾಸದಲ್ಲಿ ಈ ಕಥೆ ವ್ಯಕ್ತಗೊಂಡಿದೆ.

**೧. ಜೇಡರದಾಸಿಮಯ್ಯನ ಅಹಂ ಅನ್ನು ಮದಿಸಿದ ಶಂಕರದಾಸಿಮಯ್ಯ**

ಒಮ್ಮೆ ಬಸವಣ್ಣನು ಬರೆದ 'ಬೇಡುವ ಶಿವ ಭಕ್ತ ಸಮೂಹವಿಲ್ಲದೆ, ತಪ್ಪದೇ ನಾ ನಿಂತು ಬಡವಾದೆನು' ಎಂಬ ನಿಷ್ಠುರದ ವಚನವನ್ನು ಒಬ್ಬ ಶರಣ ಭಕ್ತ ಓದಲಾಗಿ ಅದನ್ನು ಮಾಚಿದೇವ ಕೇಳಿ ಕೋಪಗೊಂಡನು. ಶರಣರು ಎಲ್ಲಿಯಾದರೂ ಬಡವರಾಗಿರುವುದು ಉಂಟೆ, ಶರಣರು ಬೇಡುವವರೇ ಬಸವಣ್ಣನು ಕೊಡುವ ಮಹಾದಾನಿ ಅವನು ನೀಡಿದ ಭಾಷೆಯನ್ನು ಮರೆತರೆ ಅತ್ಯಂತ ತ್ಯಾಗ ಗುಣವುಳ್ಳವನು ಎಂಬ ಅಹಂ ಬಂದೊದಗಿತೇ ಎಂದು ಆತನನ್ನು ಮನದಲ್ಲಿ ಅಲ್ಲಗಳೆಯುತ್ತಾರೆ. ಬಸವಣ್ಣನ ಭಕ್ತಿ ರಸ ಬತ್ತಿಹೋಯಿತು ವಿವೇಕವನ್ನು ಕಳೆದುಕೊಂಡರೆ ಆ ಗೀತವನ್ನು ನನ್ನೆದುರಿಗೆ ಹೇಳಬೇಡ ಎನ್ನುತ್ತ ಕಾಯಕಕ್ಕೆ ಹೊರಟುಹೋದ. ಇತ್ತ ಆ ಭಕ್ತನು ನಡೆದುದನ್ನು ಬಸವಣ್ಣನಿಗೆ ಹೇಳಲು ಆತನು ನಡುಗಿ ಹೋದ, ಆತನ ಚಿತ್ತವು ಕಲಕಿ ಮಾಚಿದೇವನು ಹೋಗುತ್ತಿದ್ದ ದಾರಿಯಲ್ಲೇ ಮುನ್ನಡೆದು, ದಾರಿಯುದ್ದಕ್ಕೂ ನಿಂತು ನಿಂತು ಹೆಜ್ಜೆಹೆಜ್ಜೆಗೂ ಪ್ರೀತಿಯಿಂದ ಭೂಮಿಗೆ ನಮಸ್ಕರಿಸುತ್ತ ಮಾಚಿದೇವನ ಪಾದಗಳಿಗೆರಗಿದನು.

ಮಾಚಿದೇವನು ನಾನಾ ರೀತಿಯಲ್ಲಿ ನಿಂದಿಸುತ್ತಾ 'ನೀನು ದಾನಿಗಳಲ್ಲಿ ಶ್ರೇಷ್ಠನೇ ಹೌದು, ನೀನು ಜಂಗಮ ಸಮುದಾಯಕ್ಕೆ ಪ್ರೀತಿಸಿ ದ್ರವ್ಯವನ್ನು ಕೊಡದಿದ್ದರೆ ವಿಶ್ವಾಸದಿಂದ ಕೊಡುವವರು ಯಾರಿದ್ದರು? ಸಂಪತ್ತಿನ ಸಮೂಹವನ್ನು ಕೊಡುವವನು ಕಲಿದೇವನು ತೆಗೆದು ಕೊಳ್ಳುವವನು ಆತನೆ. ಬೇಡಿದ ಒಡೆಯರಿಗೆ ನಾನು ನಿಜವಾಗಿ ಕೊಡುವವನಲ್ಲ, ಎಂಬ ಒಂದೊಳ್ಳೆ ಭಾವನೆ ಮೃಢಭಕ್ತನಿಗಿರಬೇಕು. ಇಲ್ಲವಾದಲ್ಲಿ ಭಕ್ತಿಯೆಂಬುದು ಅಹಂಕಾರದಿಂದ ಕೂಡಿದ್ದಾಗಿರುತ್ತದೆ' ಎಂದು ಶರಣರು ಭಕ್ತಿಯ ಮೌಲ್ಯ ಹಾಗೂ ಅಹಂಕಾರದ ಪರಿಣಾಮವನ್ನು ಕುರಿತು ಹೇಳುತ್ತಾ, ಶಿವ ನೀಡಿ ವಾಪಾಸು ಪಡೆದುದರ ಕುರಿತು ಬಸವಣ್ಣನಿಗೆ ಮಾಚಿದೇವನು ವಿವರಿಸುವ ಸಂದರ್ಭದಲ್ಲಿ ಶಂಕರದಾಸಿಮಯ್ಯನ ಕಥೆಯನ್ನು[21] ಹೇಳುತ್ತಾನೆ.

ಕುಬೇರನ ಅಲಕಾವತಿಯಂತಿರುವ ನವಿಲೆ ಎಂಬ ಪಟ್ಟಣದಲ್ಲಿ ಪರಮೇಶ್ವರನ ಭಕ್ತನಿದ್ದ, ಅವನು ಋಷಿಗಳಿಂದ ಸ್ತೋತ್ರಿಸಿಕೊಂಡವನು ಪರಾಕ್ರಮಿಯಾದ ಈತನು ಮೃಢರೂಪನು ಸಮಸ್ತ ತಾಪಗಳನ್ನು ನೀಡಿದವನು ಆದ ಭಕ್ತನಾಗಿದ್ದು, ಅವನ ಹೆಸರು ಶಂಕರದಾಸಿಮಯ್ಯ. ವಿಷ್ಣು ಬ್ರಹ್ಮ ಮೊದಲಾದ ಅನ್ಯ ದೈವ ಅಹಂಕಾರಕ್ಕೆ ಅಗ್ನಿಯಂತೆಯೂ ಶಿವ ಮತಕ್ಕೆ ಕಲ್ಪವೃಕ್ಷನಾಗಿಯೂ ಶೈವಾಗಮಗಳಲ್ಲಿ ಪಂಡಿತನಾಗಿದ್ದ. ಈತನು ಜಡೆಯ ಶಂಕರದೇವನ ಪರಮಭಕ್ತನಾಗಿದ್ದ. ಸೂಜಿ ಕಾಯಕದಿಂದ ತಾನು ಪಡೆದ ಐದು ಸೇರು ಧಾನ್ಯವನ್ನು ಪಡೆದು ಆಶ್ಚರ್ಯವೆಂಬಂತೆ ಸಹಸ್ರಾರು ಭಕ್ತರಿಗೆ ತೃಪ್ತಿ ಗೊಳಿಸುತ್ತಿದ್ದನು. ಒಮ್ಮೆ ಜೇಡರದಾಸಿಮಯ್ಯ ಶಂಕರ ದಾಸಿಮಯ್ಯನನ್ನು ನೋಡುವ ಕುತೂಹಲದಿಂದ ಬಂದನು. ಆತನಿಗೆ ನಮಸ್ಕರಿಸಿ ಸ್ವಲ್ಪ ಹೊತ್ತು ಶಿವಾನುಭವ ಗೋಷ್ಠಿಯಲ್ಲಿದ್ದು ನಂತರ ತನ್ನ ಮನೆಗೆ ಬಂದು ಪತ್ನಿಗೆ ದುಃಖದಿಂದ ಹರಭಕ್ತನಾಗಿಯೂ ಕೂಡ ಬಡತನದಿಂದ ಇರುವ ಶಂಕರದಾಸಿಮಯ್ಯನನ್ನು ಕುರಿತು ಹೇಳಿದನು. ಕೂಡಲೇ ಕೆಲ ಧಾನ್ಯ ಸಮೂಹವನ್ನು ಕಳುಹಿಸು ಇಲ್ಲವಾದಲ್ಲಿ ಅವರು ಈಗ ಹಸಿದುಕೊಂಡೆ ಇರಬೇಕಾಗುತ್ತದೆ ಎಂದು ಪತ್ನಿ ದುರ್ಗಾದೇವಿಗೆ ಆಜ್ಞಾಪಿಸಿದ. ತಡಮಾಡದೆ ದುರ್ಗಾದೇವಿ ಧಾನ್ಯವನ್ನು ಕಳುಹಿಸಲು ಶಂಕರದಾಸಿಮಯ್ಯನು ಅದನ್ನು ಕಂಡು ಮುಗುಳು ನಗುತ್ತಾ ಜೇಡರದಾಸಿಮಯ್ಯನನ್ನು ಕುರಿತು

ಒದವಿರ್ದತ್ಯಂತ ಭಾಗ್ಯಂ ಮಿಸುಗೆ ಮೆರೆವ ದಾಸಯ್ಯನೆಮ್ಮೀ ದರಿದ್ರ
ತ್ವದ ಪಾಂಗಂ ಕಂಡು ತಾನೇಂ ಕರುಣಿಯೊ ಮರುಕಂಬೆತ್ತು ಧಾನ್ಯಗಳಂ ತ
ಳ್ವದೆ ತಂದಿತ್ತಂ ಮೊದಲ್ಧಾನ್ಯದ ಘನನಿಧಿಯಂ ವಸ್ತ್ರಂ ಕೊಟ್ಟು ಕೊಂಡಂ[22]

ಎನ್ನುತ್ತಾ ದಾಸಿಮಯ್ಯ ಬಟ್ಟೆಯನ್ನು ಕೊಟ್ಟು ತವನಿಧಿ ಪಡೆದದ್ದನ್ನು ಬಡವನಾದ ನಾನು ಪ್ರೀತಿಯಿಂದ ಆತನಿಗೆ ಏನನ್ನು ಕೊಡಲಿ ಎನ್ನುತ್ತಾ, ತಿರಸ್ಕಾರದಲ್ಲಿ ಹಿಡಿ ಭತ್ತವನ್ನು ಹಿಡಿಯಲ್ಲಿ

ಹಿಡಿದು ನೆಲದ ಮೇಲೆ ಇರಿಸಲು ಜೇಡರದಾಸಿಮಯ್ಯನ ಮನೆಯಲ್ಲಿದ್ದ ತವನಿಧಿಯು ಆ ಕ್ಷಣದಲ್ಲಿ ನಾಶವಾಗಿ ಹೋಯಿತು. ಇದನ್ನು ಕಂಡು ಜೇಡರ ದಾಸಿಮಯ್ಯ ಭಯಗೊಂಡು ಸ್ತಬ್ಧನಾಗಿ, ಮನದಲ್ಲಿಯೇ ವ್ಯಾಕುಲಗೊಂಡನು. ಹೀಗೆ ಕಳವಳಗೊಂಡ ಪತಿಯನ್ನು ದುರ್ಗಾ ದೇವಿಯು ನೋಡಿ ಇಂತು ನುಡಿದಳು.

ಸರಿಬೆಸೆದಾಟಮನೇಂ ಕೇ
ಸರಿಯೊಡನಾಡಿದರುಮೊಳರೆ ಶರಣನ ಪರಿಯಂ
ಪರಿಕಿಸದೆ ಕಳುಪಿ ಧಾನ್ಯಮ
ನುರುಮದದೀ ನಿಧಿಯನಿಂತು ನೀಗಿದೆಯಕಟಾ೭೮

ಎಂದರೆ ಸಿಂಹದೊಡನೆ ಆಟವಾಡುವುದು ಸರಿಯೇ? ಶರಣರ ನಿಯಮವನ್ನು ಅರಿಯದೆ ಅಧಿಕ ಗರ್ವದಿಂದ ಧಾನ್ಯವನ್ನು ಕಳೆದುಕೊಂಡೆ. ಬರಿಯ ಮಾನದಿಂದ ಸಹಸ್ರ ಸಹಸ್ರ ಜನ ಭಕ್ತರ ಕೊರತೆಯನ್ನು ನೀಗಿಸುವ ಶಂಕರದಾಸಿಮಯ್ಯನು ನಿಜವಾಗಿಯೂ ಬಡವನೇ, ಅವನ ಮಹಿಮೆಯನ್ನು ಹೇಳಲು ಸಾಧ್ಯವೇ? ಸ್ವತಃ ಶಿವನೇ ಪ್ರತ್ಯಕ್ಷಗೊಂಡು 'ವರ ಬೇಡು' ಎನಲು ನಿನ್ನ ಪಾದಕಮಲವೆಂಬ ನಿಕ್ಷೇಪವೇ ಬಳಿ ಇರುವಾಗ ಬೇರೆ ವರಗಳುಂಟೆ ಎಂದವನು. ತನ್ನ ಕಾಯಕಕ್ಕಾಗಿ ಸೂಜಿ ರಾತ್ರಿ ಹೊತ್ತು ಕಾಣುವಂತೆ ಕಣ್ಣಿಗೆ ಕಾಂತಿ ದೊರೆಯುವ ವರವನ್ನು ಮಾತ್ರ ಬೇಡಿದಾತ. ಇದನ್ನು ಕಂಡ ಪರಶಿವನು ಸಂತಸಗೊಂಡು ಕತ್ತಲೆಯನ್ನು ನಾಶಗೊಳಿಸುವ ಶಕ್ತಿ ಅಗ್ನಿಗಲ್ಲದೆ ಮತ್ತಾರಿಗೂ ಇಲ್ಲ ಎಂದು ಶಂಕರ ದಾಸಿಮಯ್ಯನಿಗೆ ಅಗ್ನಿನೇತ್ರವನ್ನು ಕೊಟ್ಟನು.

ಇಂದ್ರ, ಉರಿ, ಬ್ರಾಹ್ಮಿ, ಮಾಹೇಶ್ವರಿ, ಕೌಮಾರಿ, ಮಾಳವಿ ಮುಂತಾದ ದೇವತೆಗಳನ್ನು ಭಂಜಿಸಿ ಮೆರೆಯುತ್ತಿದ್ದನು. ಮಾಳವಿ ಮೈಲಾರನು ಸೇರಿದಂತೆ ಹಲವು ದೈವಗಳು ಶಂಕರದಾಸಿಮಯ್ಯನ ಆಳುಗಳಂತೆ ಸೇವೆಯನ್ನು ಮಾಡುತ್ತಿದ್ದರು. ಹೀಗೆ ದೇವತೆಗಳಿಂದಲೇ ಸೇವೆಗೈದುಕೊಂಡ ಶಂಕರದಾಸಿಮಯ್ಯನನ್ನು ಕಂಡು ಜಯಸಿಂಹ ಅಥವಾ ಜಗದೇಕಮಲ್ಲನೆಂಬ ರಾಜನು ಹೊಟ್ಟೆಕಿಚ್ಚನ್ನು ಹೊಂದಿ

ಫಣಿಧರನಿಂ ಪಡೆದಂ ಗಡ
ಪಣೆಗಣ್ಣಂ ಸುರನುರುಪುವಂ ಗಡ ಪರರಂ
ಗಣಿಸಂ ಗಡನೋಳ್ಪಂತ
ನ್ನಣಕಮನೆಮ್ಮೂರೊಳಿರ್ಪ ದಾಮೋದರನಂ೭೯

ಶಿವಭಕ್ತರನ್ನು ಲೆಕ್ಕಿಸದೆ ಇರುವ ಶಂಕರದಾಸಿಮಯ್ಯನ ಕಾರ್ಯವನ್ನು ನೋಡಿಕೊಳ್ಳುತ್ತೇನೆಂದು ಮುಂದುವರೆದ ಜಗದೇಕಮಲ್ಲನೆದುರು ವಿಷ್ಣು ವಿಗ್ರಹವನ್ನು ತನ್ನ ಹಣೆಗಣ್ಣಿನಿಂದಲೇ ಸುಟ್ಟುದನ್ನು ದುರ್ಗಾದೇವಿ ಹೇಳುತ್ತಾ, ಶಂಕರದಾಸಿಮಯ್ಯ ಅನ್ಯ ದೇವ ಕೋಲಾಹಲನೆಂಬ ಬಿರುದುಳ್ಳವನು ಎಂದು ಹೇಳುತ್ತಾ, ಇಬ್ಬರೂ ಆತನಲ್ಲಿಗೆ ಕ್ಷಮೆಯಾಚನೆಗೆ ಪ್ರಾಯಶ್ಚಿತ ಕೇಳಬೇಕೆನ್ನುವಷ್ಟರಲ್ಲಿ ಶಂಕರದಾಸಿಮಯ್ಯ ಮಹಿಮಾದಿ ಅಷ್ಟಸಿದ್ಧಿಗಳ ಸೇವೆ ಮಾಡುತ್ತಿರುವ ಸಿಂಹಾಸನದಲ್ಲಿ ಕುಳಿತು ಕೊಂಡಿರುವುದು ಕಂಡುಬಂತು. ದಂಪತಿಗಳು ನಮಸ್ಕರಿಸಿ ಮೇಲೇಳಲು ದೇವತಾ ಸಮೂಹವೇ ಸುತ್ತಲೂ ಕಂಡುಬಂತು. ದಂಪತಿಗಳು ವಿವಿಧ ರೀತಿಯಲ್ಲಿ ಸ್ತೋತ್ರ ಮಾಡಿ ಹೀಗೆಂದರು

ಕರುಣಾಸಾಗರ ಜೀಯದಿವ್ಯ ಮಹಿಮಾಲಂಕಾರ ಭಾಳಾಕ್ಷಶಂ
ಕರದಾಸಾರ್ಯ ಭವನ್ನಹತ್ವಮನದೆಣತುಂ ಕಾಣದಜ್ಞೆರ್ಗೆ ನೀಂ
ಶರಣಗೊಲ್ದೆ ಮಗನ್ಯಥಾಗಲೆವಿಹೀನರ್ಗೆಂದು ಬಾಯ್ಬಿಟ್ಟು ತ
ಚ್ಚರಣಾಂಬೋರುಹಯುಗ್ಮದೊಳ್ಕೆಡೆದರಾ ದುರ್ಗಾಂಬೆಯುಂ ದಾಸನುಂ೮೦

ಎಮಗೆ ನೀನೇ ರಕ್ಷಕನಾಗು ಎನಲು ಶಿವನಿಗೆ ವಸ್ತ್ರವನ್ನು ನೀಡಿ ತವನಿಧಿಯನ್ನು ಪಡೆದವನು ನೀನು. ಮತ್ತೊಮ್ಮೆ ಶಿವನನ್ನು ಬೇಡು ಕೊಡುವನು. ನಾನು ಬಡವ ನಾನೇನು ಕೊಡುವೆ. ಇದುವರೆಗೂ ನನ್ನ ತೊಂದರೆಯನ್ನು ಬಗೆಹರಿಸಿದವ ನೀನು. ಜಗತ್ತಿನಿಂದಲೇ ಶ್ಲಾಘಿಸಲ್ಪಡುತ್ತಿರುವ ಭಕ್ತಸಮೂಹಕ್ಕೆ ಕಲ್ಪವೃಕ್ಷಪ್ರಾಯ ನೀನು. ದಾನಿಗಳಲ್ಲಿಯೇ ಶ್ರೇಷ್ಠನಾದವನು ಎಂದು ಹೀಯಾಳಿಸುತ್ತಾನೆ. ದಾಸಿಮಯ್ಯ ಭಯದಿಂದಾದ ಭಕ್ತಿ ಚರಿತ್ರೆಯನ್ನು ಹೊಂದಿದವನು ನೀನು. ನಯ–ವಿನಯದಿಂದ ಸನ್ಮಾನಿತನಾದವ ಎಂದು ಜೇಡರದಾಸಿಮಯ್ಯನ ಕೈಗೆ ಗುದ್ದಲಿಯನ್ನು ಕೊಟ್ಟು, ಭೂಮಿಯ ಮೇಲೆ ಅಲ್ಲೇ ಇರುವ ಜಂಗಮರ ಪಾದದ ಧೂಳನ್ನು ಉದುರಿಸಿ, ಈ ಭೂಮಿಯನ್ನು ಅಗೆ ಎಂದು ಆಜ್ಞಾಪಿಸಿದನು. ಜೇಡರದಾಸಿಮಯ್ಯನು ಅಗೆಯಲು ಹೊನ್ನ ರಾಶಿ ಕಂಡು ಬಂದಿತು. ಅದನ್ನು ಕಂಡು

ಪಿರಿದದದ್ಭುತಮೊಗೆಯೆ ಭಯ
ಸ್ಫುರಿತಾಂತಃಕರಣರಾಗಿ ದುರ್ಗಾಂಬಿಕೆಯುಂ
ವರ ದಾಸಯ್ಯನು ಮೂ ಶಂ
ಕರದಾಸಯ್ಯನಂಘ್ರಿವಿಡಿದು ಪೊಡಮಟ್ಟಿರ್ದರ್೮೧

ಹೀಗೆ ಕುಬೇರನಿಗೆ ಚಿನ್ನದ ಒಂದು ಹೊರೆಯನ್ನು, ಆದಿಶೇಷನಿಗೆ ನೂತನ ಹಾಸಿಗೆಯನ್ನು ಕೊಡುವಂತಹ ಅವಿವೇಕದಿಂದ ಅಲ್ಪ ಧಾನ್ಯವನ್ನು ಕೊಟ್ಟು, ಅಪರಾಧ ಮಾಡಿದೆ ಎಂದು

ದೈನ್ಯದಿಂದ ಪತ್ನಿಯೊಂದಿಗೆ ಬೇಡಿಕೊಳ್ಳಲು, ಶಂಕರದಾಸಿಮಯ್ಯನು ಕಡೆಗಣ್ಣಿನಿಂದ ನೋಡಲು ಕಾಂತಿಯೊಂದು ಹೊರಹೊಮ್ಮಿತ್ತು. ಶಂಕರದಾಸಿಮಯ್ಯನು ಈ ಕಾಂತಿಯಿಂದ ಅವರನ್ನು ಕ್ಷಮಿಸಿ ಮೊದಲಿನಹಾಗಿರುವಂತೆ ಅಕ್ಷಯ ನಿಧಿಯನ್ನು ಕರುಣಿಸಿದನು. ಈ ಕತೆಯನ್ನು ಬಸವಣ್ಣನಿಗೆ ಮಾಚಿದೇವ ಹೇಳುತ್ತಾನೆ. ಭಕ್ತರಿಗೆ ಮದವು ಸಲ್ಲದು ಎಂಬುದು ಕಥಾ ಸ್ವಾರಸ್ಯ. ಇದೂ ಸಹ ಹರಿಹರನ ಪರಂಪರೆಗೆ ಸೇರುವ ಕಥೆಯಾಗಿದೆ.

**೨. ಜಯಸಿಂಹನಾ ರಾಣಿ ಸುಗ್ಗಲೆ ಹಾಗೂ ದೇವರದಾಸಿಮಯ್ಯನ ಕಥೆ**

ಇದೇ ಕಾವ್ಯದಲ್ಲಿ ಮೂವತ್ತೈದನೇ ಆಶ್ವಾಸದಲ್ಲಿ ಕೋವೂರು ಬೊಮ್ಮಯ್ಯನ ಕಥೆ ಬರುತ್ತದೆ. ಕೋವೂರ ಬೊಮ್ಮಯ್ಯ ತನ್ನ ಸದಾಚಾರಗಳಿಂದ ಕೀರ್ತಿವಂತನಾಗಿದ್ದು, ಜೈನತಪಸ್ವಿಗಳನ್ನು ವಾದದಲ್ಲಿ ಪರಾಕ್ರಮ ಮೆರೆದು ಗೆದ್ದಿದ್ದನು. ಸೋತ ಜೈನರು 'ಒಂದು ದೊಡ್ಡ ಆಲದ ಮರವನ್ನು ನೀನು ಸುಟ್ಟು ಉಳಿಸು ಅದನ್ನು ನಾವು ಪುನಃ ಮಂತ್ರದಿಂದ ಬದುಕಿಸುತ್ತೇವೆ. ಇಲ್ಲವೇ ನಾವೇ ಆಲದ ಮರವನ್ನು ಸುಡುತ್ತೇವೆ ನೀನು ಬದುಕಿಸು'

ಪೇರಾಲಮಂ ನೀನೆ ಸು
ಟ್ಟುರುಪಂತಲ್ಲದೊಡಾವೆ ಸುಟ್ಟಪೇವಿದಂ ನೀ ಬಾಳಿಸೈ ಮಂತ್ರದಂ[೮]

ಈ ಎರಡರಲ್ಲಿ ಒಂದಕ್ಕೆ ನಿನ್ನ ಅಭಿಮತವನ್ನು ತಿಳಿಸು ಎನ್ನುತ್ತಾರೆ. 'ಈ ದೃಷ್ಟಾಂತಮೆಮ್ಮ ಮಹಿಮೆಗಂ ನಿಮ್ಮ ಪೆಮೆರ್ಗಮೆಂದು' ಕುಮಂತ್ರ ತಂತ್ರದಲ್ಲಿ ನಿಪುಣರಾದ ಜೈನ ಸನ್ಯಾಸಿಗಳು ಹೇಳಲಾಗಿ, ಬೊಮ್ಮಯ್ಯನು ಅವರ ಮಾತಿಗೆ 'ತಾನೆ ಹಸಿದು ಅನ್ಯರಿಗೆ ತನ್ನ ಹಣ್ಣುಹಂಪಲುಗಳನ್ನು ನೀಡಿ ಹಸಿವನ್ನು ದೂರಮಾಡುವವ, ನಿತ್ಯ ತಾನೇ ಬಿಸಿಲಲ್ಲಿ ಬಳಲಿ ಅನ್ಯರಿಗೆ ನೆರಳನ್ನು ನೀಡುವ, ಸಹಸ್ರ ಪಕ್ಷಿಗಳಿಗೆ ಆಶ್ರಯ ನೀಡುವ ಇಂತಹ ಮರವನ್ನು ಸುಡಲು ಶಿವ ಭಕ್ತ ಸಮೂಹವು ಒಪ್ಪುವುದಿಲ್ಲ. ಆದ್ದರಿಂದ ನೀವೇ ಸುಟ್ಟು ಹಾಕಿರಿ. ನಾನು ಆಲವನ್ನು ಮರಳಿ ಪಡೆಯುತ್ತೇನೆ' ಎಂದನು. ಜೈನರು ಹೀಯಾಳಿಸಿ ಆಲದ ಮರವನ್ನು ಸುಟ್ಟು ಹಾಕುತ್ತಾರೆ. ಬೊಮ್ಮಯ್ಯನು ವಿಶೇಷ ಬೂದಿಯನ್ನು ಚಿಮುಕಿಸಿ ಮತ್ತೆ ಮರಕ್ಕೆ ಜೀವ ತುಂಬುತ್ತಾನೆ. ಹೀಗೆ ಜೈನರನ್ನು ಜಯಿಸಿ ಜಿನಮಂದಿರಗಳನ್ನು ನಾಶ ಮಾಡಿ ಶೌರ್ಯವನ್ನು ಮೆರೆಯುತ್ತಾನೆ. ಈ ಸಂದರ್ಭದಲ್ಲಿ ಕವಿ ದೇವರದಾಸಿಮಯ್ಯನನ್ನು ನೆನೆದು ಆತನ ಕಥೆಯನ್ನು ವಿವರಿಸುತ್ತಾರೆ.

'ಪೊಟ್ಟಲಕೆರೆ' ಎಂಬ ಪಟ್ಟಣ. ಅದರ ಅರಸ ಜಯಸಿಂಹನೆಂಬುವನು. ಆತನು ಜೈನ ಧರ್ಮ ಅನುಯಾಯಿಯಾಗಿದ್ದು, ತುಂಬಾ ಶೌರ್ಯ ಪರಾಕ್ರಮಗಳಿಂದ ಯಶಸ್ವಿಹೊಂದಿದ್ದ. ಅಂತೆಯೇ ಭೂಮಂಡಲದಲ್ಲಿ ಪ್ರಶಂಸನಿಯನೂ, ಶಾಸ್ತ್ರ ವಾದಗಳಲ್ಲಿ ಕುಶಲಮತಿಯೂ,

ಸಮರ್ಥನೂ ಆದ ಜೈನ ಗುರು 'ಪುಷ್ಪ ಸೇನಕ'ನ ಶಿಷ್ಯನಾಗಿದ್ದನು. ಈ 'ಪುಷ್ಪಸೇನ'ನು ತನ್ನ ಸಮಾನರಾದ ೨೦,೦೦೦ ಶಿಷ್ಯರನ್ನು ಹೊಂದಿದ್ದು ಗರ್ವದಿಂದ ಇದ್ದನು. ಆ ಪಟ್ಟಣದ ಇತರ ಜನರಿಗೆ ಜೈನಧರ್ಮವನ್ನು ಬೋಧಿಸುತ್ತಾ ಅವರನ್ನು ಜೈನರನ್ನಾಗಿ ಮಾಡುತ್ತಾ ಪ್ರಸಿದ್ಧಿ ಪಡೆದಿದ್ದನು.

ಜಯಸಿಂಹನ ರಾಣಿ 'ಸೃಗ್ವಲೆದೇವಿ' (ಸುಗ್ಗಲಾದೇವಿ). ಈಕೆ ಶಿವಭಕ್ತೆಯಾಗಿದ್ದು, ಪುಷ್ಪಸೇನಕನ ಪರಿಯನ್ನು ಸಹಿಸಲಾರದೆ ಆತನ ಅಹಂಕಾರವನ್ನು ಅಡಗಿಸಬೇಕೆಂದು ಯೋಚಿಸಿ ಶರಣ ಸಮೂಹದಿಂದ ಕೂಡಿದ ತನ್ನ ಗುರು 'ದಾಸಿಮಯ್ಯ'ನ್ನು ತನ್ನ ಆಪ್ತರ ಮೂಲಕ ವಿಜ್ಞಾಪಿಸಿಕೊಂಡು ಅರಮನೆಗೆ ಬರಮಾಡಿಕೊಂಡಳು. ತನ್ನ ಉಪವನದ ರತ್ನಖಚಿತವಾಗಿ ನಿರ್ಮಿತವಾದ ಬಿಡಾರದಲ್ಲಿ ಅವರನ್ನಿರಿಸಿದಳು. ಇದರಿಂದ ಕೋಪಗೊಂಡ ಜೈನರು ರಾಜನಲ್ಲಿಗೆ ಬಂದು

ನಿನ್ನ ವಲ್ಲಭೆ ಶೈವನೊರ್ವನಿಂದು ಮದ್ಗುರುವೆಂದು ಮೇ
ಲನ್ನಿರೀಕ್ಷಸದಿಲ್ಲಿಗೆಯ್ದಿಸಿ ಪೂಜೆಗೆಯ್ದು ಪಳಿತಿಂದೋಂ
ದನ್ನೆಯಂ ಜಿನಶುದ್ಧ ಧರ್ಮವಿರುದ್ಧ ಮಾತನೀಗಳಿ
ಲ್ಲಿನ್ನಿವಾರಿಪುದೆಂದೊಡಂಬಡೆ ಪೇಳೆ ಕೇಳು ನರೇಶ್ವರ[೮೩]

ಎಂದು ಪತ್ನಿಯ ಕುರಿತು ಚಾಡಿ ಹೇಳಲು, ಜಯಸಿಂಹನು ಎಲೆ ಸತಿಯೇ ನನ್ನ ಜೈನ ಧರ್ಮಾಚರಣೆಯ ರೀತಿಯನ್ನು ತಿಳಿಯದೆ ಶೈವನ ಪಾದಗಳನ್ನು ಪೂಜಿಸುವುದು ಸರಿಯೇ? ಎಂದು ಸುಗ್ವಲಾದೇವಿಯನ್ನು ಕೇಳುತ್ತಾನೆ.

ಸತಿಗಂ ಪತಿಗಂ ಗುರುವುಂ
ಮತದೈವ ಮೆಮೆಮಬಿವಬಲೆ ಪೆರತೊಳವೆ ವಲಂ
ಪತಿದೇವ ಗುರುವೆನುತ್ತಿರೆ
ಹೀತೋಕ್ತಿ ನೀನನ್ಯಗುರುವನಾರಾಧಿಪುದೇ[೮೪]

ಎಂದು ಹೇಳುತ್ತಾ ದಾಸಿಮಯ್ಯನನ್ನು ಇಲ್ಲಿಂದ ಕಳುಹಿಸಿಬಿಡು ಎನ್ನುತ್ತಾನೆ. ಅದಕ್ಕೆ ಸೃಗ್ವಲೆಯು ಕೋಪಗೊಂಡು ಸತಿಗೂ ಪತಿಗೂ ಗುರು ಬೇರಿಲ್ಲವೆಂದೆನ್ನುತ್ತೀಯಾ? ಹಾಗಾದರೆ ಶ್ರೇಷ್ಠವಾದ ಗುರುವಿಗೂ ಶಿಷ್ಯರಿಗೂ ಬೇರೆ ಬೇರೆ ಮತಗಳು ಉಂಟೆ ಎಂದು ಕೇಳುತ್ತಾಳೆ. ಇಡೀ ಭೂಮಿಯನ್ನು ಆವರಿಸಿದ ಕತ್ತಲೆಯನ್ನು ಹೋಗಲಾಡಿಸಲು ಬಂದವನಾತ ಸುಮ್ಮನೆ ಹೇಗೆ ಹೋಗುವನು ಎಂದು ಹೇಳಿ ರಾಜನಿಗೆ ಸವಾಲು ಹಾಕುತ್ತಾಳೆ. ರಾಜನೆ ಜೈನಮುನಿಗಳ

ಸಮೂಹವನ್ನು ಬರಮಾಡು, ವಾದವಿವಾದಗಳನ್ನು ಆಗಮ, ಸಮುದಾಯ ಶಾಸ್ತ್ರಗಳು ಸತ್ಪ್ರಮಾಣದಲ್ಲಿ ನಡೆಯುವಂತೆ ಮಾಡಿಸು. ನನ್ನ ಗುರು ಗೆದ್ದರೆ ಅವನ ಪಾದಕಮಲಗಳನ್ನು ನೀನು ಮನಃಪೂರ್ವಕವಾಗಿ ಹಿಡಿದು ಶೈವ ಮತವನ್ನು ಅನುಸರಿಸಬೇಕು. ಇಲ್ಲವಾದಲ್ಲಿ ವಿವಾಹ ಸಂದರ್ಭದ ಮಾತಿನಂತೆ ನನ್ನನ್ನು ಬಿಟ್ಟು ಬೇರೊಬ್ಬಳನ್ನು ವರಿಸು ಎಂದು ಹೇಳುತ್ತಾಳೆ.

ರಾಜನು ಆ ಮಾತಿನಂತೆ ಜೈನ ಸನ್ಯಾಸಿಗಳನ್ನು ಸಭೆಗೆ ಕರೆಸುತ್ತಾನೆ. ದಾಸಿಮಯ್ಯನಿಗೂ ಜೈನರಿಗೂ ವಾದಗಳು ನಡೆಯಲು ವೇದಾಗಮ, ಮೀಮಾಂಸೆ, ಉಪನಿಷತ್ತು, ಪುರಾಣ, ತರ್ಕ, ವೈಶೇಷಿಕಗಳೊಂದಿಗೆ ತನ್ನ ತತ್ವಾರ್ಥಗಳನ್ನು ಸೇರಿಸಿ ವಾದದಲ್ಲಿ ಮಂಡಿಸಿ' 'ಸಕಳ ಜಗದಾದಿಕಾರಣ ಸಕಳಂಕಂ ರಾಮನಾಥನೋರ್ವನೆ ವಿಶ್ವಾಧಿಕನದ್ವಿತೀಯನು', ಅಂಜಲಿಯಂ ಎಂದು ದಾಸಿಮಯ್ಯನು ಹೇಳುತ್ತಾ 'ಲಿಂಗ ಮಧ್ಯೇಜಗತ್ ಸರ್ವಂ' ಎಂಬ ಮಾತು ಸತ್ಯವಾದುದೆಂದು ತನ್ನ ವಾದವನ್ನು ಮಂಡಿಸುತ್ತಾನೆ.

ಜೈನರು ಎಲ್ಲವೂ ಶಿವಮಯ ಎಂದೆನ್ನುತ್ತೀಯೇ? ನಿನ್ನ ಮಾತಿನಂತೆ ಶಿವಮಯವಾಗಿದ್ದರೆ ಗುಡಿ ಇದ್ದಲ್ಲಿಗೆ ಏಕೆ ಭಕ್ತರು ಹೋಗುತ್ತಾರೆ; ಇದ್ದಲ್ಲಿಯೇ ನಮಿಸಲಾಗುವುದಿಲ್ಲವೇ? ಎನ್ನುತ್ತಾರೆ. ಮತ್ತೊಂದು ಪ್ರಶ್ನೆ ಶಿವನೇ ಎಲ್ಲದರಲ್ಲಿಯೂ ಸೇರಿರುವಾಗ, ಆತನು ದೇಹಿಯೋ. ಜೀವನೋ, ಶೋಭಿಸುವ ಆತ್ಮನೋ? ಹೇಳು ಎಂದು ಕೇಳುತ್ತಾರೆ.

ಮೊದಲ ಪ್ರಶ್ನೆಗೆ ದಾಸಿಮಯ್ಯ, ಸಮಸ್ತ ಭೂಮಿಯನ್ನು ಅರಸನು ಆವರಿಸಿದ್ದಾನೆ. ಆದರೂ ಎಲ್ಲವೂ ಅರಸನೇ ಆಗಿರುವುದಿಲ್ಲ. ಬ್ರಾಹ್ಮಣ, ವ್ಯಾಧ, ಶ್ವಪಚರೇ, ಅಧಿಕವಾಗಿರುತ್ತಾರೆ. ಈ ಎಲ್ಲರಲ್ಲಿಯೂ ಆಜ್ಞಾ ಪ್ರೇರಿತನೆಂಬಂತೆ ಅರಸ ಭೂಮಂಡಲವನ್ನು ಆಳುತ್ತಿರುತ್ತಾನೆ. ಅಂತೆಯೇ ಕೊಡದಲ್ಲಿರುವ ನೀರಿನಂತೆ ಕಾಣುವ ಸೂರ್ಯನ ಪ್ರತಿಬಿಂಬಕ್ಕೆ, ಘಟದ ನೀರಿನಲ್ಲಿರುವ ಪ್ರತಿಬಿಂಬಕ್ಕೆ ವ್ಯತ್ಯಾಸಗಳಿವೆ. ಅದರಂತೆ ಚೈತನ್ಯಮಯ ದೇಹದಲ್ಲಿರುವ ಜೀವಾತ್ಮನಲ್ಲಿ ಬೆಸುಗೆಗೊಂಡ ಪರಶಿವ ಬೇರೆಯೇ ಇರುತ್ತಾನೆ. ಆತನು ಸರ್ವೋವ್ಯೈರುದ್ರಃ, ವಿಶ್ವಾಧಿಕಃ, ಪಶುನಾಂಪತಿಃ ಅಂದರೆ ರುದ್ರನು ವಸ್ತು ಸ್ವರೂಪ, ವಿಷ್ಣು, ಬ್ರಹ್ಮಾದಿ ಜೀವರುಗಳಿಗೆ ಪತಿಯಾದ ಶಿವ ಪ್ರಪಂಚಕ್ಕೆ ದೊಡ್ಡವನು. ಎಂದು ಆ ಮಾತಿಗೆ ತಾತ್ಪರ್ಯ ಹೇಳಿದನು.

ಇನ್ನು ಎರಡನೇ ಪ್ರಶ್ನೆ ಶಿವನೇ ಚರಾಚರ ಎಂದಿರುವಾಗ ದೇವಾಲಯಗಳಿಗೆ ಓಡಾಡುವುದೇಕೆ? ಎಂದು. ಇದಕ್ಕೆ ದಾಸಿಮಯ್ಯನು ಬಸವಪುರಾಣದಲ್ಲಿ ಹೇಳಿರುವಂತೆಯೇ ಸ್ವಾತಿಮಳೆ–ಕಪ್ಪೆಚಿಪ್ಪು ಹಾಗೂ ಚಂದ್ರಕಾಂತ ಶಿಲೆ–ಚಂದ್ರನ ಉದಾಹರಣೆಯನ್ನು ನೀಡಿ ಪರಶಿವ ಮತ್ತು ಶ್ರೇಷ್ಠ ಭಕ್ತರಿಗಿರುವ ಸಂಬಂಧವನ್ನು, ಅವರು ಪರಸ್ಪರ ವ್ಯವಹರಿಸಿಕೊಂಡು ಕೊಳ್ಳುವುದನ್ನು ಹೇಳುತ್ತಾನೆ. ಜಗತ್ತು ಸತ್ಪ್ರೀತಿಯಿಂದ ಬಾಳಲು ಭಕ್ತರಲ್ಲದವರು ಶಿವನ ದರ್ಶನವನ್ನು

ಪಡೆಯಲಾಗುವುದಿಲ್ಲವೆಂದು ಉತ್ತರವಿತ್ತನು. ಮೂರನೇ ಪ್ರಶ್ನೆ ಶಂಕರನು ಅಂಗನೋ, ಜೀವನೋ, ಶೋಭಿಸುವ ಆತ್ಮನೋ? ಎಂಬುದು. ಇದಕ್ಕೂ ದಾಸಿಮಯ್ಯನು ಸಮರ್ಪಕ ಉತ್ತರವನ್ನು ನೀಡುತ್ತಾನೆ. ವಾದಗಳು ಬೆಳೆದು ಜೈನರು ದಾಸಿಮಯ್ಯನಿಂದ ಸೋಲನ್ನು ಒಪ್ಪಿಕೊಳ್ಳಲಾಗದೆ ಅರಸನ ಎದುರು ಒಂದು ಸರ್ಪವನ್ನು ಕುಂಭದಲ್ಲಿರಿಸಿ ಪರೀಕ್ಷೆಗೆ ಒಡ್ಡಲು ಆ ಸರ್ಪ ಸ್ಫಟಿಕಲಿಂಗವಾಯಿತು. ಅದಕ್ಕೆ 'ಉತ್ತರೇಶ್ವರ'ನೆಂದು ಹೆಸರಿಟ್ಟು ಅಲ್ಲಿಯೇ ಪ್ರತಿಷ್ಠಾಪಿಸಲಾಯಿತು ಎಂಬ ಕತೆ ನಿರೂಪಿತವಾಗಿದೆ. ಷಡಕ್ಷರ ಕವಿಯ ಈ ಕಾವ್ಯವು ಬಸವಪುರಾಣವನ್ನೆ ಅನುಸರಿಸಿದಂತೆ ಕಾಣುತ್ತದೆ.

### ಕಿಕ್ಕೇರಿ ಆರಾಧ್ಯ ನಂಜುಂಡನ 'ಭೈರವೇಶ್ವರ ಕಾವ್ಯ'

ಕಿಕ್ಕೇರಿ ಆರಾಧ್ಯ ನಂಜುಂಡನ ಕೃತಿ 'ಭೈರವೇಶ್ವರ' ಕಾವ್ಯದಲ್ಲಿ ಎರಡನೆಯ ಸಂಧಿಯಲ್ಲಿ ದಾಸಿಮಯ್ಯನ ತವನಿಧಿಯ ಉಲ್ಲೇಖ ಕಂಡುಬರುತ್ತದೆ. ಈ ಕೃತಿಯ ಕಾಲ ಕ್ರಿ.ಶ. ೧೫೫೦.

ಬಡಭಕ್ತನನೆಂದೊಂದು
ಹೆಡಗೆ ಧಾನ್ಯವ ಕೊಡ
ಲೊಡನೆ ದಾಸನ ತವನಿಧಿಯ
ತಡದವರು ಹೊಡ
ಗಡೆಯೇ ಪೆಚ್ಚಿತ್ತು ಕ
ಟೊಡೆದು ಶಂಕರದಾಸಿಮಯ್ಯ[೮೫]

ಜೇಡರದಾಸಿಮಯ್ಯನು ಶಂಕರದಾಸಿಮಯ್ಯನನ್ನು ಬಡಭಕ್ತನೆಂದು ತಿಳಿದು ಹೆಡಗೆ ಧಾನ್ಯವನ್ನು ಕೊಟ್ಟು ತವನಿಧಿಯನ್ನು ಕಳೆದುಕೊಂಡು ಮತ್ತೆ ಪಡೆದ ಘಟನೆಯನ್ನು ಮಾತ್ರ ಈ ಪದ್ಯ ಹೇಳುತ್ತದೆ.

### ವಿರೂಪಾಕ್ಷ ಪಂಡಿತನ 'ಚನ್ನಬಸವ ಪುರಾಣ'

ಈ ಕೃತಿಯಲ್ಲಿ ಶಂಕರದಾಸಿಮಯ್ಯನು ಜೇಡರದಾಸಿಮಯ್ಯನ ತವನಿಧಿಯನ್ನು ಬಯಲು ಮಾಡಿದ ಪ್ರಸಂಗದ ಒಂದು ಪದ್ಯ ದೊರೆಯುತ್ತದೆ

ಒಯ್ಯನೀಶ್ವರನಿಂದೆ ಪಡೆದು ಶಂಕರದಾಸಿ
ಮಯ್ಯಂ ನೊಸಲ್ಗಣ್ಣನನ್ಯದೈವಂಗಳಂ
ಕೆಯ್ಯೊಡನೆ ನೋಡಿ ದಹಿಸುವನೀಶನಿಂದೆ ತವನಿಧಿಯ ಜೇಡರದಾಸನು
ಕೆಯ್ಯಾರೆ ಪಡೆದು ಭಕ್ತಗಳ ಶಂಕರದಾಸಿ

ಮಯ್ಯನಾಲಯಕಟ್ಟಲಾತನೀಕ್ಷಿಸಿ ತನ್ನ
ಕೆಯ್ಯೊಳವನಡಗಿಸಲ್ಕಡಗಿತಾತಂ ಪಡೆದ ತವನಿಧಿಯದಾಕ್ಷಣದೊಳು[೮೬]

ಅಂದರೆ ಈಶ್ವರನಿಂದ ಹಣೆಗಣ್ಣನ್ನು ಪಡೆದ ಶಂಕರದಾಸಿಮಯ್ಯನು ತನ್ನ ನೊಸಲ್ಗಣ್ಣಿನಿಂದ ಅನ್ಯದೈವಗಳನ್ನು ಕಂಡೊಡನೆ ದಹಿಸುವನು. ಅಂತಹ ಭಕ್ತನಿಗೆ ಜೇಡರದಾಸಿಮಯ್ಯನು ಮನೆಗೆ ಭತ್ತವನ್ನು ಕಳುಹಿಸಲು ಅದನ್ನು ಕೈಯಲ್ಲಿಯೇ ಶಂಕರದಾಸಿಮಯ್ಯ ಮರೆಮಾಡಲು ಅದು ಕ್ಷೀಣಿಸಿದ್ದು ಈ ಪದ್ಯದಲ್ಲಿ ವ್ಯಕ್ತವಾಗಿದೆ.

**ಉತ್ತರ ದೇಶದ ಬಸವಲಿಂಗ**

ಉತ್ತರ ದೇಶದ ಬಸವಲಿಂಗನ 'ಬಸವ ಪುರಾಣ ಕಥಾಸಾಗರ' ಕೃತಿಯಲ್ಲಿಯೂ ಶಂಕರದಾಸಿಮಯ್ಯನಿಗೆ ಜೇಡರದಾಸಿಮಯ್ಯ ಭತ್ತವ ಕಳುಹಿಸಿದ ಕಥೆ[೮೭] ಇದೆ. ಈ ಕೃತಿಯ ಕಾಲ ಕ್ರಿ.ಶ.೧೬೬೦.

ಶಂಕರದಾಸಿಮಯ್ಯನ ಸತಿ ತಮ್ಮ ಶಿಷ್ಯನಾದ 'ವಕ್ತ್ರಪಾದ'ನ ಕೂಡ 'ಧಾನ್ಯವ ತಿರಿದು ತಾ' ಎಂದು ಹೇಳುವಾಗ, ದಾಸಿಮಯ್ಯ ಕೇಳಿ ಮನೆಗೆ ಬಂದು ಹೆಂಡತಿಗೆ ಭತ್ತವ ಕಳುಹಲು, ಅಹುದಹುದು ನೀನಲ್ಲದೆ ಬಡವರಿಗೆ ಭತ್ತವ ಕೊಡುವವರಾರು? ಎಂದು ನುಡಿದು ಧಾನ್ಯದ ಹೆಡಿಗೆಗೆ ಕೈಯ ಹಾಕಲು, ಅತ್ತ ದಾಸಿಮಯ್ಯನ ತವನಿಧಿ ಬಯಲಾಯಿತು. ಆತನ ಸತಿ ದುಗ್ಗಳೆ 'ಶಂಕರದಾಸಿಮಯ್ಯಗೆ ಇದಿರುತ್ತರವ ಕೊಟ್ಟಿರುವುದರಿಂದ ತವನಿಧಿ ಬಯಲಾಯಿತು' ಎಂದಳು. ದಾಸಯ್ಯನು 'ನಾವು ಅವರು ಬಡವರೆಂದು ಭಾವಿಸಿದೆವು ಎನ್ನಲು', ಆಕೆ ಎಲೆ ದೇವ ಮಕ್ಕಳಲ್ಲಿ ಮರೆಯುಂಟೆ? ಪಶುಗಳಲ್ಲಿ ಬುದ್ಧಿ ಉಂಟೇ? ಎಂದು ವಿನಂತಿಸಲು ಅವರು ದಯದಿಂದ ಮೊದಲಂತೆ ತವನಿಧಿಯ ಕೊಟ್ಟು ಕಳುಹಿಸಿದರು.

**ಶಾಂತಲಿಂಗದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ**

ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ ಕೃತಿ(೧೬೭೨)ಯು ಶೈವಧರ್ಮವನ್ನು ಉದ್ಧರಿಸಲು ಅವತರಿಸಿ ಬಂದ ಭೈರವದೇವ ಚರಿತೆಯನ್ನು ಒಳಗೊಂಡಿದೆ. ಆದರೂ ನೂರಾರು ಶಿವಭಕ್ತರ ಹಾಗೂ ಶಿವಶರಣರ ಕಥೆಯನ್ನು ನಿರೂಪಿಸುತ್ತದೆ. ಬಸವಪುರಾಣದ ಕಥೆಗಳೇ ಇಲ್ಲಿ ಮುಂದುವರೆದಿದ್ದು, ಅಲ್ಲಿನ ಸಂದರ್ಭಗಳು ಇಲ್ಲಿಯೂ ಇವೆ. ಬಹುಶಃ ಒಂದಕ್ಕೊಂದು ಆಕರವಾಗಿರುವ ಸಾಧ್ಯತೆಯೂ ಇದೆ ಎಂಬುದು ವಿದ್ವಾಂಸರ ಮತ. ಈ ಕೃತಿಯಲ್ಲಿ ದೇವರ ದಾಸಿಮಯ್ಯ ಮತ್ತು ಜೇಡರದಾಸಿಮಯ್ಯನನ್ನು ಕುರಿತಾದ ಒಟ್ಟು ನಾಲ್ಕು ಕಥೆಗಳು ನಿರೂಪಿತವಾಗಿದೆ.

೧. ಜೈನರನ್ನು ವಾದದಲ್ಲಿ ಸೋಲಿಸುವ ಕಥೆ

ಜೈನರು ದಾಸಿಮಯ್ಯನನ್ನು ವಾದದಲ್ಲಿ ಸೋಲಿಸಲಾಗದೆ ಜೀನೇಶನಿರುವುದನ್ನು ನಿಜಗೊಳಿಸಲು ಅರಳಿ ಮರವನ್ನು ಮಾತಾಡಿಸುವುದರ ಮೂಲಕ ತೋರಿಸುವುದಾಗಿ ಸವಾಲು ಹಾಕಿದರು. ಒಬ್ಬ ಹುಡುಗನನ್ನು ನೇಮಿಸಿ ಅರಳಿ ಮರದ ಪೊಟರೆಯಲ್ಲಿ ಬಚ್ಚಿಟ್ಟರು. ಜೈನರು ಕೂಗಿ ಅರಳಿ ಮರವನ್ನು ಮಾತನಾಡಿಸಲು ಪ್ರಾರಂಭಿಸುವ ಮೊದಲೇ ಆತನು ಸತ್ತಿದ್ದನು. ಆ ಹುಡುಗ ಅವರ ಕೂಗಿಗೆ ಪ್ರತಿಕ್ರಿಯಿಸಲಿಲ್ಲ. ನಂತರ ಜೈನರ ಪ್ರತೀಕಾರ ಭಾವ ಶಮನವಾಯಿತು. ಆ ಹುಡುಗನ ತಾಯಿ ದಾಸಿಮಯ್ಯನಲ್ಲಿಗೆ ಬಂದು ಕಣ್ಣೀರಿಡುತ್ತಾ ತನ್ನ ಮಗನನ್ನು ಬದುಕಿಸು ಎಂದು ಬೇಡಿಕೊಂಡಳು. ದಾಸಿಮಯ್ಯನ ಕಾರುಣ್ಯದಿಂದ, ಮಹಿಮೆಯಿಂದ ಆ ಹುಡುಗ ಬದುಕಿ ಬಂದನು.

೨. ದೇವರ ದಾಸಿಮಯ್ಯ ಮದುವೆಗೆ ಹೋಗುವಾಗ ನದಿ ದಾರಿಕೊಟ್ಟಂತೆ ಎಂಬುದಕ್ಕೆ ಕಥೆ

ಮುದನೂರಲ್ಲಿ ದೇವರದಾಸಿಮಯ್ಯ ಇರಲು, ಪೊಟ್ಟಲಗೆರೆಯಲ್ಲಿದ್ದ ದೇಸಿಂಗರಾಯ ಹಾಗೂ ಸುಗ್ಗಲದೇವಿಯರಿಗೆ ದೀಕ್ಷೆಯನ್ನು ಇತ್ತು ಜೈನರ ವಾದದಲ್ಲಿ ಗೆದ್ದಿರುವ ಸಂದರ್ಭದಲ್ಲಿ ದಾಸಯ್ಯನ ಶಿಷ್ಯರು ಮದುವೆಯ ಕಾರ್ಯಕ್ಕೆ ಬರಬೇಕೆಂದು ಗುರುವಿಗೆ ವಿಜ್ಞಾಪನೆಗಳನ್ನು ಮಾಡಿಕೊಂಡು ಆಮಂತ್ರಣಕ್ಕೆ ಅರಿಶಿನವನ್ನು ಹಚ್ಚಿ ತೀರ ಒತ್ತಾಯವಾಗಿ ಕಳುಹಿಸಿದ್ದರು. ಆಗ ದಾಸಯ್ಯನು ಭಕ್ತರನ್ನು ಸೇರಿ ಹೋಗುವಾಗ ಮುಂದೆ ಗೌತಮಿ ಎಂಬ ನದಿಯು ಕರೆಗಟ್ಟಿ ಹರಿಯುತ್ತಿತ್ತು. ಮದುವೆಯ ಭಕ್ತರು ಆಚೆಯ ದಡದಲ್ಲಿ ನಿಂತು ದಾಸಿಮಯ್ಯನ ದಾರಿಯನ್ನು ಎದುರು ನೋಡುತ್ತಿದ್ದರು. ದಾಸಯ್ಯನು ಅಲ್ಲಿಗೆ ಬರಲು 'ನದಿಗೆ ಇಬ್ಭಾಗವಾಗಿ ದಾರಿಯಂ ಬಿಡಲು, ನೆರೆದ ಭೂ ಜನರು ಕೊಂಡಾಡಿದರು'. ಆಗ ದಾಸಯ್ಯನು ಮದುವೆಗೆ ಹೋಗಿ, ಶಿವಗಣ ದರುಶನದಿಂದ ಆ ಕಾರ್ಯವನ್ನು ಪೂರೈಸಿ, ಭಕ್ತರ ಸದ್ಗೋಷ್ಠಿಯಲ್ಲಿ ಇರುತ್ತಿದ್ದನು.

ಮುದದಿ ದೇವರದಾಸ
ಮದುವೆಗೆ ಪೋಪಲ್ಲಿ
ನದಿಯನಿಬ್ಬಗೆ ಮೂದಿದಂತೆ
ಕದನ ಲಂಪಟ ಮುಸುಟಿ
ಯಧಟ ಚೌಡಯ್ಯನು
ಪಡೆದು ಪೊಳೆಯಂ ದಾಂಟಿದಂತೆ[೮೮]

ಚೌಡಯ್ಯನ ಹೊಳೆದಾಟಿದ ಸಂದರ್ಭವನ್ನು ದೇವರದಾಸಿಮಯ್ಯನಿಗೆ ಹೋಲಿಕೆ ಮಾಡಿ ಈ ಕತೆಯನ್ನು ಪ್ರಸ್ತುತಪಡಿಸಲಾಗಿದೆ. ಶರಣರ ಚರಿತ್ರೆಯಲ್ಲಿ ಇಂತಹ ಅನೇಕ ಕಥೆಗಳು

ಕಾವ್ಯಗಳಲ್ಲಿ ನಿರೂಪಿತಗೊಂಡಿವೆ. ಅಂತಹವುಗಳಲ್ಲಿ ಮುಸುಟಿ ಚೌಡಯ್ಯನೂ ಸಹ ಕಾರ್ಯಕ್ಕೆಂದೇ ಹೋಗುವಾಗ ನದಿ ದಾರಿ ಬಿಟ್ಟ ಕಥೆ, ರೇವಯ್ಯ ದೇವಯ್ಯನಿಗೂ ನದಿ ಠಾವುಕೊಟ್ಟ ಕಥೆಗಳು ಇದೇ ಕಾವ್ಯದಲ್ಲಿ ಕಂಡು ಬರುತ್ತದೆ.

**೩. 'ಬಡಭಕ್ತ ಶಂಕರದಾಸಿಮಯ್ಯ ಎಂದು ಜೇಡರದಾಸಿಮಯ್ಯನು ಭತ್ತವನಿತ್ತನು' ಎಂಬುದಕ್ಕೆ ಕಥೆ**

ಶಂಕರದಾಸಿಮಯ್ಯನ ಮಯೂರಪುರದಿಂದ ಕಲ್ಯಾಣಪುರಕ್ಕೆ ಬಂದು ಕೌದಿಯನ್ನು ಹೊಲಿದು ಬಂದದ್ದರಿಂದ ಜಂಗಮಾರ್ಚನೆಯ ನಡೆಸುತ್ತಿದ್ದನು. ಈ ಕಡೆಗೆ ಮುದನೂರು ದಾಸಯ್ಯನು ನೂತನವಾದ ಸೀರೆಯನ್ನು ನೇಯ್ದಿರುವುದನ್ನು, ಶಿವನು ಜಂಗಮ ರೂಪದಲ್ಲಿ ಬಂದು ಆ ಸೀರೆಯನ್ನು ಬೇಡಲು ಸೀರೆಯನ್ನು ಕೊಟ್ಟು ತವನಿಧಿಯನ್ನು ಪಡೆದು ಜಂಗಮಕ್ಕೆ ಸೇವೆ ಸಲ್ಲಿಸುತ್ತಿದ್ದನು.

ಒಮ್ಮೆ ಜೇಡರದಾಸನು ಶಂಕರದಾಸನನ್ನು ನೋಡುವುದಕ್ಕೆ ಹೋದಾಗ, ಆತನ ಪತ್ನಿ ಶಿವದಾಸಿಯು ಶಿಷ್ಯ ವಕ್ತ್ರಪಾದನನ್ನು ಕರೆದ 'ಧಾನ್ಯವ ತಿರಿದು ತಾ' ಎಂದು ಹೇಳಿದಳು. ಅದನ್ನು ಕೇಳಿಸಿಕೊಂಡ ದಾಸಿಮಯ್ಯನು, ಶಂಕರದಾಸಿಮಯ್ಯನಿಗೆ ಕೌದಿ ಹೊಲಿಯುವ ಕಾಯಕ ಅವರ ಶಿಷ್ಯನಿಗೆ ಕೋರಾನ್ನದ ಕಾಯಕದಿಂದ ಬಡತನ ಹರಿಯದು. 'ತೌಡು ನೊಣವಿಂಗಿಲಗಲ ದಂತಾಯ್ತು' ಎಂದು ತನ್ನ ಮನೆಗೆ ಬಂದು ದುಗ್ಗಳೆಯನ್ನು ಕರೆದು ಹೇಳಿ, ಭತ್ತವನ್ನು ಕಳಿಸಿದನು. ಶಂಕರದಾಸಯ್ಯ ನಗುತ್ತಾ ಹರಿಯ ಹಣೆಯ ರಕ್ತವ ಭಿಕ್ಷವ ಬೇಡಿದವನ ಮಗನೆನ್ನ ಬಡತನವ ತೋರುವೆನು' ಎನುತ ಧಾನ್ಯದ ಹೆಡಿಗೆಗೆ ಕೈ ಹಾಕಲು ದಾಸಯ್ಯನ ತವನಿಧಿ ಬಯಲಾಯಿತು.

'ದಾಸಯ್ಯನ ಹೆಂಡತಿ' ಶಂಕರದಾಸಯ್ಯಗಳು ಬಡವರೆನಬಹುದೇ? ಮೃಢನಿಂದೆ ಕಿಡಿಗಣ್ಣ ಪಡೆದು ಪೊಡವಿಯ ದೈವಂಗಳ ಸುಟ್ಟರಹುತ್ತ ಬಂದು ಶರಣ ಹೊಕ್ಕೆ ದೈವದಿಂದ ಸೇವೆ ಮಾಡಿಸಿಕೊಳ್ಳುತ್ತಾ ಜಯಸಿಂಹರಾಯ ಜಗದೇಕಮಲ್ಲ ಮೊದಲಾದ ಪರವಾದಿಗಳು ಮಾಡಿದ ಉಕ್ಕಿನ ಹರಿಪ್ರತಿಮೆಯನ್ನು ತನ್ನ ನೋಟದಿಂದ ಅರುಹಿದ ಮಹಿಮನ ನೀಡು ಬಡವರೆಂದು ಭಾವಿಸಬಹುದೇ? ಕಾಲಾಗ್ನಿಯ ಕೆಣಕುವರೇ? ನೊಸಲ್ಗಣ್ಣನ ಮುಸುಕ ತೆರೆವರೇ? ಎಂದು ದಂಪತಿಗಳು ಬಂದು ಶಂಕರದಾಸಯ್ಯನ ಅಡಿಗಳ ಮೇಲೆ ಬಿದ್ದು ನುತಿಸಲು, ಅವನು 'ನಾವು ಬಡವರು ನೀವು ನಮ್ಮ ಮರೆಯುವುದಿಲ್ಲ. ಎತ್ತ ಹೋಗುತ್ತಾ ಇತ್ತ ಬಂದಿರಿ? ಬಡವರಾದ ನಮಗೆ ಏನ ತಂದಿರಿ? ನಾವು ಬದುಕುವುದು ನಿಮ್ಮ ಧರ್ಮವಲಾ. ಎಂದು ನುಡಿದನು. ಮತ್ತೆ ಆ ದಂಪತಿಗಳು ದೈನ್ಯದಿಂದ ಸ್ತುತಿಸಲು ಅವರನ್ನು ಕ್ಷಮಿಸಿ ಮೊದಲಿನಂತೆ ತವನಿಧಿಯನ್ನು ಕೊಟ್ಟು ಕಳುಹಿಸಿದನು. ಇತ್ತ ಶಂಕರದಾಸಿಮಯ್ಯನು ತಮ್ಮ ಗುರು ಶಂಕರೇಶ್ವರನೆಂಬ

ತಮ್ಮ ಇಷ್ಟಲಿಂಗದಲ್ಲಿ ಭಕ್ತಿಕ್ರಿಯೆಯನ್ನು ಆಚರಿಸುತ್ತಾ ಶರಣರ ಗೋಷ್ಠಿಯಲ್ಲಿ ಸುಖದಿಂದಿದ್ದನು.

೪. ದಾಸಿಮಯ್ಯ ವೈಯಕ್ತಿಕ ಬದುಕನ್ನು ಕುರಿತು ಒಂದು ಕಥೆಯಿದೆ. ದಗ್ಗಳೆಯನ್ನು ಮಳಲಕ್ಕಿಯ ಪಾಯಸ ಮಾಡುವಂತೆ ಪರೀಕ್ಷಿಸಿ ವಿವಾಹವಾಗುತ್ತಾನೆ. ಹನ್ನೆರಡು ವರ್ಷ ನೇಯ್ದ ಬಟ್ಟೆ ಅದನ್ನು ಮಾರಲು ಹೋಗಿ ಶಿವನೇ ಅದನ್ನು ಪಡೆದು ಹರಿದು ಹಾಕಲು ಸ್ಥಬ್ದನಾದ ದೇವರ ದಾಸಿಮಯ್ಯನನ್ನು ಕಂಡು ತವನಿಧಿಯನ್ನು ನೀಡಿದ್ದು ಈ ಕಥೆಯಲ್ಲಿದೆ.

**ಕುಮಾರ ಪದ್ಮರಸನ 'ಸಾನಂದ ಚರಿತೆ'**

ಸಾನಂದ ಚರಿತೆ ಕೃತಿಯನ್ನು ಕೆರೆಯ ಪದ್ಮರಸನು ಸಂಸ್ಕೃತದಲ್ಲಿ ಬರೆದದ್ದು. ಅದನ್ನು ಕನ್ನಡದಲ್ಲಿ ಬರೆಯುವಂತೆ ಪ್ರೇರಣೆಯಿತ್ತನು. 'ಸ್ತ್ರೀ ಬಾಲಸಾಧ್ಯ ಮಾಗೆ' ಕನ್ನಡಿಸುವೆನೆಂದನಂತೆ. ಅಂತೆಯೇ ಕುಮಾರನು ಕನ್ನಡದಲ್ಲಿ 'ಸಾನಂದ ಚರಿತೆ'ಯನ್ನು ಬರೆದನು. ಈ ಕೃತಿಯ ಅನ್ವರ್ಥನಾಮ 'ಶಿವಾದ್ವೈತಸಾರ ಸಿದ್ಧಾಂತ'. ಈ ಕೃತಿಯನ್ನು ಹಲವು ಛಂದಸ್ಸಿನಲ್ಲಿ ಬರೆಯಲಾಗಿದ್ದು ಪಾಲ್ಕುರಿಕೆ ಸೋಮನಾಥನ 'ಗಣಸಹಸ್ರನಾಮ'ದಂತೆ ಕಂಡುಬರುತ್ತದೆ. ೧೯ನೇ ಸಂಧಿಯಲ್ಲಿ ಶಿವಶರಣೆಯರ ಕುರಿತು ಹೇಳಲಾಗಿದ್ದು, ಜೇಡರ ದಾಸಿಮಯ್ಯ [ಈ ಕಾವ್ಯದಲ್ಲಿ ದುಗ್ಗಳೆಯ ಪತಿ ದೇವರದಾಸಿಮಯ್ಯ ಎಂದು ಉಲ್ಲೇಖಿಸಲಾಗಿದ್ದು, ಈ ಕಾಲಕ್ಕಾಗಲೇ ಈ ಇಬ್ಬರೂ ಒಬ್ಬರೇ ಎಂಬುದಾಗಿ ಸಂಪೂರ್ಣವಾಗಿ ಮಾರ್ಪಾಡುಗೊಂಡ ಚರಿತ್ರೆಯೊಂದು ನಿರ್ಮಾಣವಾಗಿದ್ದಿರಬೇಕು] ದುಗ್ಗಳೆಯ ಹೆಸರುಗಳು ಬರುತ್ತವೆ

ಮರೆವೊಲೆಯರರಗುಲಿಗ ಹಾರುವ
ನೆರವಿಗೀಶಾಲಯದ ಕದವೇಂ
ತೆರವವೆಡ ಹರಿಯಜರ್ಕಳಿಗಗ್ಗಳವದಮಮಾ
ಎರದವನೆ ತನಿಂದೆಯವನಿಗೆ
ಶರಣರಾಧಿಕ್ಯವನೆ ಮರೆದೇಂ
ಮೆರೆಯ ದೇವರ ದಾಸ ದುಗ್ಗಳೆವೆರಸಿದವರಲ್ಲಿ[೮೯]

ಶಿವಾಲಯವು ಬಾಗಿಲು ತೆರೆದ ಪ್ರಸಂಗವನ್ನು ಇಲ್ಲಿ ನಿರೂಪಿಸಲಾಗಿದೆ.

**ಅದೃಶ್ಯ ಕವಿಯ ಪ್ರೌಢ ದೇವರಾಯನ ಕಾವ್ಯ**

ಅದೃಶ್ಯ ಕವಿಯ ಪ್ರೌಢದೇವರಾಯನ ಕಾವ್ಯ ಕೃತಿಯ ೪ನೆಸಂಧಿಯಲ್ಲಿ 'ದೇವರ ದಾಸಿಮಯ್ಯನವರು ಚರಮೂರ್ತಿಗಳಿಗೆ ಪತಿವ್ರತೆಯರ ಕಥೆ ಹೇಳುವುದು' ಎಂಬ ಕಥೆಯಲ್ಲಿ ದಾಸಿಮಯ್ಯನ ಚರಿತ್ರೆ ಚಿತ್ರಿತವಾಗಿದೆ. ಇದೆ ಕಥೆಯು ಕಾವ್ಯದ ೫ನೇ ಸಂಧಿಯಲ್ಲಿ 'ದೇವರ

ದಾಸಿಮಯ್ಯನವರ ಸತಿ ದುಗ್ಗಳೆಯ ಪತಿಭಕ್ತಿ' ಎಂಬ ಶೀರ್ಷಿಕೆಯಲ್ಲಿ ಮುಂದುವರೆಯುತ್ತದೆ. ಅದೃಶ್ಯ ಕವಿಯು ೧೬ನೇ ಶತಮಾನದವನು, ಕ್ರಿಶ ಸು.೧೫೨೫ ರಲ್ಲಿದ್ದನೆಂದು ತಿಳಿದು ಬರುತ್ತದೆ. ಪ್ರೌಢ ದೇವರಾಯನ ಕಾವ್ಯದ ಕಥಾವಸ್ತು ವೈಷ್ಣವಗುರು ಮುಕ್ಕುಂದ ಪೆದ್ದಿಗಳು ಹಾಗೂ ಶಿವಭಕ್ತ ಜಕ್ಕಣಾಚಾರ್ಯರ ನಡುವಿನ ಸಂವಾದವನ್ನು ಕುರಿತದ್ದು. ಈ ಇಬ್ಬರೂ ಕುಂತಳದೇಶಕ್ಕೆ ಮುಕುರದಂತಿದ್ದ ವಿದ್ಯಾನಗರದಲ್ಲಿ ಆಳುತ್ತಿದ್ದ ಪ್ರೌಢರಾಯನ ಆಸ್ಥಾನದಲ್ಲಿದ್ದವರು.

'ದೇವರದಾಸಿಮಯ್ಯನವರು ಚರಮೂರ್ತಿಗಳಿಗೆ ಪತಿವ್ರತೆಯರ ಕಥೆ ಹೇಳುವುದು' ಎಂಬ ಕಥೆಯು ಹೀಗೆ ಪ್ರಾರಂಭವಾಗುತ್ತದೆ. ಹೊಟ್ಟಲಕೆರೆಯಲ್ಲಿ ದೇವರದಾಸಿಮಯ್ಯನೆಂಬ ಶರಣ ಸುಗ್ಗಲದೇವಿಗೆ ಗುರುವಾಗಿ, ಪರಮತದವರನ್ನು ಗೆದ್ದು ಉತ್ತರನಾಥಲಿಂಗವನ್ನು ಪ್ರತಿಷ್ಠಾಪನೆಮಾಡಿ, ದೇಸಿಂಗ ಭೂವರನನ್ನು ಶಿಷ್ಯನನ್ನಾಗಿ ಮಾಡಿಕೊಂಡು ವಿರಕ್ತಿಯಿಂದಿದ್ದನು. ಒಮ್ಮೆ ದೇಶಾಂತರಕ್ಕೆ ಹೋಗಿ ಬಂದು 'ಭಕ್ತಿಯನ್ನು ಆಚರಿಸಬೇಕಾದರೆ ಮನ ಧರ್ಮಗಳನ್ನು ತಿಳಿದ ಶಕ್ತಿಯಿಲ್ಲದೆ ನಡೆಯದು. ಆದುದರಿಂದ ದೇಶಗಳನ್ನು ತಿರುಗಿ ಅಂತಹ ಶಕ್ತಿಯನ್ನು ಹುಡುಕಬೇಕೆಂದು' ವಿಚಾರ ಮಾಡಿದನು. ಆ ಶಕ್ತಿಗಾಗಿ ಉಸುಕು (ಮರಳು) ಅಕ್ಕಿಗಳನ್ನು ಸಮನಾಗಿ ಬೆರೆಸಿ, ಕಬ್ಬಿನ ಗಳವನ್ನು ಕೈಯಲ್ಲಿ ಹಿಡಿದು ಹೆಣ್ಣು ಹುಡುಕಲು ಹೊರಟನು, ಹನ್ನೆರಡು ವರ್ಷಗಳಾದರೂ ಕನ್ಯೆ ದೊರೆಯಲಿಲ್ಲ. ಒಮ್ಮೆ ಮುದನೂರಿಗೆ ಬರಲು, ಅಲ್ಲಿ ಸಂಕಣ್ಣ–ಶಿವದೇವಿಯರ ಒಂಬತ್ತು ವರ್ಷದ ಮಗಳು ದುಗ್ಗಳೆಯು ದಾಸಿಮಯ್ಯ ತಂದಿದ್ದ ಮರಳು, ಅಕ್ಕಿಗಳ ಮಿಶ್ರಣವನ್ನು ಬೆರಸಿ ಕಬ್ಬಿನ ರಸದಿಂದ ಪಾಯಸ ತಯಾರಿಸಿ ಬಡಿಸುತ್ತಾಳೆ. ಹೀಗೆ ಈ ಪಂದ್ಯಗೆದ್ದ ಆಕೆಯನ್ನು ವಿವಾಹವಾಗುತ್ತಾನೆ. ಈ ಇಬ್ಬರು ನೇಯ್ಗೆ ಕಾಯಕದ ಮೂಲಕ ಸಂತೃಪ್ತಿಯಿಂದ ಇರಲು, ಒಂದು ದಿನ ಚರಮೂರ್ತಿಗಳಿಬ್ಬರು 'ಇಂದುಮುಖಿಯರನ್ನು ಮದುವೆಯಾಗಿ ಸಂಸಾರಿಯಾಗಿರುವುದು ಸುಖವೋ? ಅಥವಾ ಎಲ್ಲವನ್ನೂ ತ್ಯಜಿಸಿ ವಿರಕ್ತಿಯಿಂದ ದೇಶಾಂತರಕ್ಕೆ ಹೋಗುವುದು ಸುಖವೋ' ಎಂದು ಕೇಳಲು, ದಾಸಿಮಯ್ಯನು 'ಪತಿಯನ್ನೇ ದೈವವೆಂದು ಬಗೆಯುವ ಸುಶೀಲೆಯಾದ ಸತಿಯಿದ್ದರೆ ಸಾಂಸಾರವೇ ಸುಖ! ಅಂತಹ ಸತಿಯು ಇಲ್ಲದಿದ್ದರೆ ದೇಶಾಂತರವೇ ಸುಖವೆಂದು' ವಿವರಿಸುತ್ತಾನೆ. ಈ ಸಂದರ್ಭದಲ್ಲಿ ಪತಿವ್ರತೆಯರ ಹಿರಿಮೆಯನ್ನು ವಿವರಿಸುತ್ತಾ, ಇಲ್ಲಿ ಅನಲಾಯಿಯ ಕಥೆಯನ್ನು ಪೌಲಸ್ತ್ಯನ ಕಥೆಯನ್ನು, ಮದನ ವಿಜಯರಾಯನ ಕಥೆಯನ್ನು, ಪಾರಿಯಾತ್ರಿಕರಾಯನ ಕಥೆಯನ್ನು ಅವರಿಗೆ ಹೇಳುತ್ತಾನೆ. ಅಷ್ಟೇ ಅಲ್ಲದೆ ತನ್ನ ಸತಿ ದುಗ್ಗಳೆಯನ್ನು ಕರೆದು ಕುಂಚಿಗೆಯನ್ನೊಮ್ಮೆ, ದೀಪವನ್ನೊಮ್ಮೆ ಕೇಳಲು ಮರುಮಾತಾಡದೆ ತಂದು ಕೊಡುತ್ತಾಳೆ. ಅದನ್ನು ವಿವರಿಸಿ ಇಂತಹ ಸತಿ ಇರಲು ಸಂಸಾರವೇ ಸೌಖ್ಯವೆಂದು ಚರಮೂರ್ತಿಗಳಿಗೆ ಹೇಳಲು ಅವರು ಸಾಮಾಧಾನಗೊಳ್ಳುತ್ತಾರೆ.

**ಕಿತ್ತನಕೆರೆ ವೀರ ವಿರಚಿತ 'ಎಲ್ಲ ಪುರಾತನರ ಪುರಾಣ'**

ಕಿತ್ತರಕೆರೆ ವೀರ ಎಂಬುದು ಸಂಪಾದಕರಾದ ಎಂ. ಪಿ ಮಂಜಪ್ಪ ಶೆಟ್ಟರು ನೀಡಿದ ನಾಮ. ಕವಿ ಹೆಸರು ವೀರ. ಕಾಲವು ಖಚಿತ ಗೊಳ್ಳುವುದಿಲ್ಲ. ಈತ ಪಾಲ್ಕುರಿಕೆ ಸೋಮನಾಥನನ್ನು ನೆನೆದಿದ್ದಾನೆ. ಅಂತೆಯೇ ಶಾಂತೇಶ್ವರನನ್ನು ನೆನೆದಿರುವುದು ಕಂಡುಬರುತ್ತದೆ. ಆತನ ಕಾಲದ ನಂತರದ ಕಾಲವನ್ನು ವೀರನ ಕಾಲ ಎಂದು ಗುರುತಿಸಬಹುದು. ಹಾಗಾದಲ್ಲಿ ಕ್ರಿಸ್ತಶಕ ೧೫೬೧ ಎಂದಾಗುತ್ತದೆ.

ಈತನ ಕೃತಿ ಎಲ್ಲ ಪುರಾತನರ ಪುರಾಣ. ಕೆಲವರು ಸರ್ವ ಪುರಾತನರ ಪುರಾಣ, ಪುರಾತನರ ಪುರಾಣ ಎಂಬ ಹೆಸರುಗಳಿವೆ. ಕಾವ್ಯವು ಕಲ್ಯಾಣ ಪಟ್ಟಣವನ್ನು ಕೇಂದ್ರವಾಗಿ ಹೊಂದಿದೆ. ಇಲ್ಲಿ ಅನೇಕ ಜನ ಶರಣರು ಬಂದು ಓಲಗಗೂಡುತ್ತಾರೆ. ಶೀಲ ಸಂಪಾದನೆಯ ಲೀಲೆಯನ್ನು ಕೇಳುತ್ತಿರುತ್ತಾರೆ. ಅಂತಹ ಸಮಯದಲ್ಲಿ ಕೇತಲ ಬ್ರಹ್ಮಯ್ಯ ಬಂದು ಬಸವಣ್ಣನನ್ನು ನೃತ್ಯದ ಮೂಲಕ ಮೆಚ್ಚಿಸುತ್ತಾನೆ. ಆಗ ಬಸವಣ್ಣ 'ಶೀಲ ಸಂಪಾದನೆಯ ಸಂಬಂಧಗಳು ಭೂಲೋಕದಲ್ಲಿ ಮೆರೆದ ಮಹಿಮೆಯನ್ನು ಕೇಳುತ್ತಾನೆ'. ಕೇತಲ ಬ್ರಹ್ಮಯ್ಯ ಒಬ್ಬೊಬ್ಬರ ಮಹಿಮೆಯನ್ನು ಹೇಳುತ್ತಾ ಮುದನೂರ ದಾಸಿಮಯ್ಯನ ಮಹಿಮೆಯನ್ನೂ ಅಲ್ಲಿ ಹೇಳುತ್ತಾನೆ.

ಶಿವಭಕ್ತನಾದ ದಾಸಯ್ಯ ದಿನನಿತ್ಯ ವಸ್ತ್ರವನ್ನು ನೇಯ್ದು ಮಾರಿ ತಂದು ಅದರಲ್ಲಿ ಹರುಷದಿಂದ ಜಂಗಮ ಸೇವೆಯನ್ನು ಮಾಡುತ್ತಿದ್ದನು. ಈತನ ಕೀರ್ತಿ ಎಲ್ಲೆಡೆ ಹರಡಿತು. ವಿಧವಿಧವಾದ ದೇವಾಂಗ ವಸ್ತ್ರವನ್ನು ನೇಯ್ದನು. ಒಮ್ಮೆ ಒಂದು ಭವ್ಯವಾದ ವಸ್ತ್ರವನ್ನು ನೇಯಲು ಅದಕ್ಕೆ ಬೆಲೆ ಕಟ್ಟಲಾಗದು ಎಂದು ರಾಜನಿಗೆ ತಿಳಿಸಲಾಯಿತು. ರಾಜನು ದಾಸಿಮಯ್ಯನನ್ನು ಕರೆಯಿಸಿ. ವಸ್ತ್ರದ ಬೆಲೆ ಏನೆಂದು ಕೇಳಲು ಆತನು ಅದರ ಬೆಲೆ ಒಂದು ಹಾಗ ಎಂದನು. ಎಲ್ಲರೂ ಆಶ್ಚರ್ಯಗೊಂಡು ಸಾವಿರ ವರಹ ಹೇಳಿದರೂ ಕಡಿಮೆಯೇ ಎನಲು ರಾಜನು ಅರ್ಧರಾಜ್ಯವನ್ನು ಕೊಡುವುದಾಗಿ ಘೋಷಿಸಿದನು. ಈ ವಿಷಯ ಕೈಲಾಸಕ್ಕೆ ಮುಟ್ಟಿ ಶಿವನು ವೇಷಮರೆಸಿಕೊಂಡು ಬಂದು ಮುದದಿ ಬೇಡಲು ಕೊಟ್ಟ ದಾಸಿಮಯ್ಯ.

'ಭಕ್ತನ ಮನವ ನೋಡುವೆನೆಂದು ವಸ್ತ್ರವ
ಚಿತ್ರಪತ್ರವ ಮಾಡಿ ಪರಿಯೆ
ಚಿತ್ತದೊಳೇನುಯೆನ್ನದೆಯಿರೆ ದಾಸಯ್ಯ
ಗಿತ್ತ ಈಶ್ವರ ತವನಿಧಿಯ'

ಆತನಿಂದ ತವನಿಧಿ ಪಡೆದ. ಆಗ ಶಿವ ಪ್ರತ್ಯಕ್ಷನಾಗಿ ಅವನು ಮತ್ತು ಹೆಂಡತಿಯನ್ನು ಪುಷ್ಪಕದೊಳಗೆ ಕುಳ್ಳಿರಿಸಿಕೊಂಡು[೧೦] ಹೊದನು.

## ಕುಮಾರ ಚನ್ನಬಸವ ವಿರಚಿತ: ಪುರಾತನರ ಚರಿತೆ

ಈ ಕೃತಿಯು ನೂತನ ಹಾಗೂ ಪುರಾತನರರನ್ನು ಕುರಿತ ರಚನೆ. ಪುರಾತನರು ಎಂದರೆ ತಮಿಳುನಾಡಿನ ಶೈವ ಸಂತರು. ನೂತನರು ಎಂದರೆ ಅವರೊಟ್ಟಿಗಿಟ್ಟು ನೋಡುವ ಕರ್ನಾಟಕದ ಶಿವಶರಣರು ಅಥವಾ ವಚನಕಾರರು. ಸಂಪ್ರದಾಯವನ್ನು ಬಳಸಿಕೊಂಡಂತಹ ವೀರಶೈವ ಕವಿಗಳಲ್ಲಿ ಕುಮಾರ ಚನ್ನಬಸವನೂ ಒಬ್ಬ. ಈ ಕೃತಿಯು ೯ ಸಂಧಿಗಳನ್ನು ೩೫೦ ಪದ್ಯಗಳನ್ನು ಒಳಗೊಂಡಿದೆ. ಬಸವ ಪುರಾಣದಲ್ಲಿನ ಪುರಾತನ ಕಥೆಗಳನ್ನು ಇಲ್ಲಿ ಸಂಗ್ರಹವಾಗಿ ಹೇಳಲಾಗಿದೆ. ಅವರ ಕಾಯಕ, ಶಿವ ನಿಷ್ಠೆ, ಶಿವನನ್ನು ಕಂಡುಕೊಂಡ ರೀತಿ, ಅವರು ಕೈಗೊಂಡ ಪ್ರಸಾದ ಕಾರ್ಯ, ಪ್ರಸಾರ ಕಾರ್ಯ ಮೊದಲಾದವುಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸುತ್ತದೆ ಎಂದರೂ ತಪ್ಪಾಗಲಾರದು.

ವಿರೂಪಾಕ್ಷ ಪಂಡಿತನ ಚನ್ನಬಸವಪುರಾಣ ಮತ್ತು ಬಾಳೆಹಳ್ಳಿ ಶಾಸನದಲ್ಲಿ ಈ ಕವಿಯ ಕುರಿತ ಉಲ್ಲೇಖಗಳಿವೆ. ಕರ್ನಾಟಕ ಕವಿಚರಿತೆಕಾರರು ಕುಮಾರ ಚನ್ನಬಸವನ ಕಾಲದ ಬಗ್ಗೆ ಈತನ ಕಾಲವು ಬಸವಪುರಾಣಕ್ಕೂ (೧೩೬೯) ಚನ್ನಬಸವಪುರಾಣದ ಕಾಲಕ್ಕೂ ಮಧ್ಯದಲ್ಲಿ ಇರಬೇಕು. ಸುಮಾರು ೧೫೫೦ ಆಗಿರಬಹುದೆಂದು ಊಹಿಸುತ್ತೇವೆ ಎಂದಿದ್ದಾರೆ. ಹೆಚ್ ದೇವೀರಪ್ಪನವರು ಇದನ್ನೇ ಒಪ್ಪಿದ್ದಾರೆ. ವೈ. ಸಿ. ಭಾನುಮತಿಯವರು ಕ್ರಿಸ್ತಶಕ ೧೫೬೯ರಲ್ಲಿ ಬದುಕಿದ್ದಿರಬಹುದು ಎಂದು ಊಹಿಸುತ್ತಾರೆ. ಅದೇನೇ ಇದ್ದರು ವಿರೂಪಾಕ್ಷ ಪಂಡಿತನ ಕಾಲಕ್ಕೆ ಸಮೀಕರಿಸಿ ಕ್ರಿಸ್ತಶಕ ೧೫೫೦ ಎಂದು ಮಾತ್ರ ಹೇಳಬಹುದು.

ಅಗಜೆಯುಣ್ಮಂ ಜಂಗಮಕಾರದಿಂದಹಃ
ಪಗೆಯಾಂಡ ಭೂಪನ ಸತಿಯ ಬೇಡಲವನೀಯೆ
ನಗುತ ಕೊಂಡೊಯ್ಯುತಿರೆ ಬಂಧುಗಳ್ ತಡೆಯಲವರಿರದು ಶಿವನೊಲವ ಪಡೆದಂ[೧]

ಸೊಗಯಿಸುವ ಸೀರೆಯಂ ಪನ್ನೆರಡು ವರುಷದಿಂ
ಮಿಗೆನೇಯ್ದು ದಾಸಯ್ಯನಿರೆ ಜಂಗಮಾಕೃತಿಯೊ
ಳಗೆ ಶಿವಂ ಬಂದು ಬೇಡಿದೊಡೀಯಲಾತಂಗೆ ತವನಿಧಿಯ ನಿತ್ತನಭವಂ[೨]

ದಾಸಯ್ಯನು ಹನ್ನೆರಡು ವರ್ಷಗಳ ಕಾಲ ನೇಯ್ದು ಇಟ್ಟಿದ್ದ ಸೀರೆಯನ್ನು ಜಂಗಮನಾಗಿ ಬಂದ ಶಿವನು ಬೇಡಿದಡೆ ನೀಡಿ ಆತನಿಂದ ತವನಿಧಿಯನ್ನು ಪಡೆದನು.

ಮುದನೂರ ದಾಸಯ್ಯನ ಪತಿವ್ರತೆಯೆನಿಪ್ಪ
ಸುದತಿ ದುಗ್ಗಳೆವೆರಸಿ ನೆಯ್ಗೆ ಕಾಯಕದಿಂದ

ಲೊದವಿದ ಪದಾರ್ಥದಿಂ ಜಂಗಮಾರ್ಚನೆಗೆಯ್ಯುತ್ತಿರೆ ಶಿವನ ಸಭೆಯೊಳೊಮ್ಮೆ
ಬಿದಿ ವಿರಕ್ತಿಯ ಲೇಸೆನಲು ಗೃಹಸ್ಥ ಕೇತರ
ಮುದವೆಂದು ವಿಷ್ಣುವೆ ನಲಿರ್ವರುಂ ವಾದಿಸಲು
ಮದನರಾರಿಯವರಿರ್ವರೊಡನೆ ಮುದನೂರದಾಸಯ್ಯ ಪೇಳ್ದಪನೆನುತಿರ್ದ[೯೩]

ಮುದನೂರು ದಾಸಯ್ಯ ಹಾಗೂ ಆತನ ಪತ್ನಿ ದುಗ್ಗಳೆ ನೇಯ್ಗೆ ಕಾಯಕದಿಂದ ಜಂಗಮಾರ್ಚನೆ ಮಾಡುವಾಗ ಶಿವನ ಸಭೆಯಲ್ಲಿ ಮದುವೆ ಲೇಸೊ, ವಿರಕ್ತಿ ಲೇಸೊ ಎಂದು ವಾದವಾಯಿತು. ದಾಸಯ್ಯನು ದುಗ್ಗಳೆಯಂತಹ ಗೃಹಿಣಿಯಾದರೂ ಮದುವೆ ಲೇಸು ಇಲ್ಲವೇ ವಿರಕ್ತಿಲೇಸು ಎನ್ನುತ್ತಾನೆ.

ಪರಸಮಯದವರಹಿಯ ಮಡಕೆಯೊಳು ತುಂಬಿದೇ
ವರ ದಾಸಿಮಯ್ಯನಾ ಲಿಂಗಮಂ ತೆಗೆಯೆನಲು
ಹರನ ಜಾನಿಸಿ ನಮಿಸಿ ಕೈಯಿಕ್ಕಿ ತೆಗೆಯೆ ಶುದ್ಧ ಸ್ಫಟಿಕಲಿಂಗವಾಯ್ತು
ಮರಳಿ ದಕ್ಷಬ್ರಹ್ಮನುಂ ಕುಂಡ ತೀರ್ಥದೊಳ
ಗಿರುತಹಂಕರಿಸಿ ನುಡಿದೊಡೆ ವೀರಭದ್ರನಂ
ದಿರದೆಯ್ದಿ ತಗರ ಮೊರೆಯಾಕೊಂಬನೊಂದ ಕೀಳಲು ನುತಿಸೆ ಕರದೊಳಾಂತಂ.[೯೪]

ಅನ್ಯ ಸಂದರ್ಭದಲ್ಲಿ ಮಡಕೆಯಲ್ಲಿ ಸರ್ಪವನ್ನು ತುಂಬಿ ದೇವರ ದಾಸಿಮಯ್ಯನನ್ನು ಲಿಂಗ ತೆಗೆ ಎನಲು ಆತನು ಹರನನ್ನು ಪ್ರಾರ್ಥಿಸಿಕೊಂಡು ಕೈಯಿಡಲು ಅದು ಸ್ಫಟಿಕಲಿಂಗವಾಯಿತು.

ಪರಮಪ್ರಸಾದಿ ದಾಸಯ್ಯನೊಂದೂರ್ಗೆ ಪೋ
ಗಿರುತಂ ತಿರುಗುಬರಲು ಪೊಳೆಕಟ್ಟಲಲ್ಲಿರ್ದ
ವರ ನೋಡೆ ಭವಿಗಳಾಗಿರಲವಂ ಪಾಯೆ ಪೊಳೆಯಿಬ್ಭಾಗಮಾದುದಂದು
ಗಿರಿಜೆ ಶಿವನಕ್ಷಿಗಳ ಸರಸದಿಂ ಮುಚ್ಚಿಬಿಡು
ತಿರೆ ಪತ್ತಬೆರಳ್ಗಳಿಂ ಪನಿಬೀಳೆ ಪತ್ತುನದಿ
ಪರಿತರಲು ಶಿವನಿಂದ್ರ ವಿಧಿ ಹರಿ ಕುಬೇರಾದಿಗಳಿಗೆ ಮುದದಿಂಲಿತ್ತಂ[೯೫]

ಪ್ರಭಾವಿಯಾದ ದಾಸಿಮಯ್ಯನು ಒಂದು ಊರಿಗೆ ಹೋಗಿ ಹಿಂದಿರುಗುವಾಗ ಹೊಳೆ ಅಡ್ಡಕಟ್ಟಲಾಗಿ, ದಾಸಿಮಯ್ಯನ ಆಜ್ಞೆಯಂತೆ ಅದು ಎರಡು ಭಾಗವಾಗಿ ಹರಿದು ದಾರಿಯನ್ನು ಮಾಡಿಕೊಟ್ಟಿತು.

ಮುದನೂರೊಳಿರ್ಪ ಜೇಡರದಾಸನೊಲವಿಂದೆ
ಮದನಾರಿ ರಾಮೇಶನಂ ಪೂಜಿಸುತ್ತಮಿರ

ಲದ ಜರೆವುತನವನ ವಿಪ್ರರು ಪೊರಮಡಿಸೆ ಶಿವಂ ಮೂರದಿನವಭವಗೃಹನ
ಕದವಿಕ್ಕಿ ತಾವೆಲ್ಲರುಂ ತೆಗೆಸಲಾರದೆ
ಮ್ಮದು ತಮ್ಮ ದಾಸಯ್ಯಯೆಂದವನ ಕರೆತರಲು
ಮುದದಿಂದವಂ ಸುತಿಸಿ ರಾಮೇಶ ಕದವ ತೆಗೆಯೆನೆ ಶಿವಂ ಕದವ ತೆಗೆದರ್೬

ಮುದನೂರಿನಲ್ಲಿ ಜೇಡರದಾಸಿಮಯ್ಯನು ಆತನ ಪತ್ನಿಯೂ ರಾಮೇಶ್ವರನನ್ನು ಪೂಜಿಸುವಾಗ ಅಲ್ಲಿನ ವಿಪ್ರರು ಆತನನ್ನು ಹೊರಕ್ಕೆ ಕಳುಹಿಸಿದರು. ಮೂರು ದಿನ ಗುಡಿಯ ಬಾಗಿಲು ತೆರೆಯದಾಯಿತು. ವಿಪ್ರರೆಲ್ಲರೂ ಸೇರಿ ಪ್ರಯತ್ನಿಸಲು ಬಾಗಿಲು ತೆರೆಯದಿದ್ದಾಗ ತಮ್ಮ ತಪ್ಪು ಒಪ್ಪಿಕೊಂಡು ದಾಸಯ್ಯನನ್ನು ಬೇಡಿ ಕರೆದುತಂದರು. ದಾಸಿಮಯ್ಯನ ಪ್ರಾರ್ಥನೆಗೆ ಬಾಗಿಲು ತೆರೆಯಿತು. ಈ ಮೇಲಿನ ಕಾವ್ಯಗಳಷ್ಟೇ ಅಲ್ಲದೆ, ಮಿಶ್ರ ಸ್ತೋತ್ರ ಗೀತೆ, ಗಣಸಹಸ್ರ ನಾಮಾವಳಿ, ಶಿವಗಣದ ರಗಳೆಗಳು, ಪಂಪಾ ಶತಕ, ಮಹಾದೇವಿಯಕ್ಕನ ಪುರಾಣ, ಸಿದ್ದೇಶ್ವರ ಪುರಾಣ, ಪ್ರಸನ್ನ ಶಂಕರಲಿಂಗ ರಗಳೆಗಳು, ಅಮುಗಿದೇವಯ್ಯಗಳ ಸಾಂಗತ್ಯ, ಗುರುರಾಜ ಚಾರಿತ್ರ, ಶಂಕರದಾಸಿಮಯ್ಯ ಪುರಾಣ, ಶರಣ ಲೀಲಾಮೃತ, ಹೀಗೆ ಹಲವು ಕಾವ್ಯಗಳಲ್ಲಿ ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯರ ಕುರಿತ ಚರಿತ್ರೆ ಅನಾವರಣಗೊಂಡಿದೆ.

ಆಕರಗಳು ಯಾವುದೇ ಅಧ್ಯಯನದ ಮೂಲ ದಾಖಲೆಗಳು. ಯಾವುದೇ ವಸ್ತು ವಿಷಯದ ತಕರಾರುಗಳು ಪೂರ್ಣಗೊಳ್ಳುವುದು ಆಕರಗಳ ನೆರಳಿನಲ್ಲಿಯೇ. ಜೇಡರದಾಸಿಮಯ್ಯನ ಕುರಿತ ಆಕರಗಳು ಸಹ ಅಂತಹದ್ದೇ ಮಹತ್ವವನ್ನು ಹೊಂದಿವೆ. ಈತನ ಕುರಿತ ಆಕರಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು. ೧ ನಿರ್ದಿಷ್ಟ ಆಕರಗಳು, ೨ ಕಥಾ ಬೆಳವಣಿಗೆಯ ಆಕರಗಳು. ನಿರ್ದಿಷ್ಟ ಆಕರಗಳು ಎಂದರೆ ಶಾಸನಗಳು, ವಚನಗಳು. ಆತನ ಕುರಿತ ಅತೀ ಸಮೀಪದ ಹಾಗೂ ಸತ್ಯವೆಂದು ನಂಬಬಹುದಾದ ಆಕರಗಳು. ಈ ಆಕರಗಳಿಗೆ ಹರಿಹರನ ರಗಳೆಗಳನ್ನು ಸೇರಿಸಬಹುದು. ಕಥಾ ಬೆಳವಣಿಗೆಯ ಆಕರಗಳು ಎಂದರೆ ಹರಿಹರನನ್ನೊಳಗೊಂಡು ನಂತರದ ರಚನೆಗೊಂಡ ಎಲ್ಲಾ ಕೃತಿಗಳು(ಹರಿಹರನ ರಗಳೆ ಈ ಎರಡೂ ವಿಭಾಗಕ್ಕೆ ಸೇರುತ್ತದೆ.) ಈ ಕೃತಿಗಳನ್ನು ೪ ರೀತಿಯಾಗಿ ವಿಂಗಡಿಸಬಹುದು.

**೧. ಹರಿಹರನ ಶಂಕರದಾಸಿಮಯ್ಯನ ರಗಳೆಪರಂಪರೆ:** ಹರಿಹರನ ರಗಳೆಯಲ್ಲಿ ಶಂಕರದಾಸಿಮಯ್ಯ ಹಾಗೂ ಜೇಡರದಾಸಿಮಯ್ಯರ ಒಡನಾಟದ ಚಿತ್ರಣವಿದೆ. ಹಾಗೇ ಜೇಡರದಾಸಿಮಯ್ಯನ ಗರ್ವ ಭಂಗಗೊಂಡು, ತವನಿಧಿ ಬಯಲಾದ ಕಥೆಯನ್ನು ಒಳಗೊಂಡಿದೆ. ಈ ಕಥೆಯನ್ನಾಧರಿಸಿ ಹರಿಹರನ ನಂತರ ರಚನೆಗೊಂಡ ಕೃತಿಗಳು ಈ ಪರಂಪರೆಯವು. ಈ ಕೃತಿಗಳಲ್ಲಿ ದೇವರದಾಸಿಮಯ್ಯನ ಉಲ್ಲೇಖಗಳಿರುವುದಿಲ್ಲ. ಶಂಕರದಾಸಿಮಯ್ಯ ಪುರಾಣ, ಚನ್ನಬಸವ ಪುರಾಣ, ಚೇರಮನ ರಗಳೆ ಮೊದಲಾದವು ಈ ಪರಂಪರೆಗೆ ಸೇರುತ್ತವೆ.

**೨. ಭೀಮಕವಿಯ ಬಸವಪುರಾಣದ ಪರಂಪರೆ:** ಜೇಡರದಾಸಿಮಯ್ಯನ ಕುರಿತ ಕಥೆ ಒಂದೆಡೆಯಾದರೆ ಮತ್ತೊಂದೆಡೆ ಸುಗ್ಗಲಾದೇವಿಗೆ ದೀಕ್ಷೆ ನೀಡಿ ಪೊಟ್ಟಲಕೆರೆಯಲ್ಲಿ ಜೈನರನ್ನು ಶೈವರನ್ನಾಗಿಸಿದ ದೇವರದಾಸಿಮಯ್ಯನ ಕಥೆ ಮತ್ತೊಂದೆಡೆ ಇದ್ದುದನ್ನು ಒಳಗೊಂಡ ಕೃತಿಗಳು ಬಸವಪುರಾಣದ ಪರಂಪರೆಗೆ ಸೇರುತ್ತವೆ. ಉದಾಹರಣೆಗೆ ಪ್ರೌಢದೇವರಾಯನ ಕಾವ್ಯ ಇಂತಹ ಕಥೆಯನ್ನೊಳಗೊಂಡ ಕೃತಿ.

**೩. ತ್ರಿಭುವನ ತಾತನ ಜೇಡರದಾಸಿಮಯ್ಯನ ರಗಳೆ ಪರಂಪರೆ:** ಇಲ್ಲಿ ಜೇಡದಾಸಿಮಯ್ಯನು ಶಿವನಿಂದ ತವನಿಧಿಯನ್ನು ಪಡೆದ ಕಥೆ ವ್ಯಕ್ತಗೊಂಡಿದ್ದು, ಆ ಕಥೆಯನ್ನಾಧರಿಸಿ ರಚನೆಗೊಂಡ ಕೃತಿಗಳು ತ್ರಿಭುವನತಾತನ ಪರಂಪರೆಗೆ ಸೇರುತ್ತವೆ. ಹರಿಹರನ ಪಂಪಾ ಶತಕದಲ್ಲಿಯೂ ಈ ಬಗ್ಗೆ ಉಲ್ಲೇಖಗಳಿವೆ. ಶಿವತತ್ವ ಚಿಂತಾಮಣಿ, ಅಮರನೀತಿಗಳ ರಗಳೆ, ಸಿದ್ದೇಶ್ವರ ಮಹಾಪುರಾಣ, ಭೃಂಗೀಶ್ವರ ರಗಳೆ ಮೊದಲಾದವು ಈ ಪರಂಪರೆಯವು.

**೪. ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ ಕೃತಿಯ ಪರಂಪರೆ:** ಈ ಕೃತಿಯು ಬಸವ ಪುರಾಣವನ್ನೇ ಅನುಸರಿಸಿದರೂ ಜೇಡರದಾಸಿಮಯ್ಯ ಮತ್ತು ದೇವರದಾಸಿಮಯ್ಯನ ಕೆಲವು ಪ್ರಸಂಗಗಳನ್ನು ಕಾವ್ಯದ ಮಧ್ಯದಲ್ಲಿ ಅಲ್ಲಲ್ಲಿ ಬಳಸಿಕೊಂಡು ಉಲ್ಲೇಖಿಸಿರುವುದು ವಿಶೇಷ. ದಾಸಿಮಯ್ಯನಿಗೆ ನದಿ ದಾರಿ ಬಿಡುವ ಪವಾಡದ ಉಲ್ಲೇಖ ಈ ಕೃತಿಯಿಂದಲೇ ಮೊದಲುಗೊಳ್ಳುತ್ತದೆ. ಆದ್ದರಿಂದ ನಂತರ ಬಂದ ಕೃತಿಗಳಲ್ಲಿ ಈ ಕತೆಯು ಸೇರಿಕೊಂಡು ಈ ಇಬ್ಬರು ವ್ಯಕ್ತಿಗಳ ಚರಿತ್ರೆ ಭವ್ಯವಾಗಿ ಹರಡಿರುವುದನ್ನು ಕಾಣಬಹುದು. ಅಂತೆಯೇ 'ಅಮುಗಿದೇವಯ್ಯಗಳ ಸಾಂಗತ್ಯ'ವನ್ನು ಇಂತಹ ಪರಂಪರೆಗೆ ಸೇರಿಸಬಹುದು

ಜೇಡರದಾಸಿಮಯ್ಯನ ಕುರಿತು ಚರಿತ್ರೆಯ ಭಾಗವಾಗಿ ಎಲ್ಲಾ ಆಕರಗಳು ಆತನ ಕುರಿತ ಒಂದು ಚರಿತ್ರೆಯನ್ನು ಕಟ್ಟಲು ಸಹಾಯಕವಾಗಿವೆ. ಅಂತೆಯೇ ಒಂದು ಕೃತಿಯ ನಂತರದ ಮತ್ತೊಂದು ಕೃತಿ ಆತನ ವ್ಯಕ್ತಿತ್ವವನ್ನು ವೈಭವೀಕರಿಸುವ ಹಿನ್ನೆಲೆಯಲ್ಲಿ ಆತನದಲ್ಲದ ಕೆಲವು ಅಂಶಗಳನ್ನು ಆತನದೇ ಎಂದು ಹೇಳಿರುವುದು ಇದೆ. ಬೇರೆ ಯಾವುದೋ ಶರಣನ ಜೀವನದ ಘಟನೆಗಳು, ಪವಾಡಗಳನ್ನು ಈತನದು ಎಂದಿರುವ ಸಾಧ್ಯತೆಗಳು ಇರಬಹುದು. ವೀರಶೈವ ಶರಣರ ಚರಿತ್ರೆಯನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ಇಂತಹ ಸಮಸ್ಯೆಗಳು ಪ್ರಧಾನವಾಗಿದೆ. ಆದಾಗ್ಯೂ ಕೆಲವು ನಿಶ್ಚಿತ ಆಧಾರಗಳನ್ನು ಅನುಸರಿಸಿ ಅಧಿಕೃತಗೊಳಿಸಬಹುದಾದ ಸಾಧ್ಯತೆಗಳು ಕಂಡುಬರುತ್ತದೆ. ಜೇಡರದಾಸಿಮಯ್ಯನ ಕುರಿತು ಬಂದ ಆಕರಗಳ ಅಧ್ಯಯನವು ಅವನ ಜೀವನ, ವ್ಯಕ್ತಿತ್ವವನ್ನು ತಿಳಿಯುವುದರೊಂದಿಗೆ ಈತನ ಜೀವನವೆಂಬಂತೆಯೇ ಬೆರೆತುಹೋದ ದೇವರದಾಸಿಮಯ್ಯನ ಚರಿತ್ರೆಯನ್ನು ಭಿನ್ನಗೊಳಿಸುವುದಾಗಿದೆ.

ಇಲ್ಲಿ ಉಲ್ಲೇಖಿತಗೊಂಡ ಎಲ್ಲಾ ಕಾವ್ಯ ಪುರಾಣಗಳು ವೀರಶೈವ ಧರ್ಮ ಹಾಗೂ ಧಾರ್ಮಿಕ ವ್ಯಕ್ತಿಗಳನ್ನು ಪ್ರತಿನಿಧಿಸುವ ಕಾವ್ಯಗಳಾಗಿವೆ. ವೀರಶೈವ ಸಾಹಿತ್ಯದಲ್ಲಿ ರಚನೆಯಾದ ಎಲ್ಲಾ ಶರಣರ ಚರಿತ್ರೆಗಳು ಭಾವಿಕ ಮತ್ತು ಮತಾವೇಶದ ಮನೋಧರ್ಮದಿಂದ ರಚನೆಯಾದವುಗಳು. ಇವುಗಳನ್ನು ರಚಿಸುವಾಗ ಆ ಕವಿಗಳು ಹಿಂದಿನ ಕವಿಗಳ ಮೇಲೆ ಹೆಚ್ಚು ಅವಲಂಬಿತರಾಗಿದ್ದು, ಅವರ ಪ್ರಭಾವವೇ ಹೆಚ್ಚಿನದಾಗಿತ್ತು. ಆದ್ದರಿಂದ ವೀರಶೈವ ಸಾಹಿತ್ಯ ಅಥವಾ ಪುರಾಣಗಳಲ್ಲಿ ಶರಣರ ಶುದ್ಧವಾದ ಚಾರಿತ್ರಿಕ ವಿವರಗಳನ್ನು ಕಾಣಲಾಗದೆ, ಅವರ ವೈಯಕ್ತಿಕ ಜೀವನದಲ್ಲಿ ನಡೆದಿರಬಹುದಾದ ಹಲವು ಘಟನೆಗಳನ್ನಾಗಿಸಿ, ಅವರನ್ನು ಪವಾಡ ಪುರುಷರನ್ನಾಗಿಸುವ ಪ್ರಯತ್ನಗಳನ್ನು ಮಾಡಿದ್ದಾರೆ. ಇಂತಹ ರಚನಕಾರರ ಸಾಲಿನಲ್ಲಿ ಮೊದಲ ಪಂಥಿಯವರು ಅವರ ಶಿಷ್ಯರು, ಅನುಯಾಯಿಗಳು, ಹತ್ತಿರದಿಂದ ಶರಣರನ್ನು ಕಂಡುವರನ್ನು ಗುರುತಿಸಬಹುದು. ಇವರ ನಂತರದ ಪರಂಪರೆ ಇವರನ್ನೇ ಅನುಸರಿಸಿ ಬರೆದಿರಬಹುದಾದ ಸಾಧ್ಯತೆಗಳಿವೆ.

ಚರಿತ್ರೆಯು ಒಂದು ಬದ್ಧತೆಯನ್ನು ಹೊಂದಿ ಅದನ್ನೇ ಲಕ್ಷ್ಮಣವನ್ನಾಗಿಸಿಕೊಂಡಿರುತ್ತದೆ. ಆದರೆ ಪುರಾಣವೆಂಬುದು ಹಾಗಲ್ಲ. ಇದು ಒಮ್ಮೆ ಬರೆದು ಮುಗಿಸಿದ ಕೂಡಲೇ ಮುಗಿಯುವ ಸಾಹಿತ್ಯ ಪ್ರಕಾರವಲ್ಲ. ಇದಕ್ಕೆ ಕಾಲಕಾಲಕ್ಕೆ ಹೊಸದಾದ ಅನೇಕ ವಿಷಯಗಳು, ವಸ್ತುಗಳು ಬಂದು ಸೇರುತ್ತವೆ. ಅಂತಹ ಅವಕಾಶವಿರುವುದು ಈ ಪುರಾಣವೆಂಬ ಸಾಹಿತ್ಯ ಪ್ರಕಾರಕ್ಕೆ ಮಾತ್ರ. ಹೀಗೆ ಹರಿಹರನಲ್ಲಿ ಕೇವಲ ತವನಿಧಿಯು ಬಯಲಾದ ಒಂದು ಕಥೆಯಿಂದ ಪ್ರಾರಂಭವಾದ ಜೇಡರದಾಸಿಮಯ್ಯನ ಚರಿತ್ರೆ, ಬಸವ ಪುರಾಣದಲ್ಲಿ ಇಬ್ಬರು ಶರಣರನ್ನು ಒಳಗೊಂಡು ಪೊಟ್ಟಲಕೆರೆ ಹಾಗೂ ಮುದನೂರು ಎಂಬ ಎರಡು ಅನುಭವ ಕೇಂದ್ರಗಳನ್ನು ಪ್ರತಿನಿಧಿಸುವಲ್ಲಿ ಯಶಸ್ವಿಯಾಯಿತು. ಅದೃಶ್ಯ ಕವಿಯಲ್ಲಿ ಇದು ಮತ್ತಷ್ಟು ಗಟ್ಟಿಗೊಂಡು ನಿಜವೆಂಬಂತೆ ರಚನೆಯಾಗಿ ಅದನ್ನು ಮತ್ತಷ್ಟು ದೃಢಗೊಳಿಸಿತು. ಹೀಗೆ ಇಲ್ಲಿ ರಚನೆಗೊಂಡ ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯರ ಚರಿತ್ರೆ, ಭೈರವೇಶ್ವರ ಕಾವ್ಯದಲ್ಲಿ ಮತ್ತಷ್ಟು ಕಥಾನಕಗಳೊಂದಿಗೆ ಸಮೃದ್ಧಿಯಾಗಿ ಬೆಳೆದು ನಿಂತಿತು. ಬಸವ ಪುರಾಣದ ಕಥಾ ವಸ್ತುವೇ ಹೀಗೆ ಎಲ್ಲಾ ಕೃತಿಗಳು ಅವುಗಳ ಕಥನ ನಿರ್ಮಾಣದ ಸಾಮರ್ಥ್ಯದಿಂದ ವೈಶಿಷ್ಟ್ಯಪೂರ್ಣವೆನಿಸುತ್ತವೆ. ಇವುಗಳೊಂದಿಗೆ ತ್ರಿಭುವನತಾತನ ಜೇಡರದಾಸಿಮಯ್ಯನ ರಗಳೆ, ಷಡಕ್ಷರಿಯ ಬಸವರಾಜವಿಜಯಗಳು ದಾಸಿಮಯ್ಯ ತವನಿಧಿ ಪಡೆದ ಕಥೆಯನ್ನು ಪ್ರಸರಣಗೊಳಿಸುತ್ತವೆ. ಇದೇ ಕಥೆ ಮುಂದೆ ಕಿತ್ತನಕೆರೆ ವೀರನ ಕೃತಿಯಲ್ಲಿ ಮತ್ತಷ್ಟು ರಂಗನ್ನು ಪಡೆದುಕೊಳ್ಳುತ್ತದೆ. ಹೀಗೆ ಒಂದು ಚರಿತ್ರೆಯ ವಸ್ತು ಹಲವಾರು ಅಂಶಗಳನ್ನೊಳಗೊಂಡು, ಹಲವಾರು ಆಯಾಮಗಳನ್ನು ದಾಟಿ ತನ್ನ ನಿಜ ಸ್ವರೂಪವೇ ಮರೆಮಾಚುವಂತೆ ಬೆಳೆದಿರುವುದನ್ನು ಇಲ್ಲಿ ಕಾಣಬಹುದು.

**ಅಡಿಟಿಪ್ಪಣಿಗಳು**

೧. ಕಲಬುರ್ಗಿ ಎಂ.ಎಂ., ಮಾರ್ಗ೭, ಪು.೩೧೧

೨. ಅದೇ ಪು.೨೧೧

೩. ರವೀಂದ್ರನಾಥ.ಕೆ, ಬಸವಯುಗದ ಶರಣರ ವಚನೇತರ ಸಾಹಿತ್ಯ, ಪ್ರಸ್ತಾವನೆ, ಪು.೨

೪. ಅನ್ನಪೂರ್ಣ ಜಾಲವಾದಿ, ಶಂಕರದಾಸಿಮಯ್ಯ ಪುರಾಣ: ಒಂದು ಅಧ್ಯಯನ, ಪು.೪೭

೫. ಸಿದ್ಧಲಿಂಗ ದೇಸಾಯಿ(ಸಂ), ಫ.ಗು ಹಳಕಟ್ಟಿ ಸಂಪುಟ ೧೨, ಪು.೬೮೬

೬. ಬಸವರಾಜ. ಎಲ್, ದೇವರ ದಾಸಿಮಯ್ಯನ ವಚನಗಳು, ಪೀಠಿಕೆ, ಪು.೧

೭. ಅನ್ನಪುರ್ಣ ಜಾಲವಾದಿ, ಶಂಕರದಾಸಿಮಯ್ಯ ಪುರಾಣ ಒಂದು ಅಧ್ಯಯನ ಪುರಾಣ, ಪು.೪೭

೮. ಕಲಬುರ್ಗಿ ಎಂ.ಎಂ., ಶಾಸನಗಳಲ್ಲಿ ಶಿವಶರಣರು, ಪು.೬

೯. ಅದೇ ಪು.೩೫

೧೦. ದೇವಿರಪ್ಪ. ಎಚ್–ರಾಚಪ್ಪ. ಆರ್, ಜೇಡರ ದಾಸಿಮಯ್ಯನ ವಚನಗಳು, ಪ್ರಸ್ತಾವನೆ.

೧೧. ಕಲಬುರ್ಗಿ ಎಂ.ಎಂ., ಮಾರ್ಗ ೭, ಪು.೧೩೧

೧೨. ಕಲಬುರ್ಗಿ. ಎಂ.ಎಂ, ಶಾಸನಗಳಲ್ಲಿ ಶಿವಶರಣರು ಪು.೩೭

೧೩. ಅದೇ, ಪು.೨೭

೧೪. ಅದೇ, ಪು.೩೬

೧೫. ಅದೇ, ಪು.೩೬

೧೬. ಅದೇ, ಪು.೩೬

೧೭. ಅದೇ, ಪು.೫೯

೧೮. ಅದೇ, ಪು.೫೯

೧೯. ಅದೇ, ಪು.೬೯

೨೦. ಅದೇ, ಪು.೯೭

೨೧. ಅದೇ, ಪು.೩೫

೨೨. ರಾಮೇರೆಡ್ಡಿ ಎಸ್. ರೆಡ್ಡೇರ, ದೇವರದಾಸಿಮಯ್ಯನ ಜೀವನ ಹಾಗೂ ಸಾಹಿತ್ಯ, ಪು.೭

೨೩. ಅದೇ, ಪು.೧

೨೪. ಬಸವರಾಜ ಎಲ್., ದೇವರ ದಾಸಿಮಯ್ಯನ ವಚನಗಳು ಪು.೬೫

೨೫. ಅದೇ, ಪು.೭೨

೨೬. ಅದೇ, ಪು.೭೨

೨೭. ಅದೇ, ಪು.೭೨

೨೮. ಈಶ್ವರಾನಂದ, ದೇವರದಾಸಿಮಯ್ಯನವರ ವಚನಗಳು ಮತ್ತು ದಶೋಪನಿಷತ್ತು, ಪು.೯೫

೨೯. ಅದೇ, ಪು.೯೫

೩೦. ಕಲಬುರ್ಗಿ ಎಂ.ಎಂ., ಮಾರ್ಗ-೧, ಪು.೧೫೬

೩೧. ಹಳಕಟ್ಟಿ ಫ.ಗು., ಸಂಪುಟ, ಪು.೫೧೭

೩೨. ಬಸವರಾಜು ಎಲ್., ದೇವರದಾಸಿಮಯ್ಯನ ವಚನಗಳು, ಪ್ರಸ್ತಾವನೆ

೩೩. ಕಲಬುರ್ಗಿ ಎಂ.ಎಂ., ಮಾರ್ಗ-೧, ಪು.೧೫೭

೩೪. ಅದೇ, ಪು.೧೫೬

೩೫. ಅದೇ, ಪು.೧೬೨

೩೬. ಗುಂಜಾಳ ಎಸ್.ಆರ್., ಫ.ಗು.ಹಳಕಟ್ಟಿ ಸಮಗ್ರ ಸಂಪುಟ, ೧, ಅಲ್ಲಮನ ವಚನಗಳು

೩೭. ಗುಂಜಾಳ ಎಸ್.ಆರ್., ಫ.ಗು ಹಳಕಟ್ಟಿ ಸಮಗ್ರ ಸಂಪುಟ, ೧ ಚೆನ್ನಬಸವಣ್ಣನ ವಚನಗಳು

೩೮. ಗುಂಜಾಳ ಎಸ್.ಆರ್., ಫ.ಗು ಹಳಕಟ್ಟಿ ಸಮಗ್ರ ಸಂಪುಟ, ೧ ಚೆನ್ನಬಸವಣ್ಣನ ವಚನಗಳು

೩೯. ಗುಂಡಣ್ಣ ಕಲಬುರ್ಗಿ, ಫ.ಗು.ಹಳಕಟ್ಟಿ ಸಮಗ್ರ ಸಂಪುಟ ೩, ಅಂಬಿಗರ ಚೌಡಯ್ಯನ ವಚನಗಳು

೪೦. ಅದೇ, ಆದಯ್ಯನ ವಚನಗಳು

೪೧. ಅದೇ, ಉರಿಲಿಂಗಪೆದ್ದಿಗಳ ವಚನಗಳು

೪೨. ಮಾಳಿ ವಿ.ಎಸ್., ಫ.ಗು ಹಳಕಟ್ಟಿ ಸಮಗ್ರ ಸಂಪುಟ ೪, ಪು.೧೨೩

೪೩. ಮಾಳಿ. ವಿ.ಎಸ್., ಫ.ಗು ಹಳಕಟ್ಟಿ ಸಮಗ್ರ ಸಂಪುಟ ೪, ಪು. ೨೧೯

೪೪. ಸಂಕೀರ್ಣ ವಚನ ಸಂಪುಟ ೪, ಪು.೭೬೧

೪೫. ವಿದ್ಯಾಶಂಕರ ಎಸ್., ವೀರಶೈವ ಸಾಹಿತ್ಯ ಚರಿತ್ರೆ, ಪು.೧೦೦

೪೬. ವಿದ್ಯಾಶಂಕರ ಎಸ್., ವೀರಶೈವ ಪುರಾಣಗಳು ಒಂದು ಅಧ್ಯಯನ ಪು.೭೭

೪೭. ಅದೇ ಪು.೭೭

೪೮. ಕಲಬುರ್ಗಿ ಎಂ.ಎಂ., ಹರಿಹರನ ರಗಳೆಗಳು, ಪು.೯

೪೯. ಕಲಬುರ್ಗಿ ಎಂ.ಎಂ., ಹರಿಹರನ ರಗಳೆಗಳು. ಪು.೭೧

೫೦. ಅದೇ, ಪು.೭೧

೫೧. ಅದೇ, ಪು.೭೨

೫೨. ಅದೇ ಪು.೮೦

೫೩. ಅದೇ, ಪು.೮೦

೫೪. ಅದೇ, ಪು.೮೧

೫೫. ಅದೇ, ಪು.೮೨

೫೬. ನಾರಾಯಣ ಪಿ.ವಿ., ಭೀಮಕವಿಯ ಬಸವಪುರಾಣ ಪು.೧೧

೫೭. ವಿದ್ಯಾಶಂಕರ್ ಎಸ್., ಭೀಮಕವಿಯ ಬಸವಪುರಾಣ ಪು.೬೦೫

೫೮. ಅದೇ, ಪು.೬೦೬

೫೯. ಅದೇ, ಪು.೬೦೬

೬೦. ಬಸವರಾಜು ಎಲ್., ದೇವರದಾಸಿಮಯ್ಯನ ವಚನಗಳು, ಪೀಠಿಕೆ, ಪು.೨೬

೬೧. ನಾರಾಯಣ ಪಿ.ವಿ., ಭೀಮಕವಿಯ ಬಸವಪುರಾಣ ಪು.೨೯೭

೬೨. ಬಸವರಾಜು. ಎಲ್, ದೇವರದಾಸಿಮಯ್ಯನ ವಚನಗಳು, ಪೀಠಿಕೆ, ಪು.೩೧

೬೩. ಅದೇ, ಪು.೩೨

೬೪. ಅದೇ, ಪು.೨೬

೬೫. ಸಿದ್ಧಲಿಂಗದೇಸಾಯಿ.(ಸಂ) ಫ.ಗು.ಹಳಕಟ್ಟಿ ಸಂಪುಟ ೧೨, ಪು.೫೨೫

೬೬. ಅದೇ, ಪು.೫೨೫

೬೭. ಅದೇ, ಪು.೫೨೬

೬೮. ಅದೇ, ಪು.೫೨೭

೬೯. ಅದೇ, ಪು.೫೨೯

೭೦. ಅದೇ, ಪು.೫೩೦

೭೧. ಅದೇ, ಪು.೫೩೦

೭೨. ಅದೇ, ಪು.೫೩೦

೭೩. ಮರಳಸಿದ್ಧಪ್ಪ ಕೆ., ಷಟ್ಪದಿ ಸಾಹಿತ್ಯ, ಪು.೯೪

೭೪. ಕನ್ನಡ ಸಾಹಿತ್ಯ ಪರಿಚಯ, ಮೈ.ವಿ.ವಿ. ಪು.೬೫

೭೫. ಅದೇ, ಪು.೬೬

೭೬. ಹಿರೇಮಠ ಆರ್.ಸಿ., (ಸಂ) ಬಸವರಾಜ ವಿಜಯಂ, ಪದ್ಯ ೨೭

೭೭. ಅದೇ, ಪದ್ಯ ೩೩

೭೮. ಅದೇ, ಪದ್ಯ ೩೪

೭೯. ಅದೇ, ಪದ್ಯ ೪೦

೮೦. ಅದೇ, ಪದ್ಯ ೫೩

೮೧. ಅದೇ, ಪದ್ಯ ೫೨

೮೨. ಅದೇ, ಪು.೨೯೩

೮೩. ಅದೇ, ಪು.೨೯೫

೮೪. ಅದೇ, ಪು.೨೯೬

೮೫. ಬಸವಸ್ವಾಮಿಗಳು(ಸಂ), ಭೈರವೇಶ್ವರ ಕಾವ್ಯ, ಸಂಧಿ ೨, ಪದ್ಯ ೧೮೯

೮೬. ಬಸವನಾಳ ಶಿ.ಶಿ., ವಿರೂಪಾಕ್ಷ ಪಂಡಿತನ ಚನ್ನಬಸವಪುರಾಣ ಪು.೧೯

೮೭. ಉಮಾಪತಿ ಎಸ್., ಉತ್ತರದೇಶದ ಬಸವಲಿಂಗ, ಪುಟ ೧೨೨

೮೮. ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ ಭಾಗ ೨, ಗೌತಮಿ ನದಿ ದಾರಿ ಬಿಟ್ಟ ಕಥೆ

೮೯. ಬಸಪ್ಪ ಎಸ್., ಸಾನಂದ ಚರಿತೆ, ಪು.೨೯೭

೯೦. ಮಂಜಪ್ಪ ಶೆಟ್ಟಿ, ಎಂ.ಪಿ., ಎಲ್ಲಾಪುರಾತನರ ಪುರಾಣ, ಪು.೬೯

೯೧. ನರಸಿಂಹಾಚಾರ್.ಆರ್ ಅವರು ಸಂಪಾದಿಸಿದ ಕವಿಚರಿತೆ ಸಂಪುಟದಲ್ಲಿ ಈ ಕುರಿತು ಹೇಳಲಾಗಿದೆ.

೯೨. ವಿರೂಪಾಕ್ಷ ಪಂಡಿತನ ಚನ್ನಬಸವಪುರಾಣ, ಸಂಧಿ ೫೭, ಪದ್ಯ ೧೧

೯೩. ಅದೇ, ಪದ್ಯ ೧೨

೯೪. ಅದೇ, ಪದ್ಯ ೧೩

೯೫. ಅದೇ, ಪದ್ಯ ೧೯

೯೬. ಅದೇ, ಪದ್ಯ ೨೦

# ಅಧ್ಯಾಯ: ಐದು

# ಜೇಡರದಾಸಿಮಯ್ಯ: ಸಾಹಿತ್ಯ ಸಮೀಕ್ಷೆ

೫.೧. ವಿರೂಪಾಕ್ಷದೇಶಿಕನ ದೇವರದಾಸಿಮಯ್ಯ ಪುರಾಣ

೫.೨. ಅಯ್ಯಪ್ಪ ಕವಿಯ ದೇವಾಂಗ ಪುರಾಣ

೫.೩. ರಾಘವಾಂಕನದೆನ್ನಲಾದ ದೇವಾಂಗ ದಾಸಿಮಯ್ಯ ಪುರಾಣ

೫.೪. ಮಹಾಂತದೇಶಿಕನ ಶಿವಶರಣ ವಿಳಾಸ

೫.೫. ದಾಸಿಮಯ್ಯನ ಬಗೆಗಿನ ಕೃತಿಗಳನ್ನಾಧರಿಸಿ: ತೌಲನಿಕ ವಿಶ್ಲೇಷಣೆ

೫.೬. ಪೊಟ್ಟಲಕೆರೆ: ಒಂದು ವಿಶ್ಲೇಷಣೆ

೫.೭. ಉತ್ತರೇಶ್ವರ ದೇವಾಲಯ: ಒಂದು ವಿವೇಚನೆ

೫.೮. ಅಗ್ರಹಾರ, ಶಿವಪುರ, ಮಠ ಸಂಸ್ಕೃತಿ ಹಾಗೂ ದಾಸಿಮಯ್ಯ

# ಅಧ್ಯಾಯ: ಐದು

## ಜೇಡರದಾಸಿಮಯ್ಯ: ಸಾಹಿತ್ಯ ಸಮೀಕ್ಷೆ

ಹನ್ನೆರಡನೇ ಶತಮಾನದ ತರುವಾಯ ವೀರಶೈವವು ಹಲವು ಹಂತಗಳಲ್ಲಿ ತನ್ನನ್ನು ರೂಪಿಸಿಕೊಂಡು ನಡೆದುಬಂದಿದೆ. ಆ ಘಟ್ಟಗಳಲ್ಲಿ ಕೆಲವು ಶರಣರು ವಚನಕಾರರು ಬಾಳಿ ಬೆಳಗಿರುವರು ಆದರೆ ನೂರೊಂದು ವಿರಕ್ತರು ಏಳುನೂರೊಂದು ವಿರಕ್ತರನ್ನು ಬಿಟ್ಟರೆ ಮಿಕ್ಕವರೆಲ್ಲ ಹನ್ನೆರಡನೇ ಶತಮಾನದವರೆಂಬ ಪರಿಭಾವನೆ ನಮ್ಮಲ್ಲಿ ಬೇರು ಬಿಟ್ಟಿದೆ. "ಶರಣರನ್ನು ಅವರವರ ನ್ಯಾಯ ಘಟ್ಟಗಳಲ್ಲಿ ನಿಲ್ಲಿಸಿ ಕಾಲನಿರ್ಣಯ ಮಾಡಿ ಗತಿ ಪ್ರಗತಿಗಳನ್ನು ಸಕ್ರಮವಾಗಿ ಪುನರಚಿಸುವುದು ಅವಶ್ಯಕವೆನಿಸಿದೆ" ಎಂಬ ಎಂ.ಎಂ.ಕಲಬುರ್ಗಿಯವರ ಮಾತನ್ನಾಧರಿಸಿ ಅಧ್ಯಯನಗಳು ಅತ್ಯಂತ ಮಹತ್ವ ಪಡೆದಿವೆ ಎಂದರೆ ತಪ್ಪಾಗಲಾರದು. ಈ ವ್ಯಾಖ್ಯಾನವನ್ನು ಒಪ್ಪುವ ಮೂಲಕ ವೀರಶೈವ ಪುರಾಣಗಳ ರಚನೆಯಲ್ಲಿನ ಸತ್ಯಾಸತ್ಯ ಘಟನೆಗಳನ್ನು ಪೇರಿಸಿ ಚಾರಿತ್ರಿಕ ಐತಿಹಾಸಿಕ ಘಟನೆಗಳನ್ನು ಆಧರಿಸಿ ಒಂದು ಚರಿತ್ರೆ ನಿರ್ಮಾಣದ ಹೊಸ ಸಾಧ್ಯತೆಯನ್ನು ಅನುಸರಿಸಲಾಗುವುದು.

ಮಹಾಕಾವ್ಯಗಳ ಕೋಟೆಯನ್ನು ಒಡೆದು ಧರ್ಮದ ತಿರುಳನ್ನು ಜನಸಾಮಾನ್ಯರ ಗಮನಕ್ಕೆ ಒಯ್ದು ತಲುಪಿಸಿದ ಶ್ರೇಯಸ್ಸು ಕನ್ನಡ ವಚನಕಾರರಿಗಿದೆ. ಅಷ್ಟೇ ಅಲ್ಲದೇ ವಚನ ಧರ್ಮ ಒಂದನ್ನು ರೂಪಿಸಿದ ಗರಿಮೆಯು ವೀರಶೈವ ಮಹಾಪುರಷರಿಗೆ ಸಲ್ಲುತ್ತದೆ. ಇವರ ಮಹಿಮೆಯನ್ನು ಸಾರುವ ಉದ್ದೇಶದಿಂದ ಪುರಾಣ ಕಾವ್ಯಗಳು ವೀರಶೈವ ಸಾಹಿತ್ಯದಲ್ಲಿ ಸ್ಥಾನ ಪಡೆದವು. ಒಂದು ದೃಷ್ಟಿಯಲ್ಲಿ ಶರಣರು ಪವಾಡಗಳನ್ನು ನಂಬದೆ ಅಲ್ಲಗಳೆದಿದ್ದರು. ಅವರ ಜೀವನ ಸಾಧನೆ ಸಾಮಾಜಿಕವಾಗಿ ಅವರ ಸ್ಥಾನ ಹಾಗೂ ಅವರ ಕ್ರಿಯಾತ್ಮಕತೆಗಳ ಪ್ರೌಢಿಮೆ ಎಲ್ಲ ಪವಾಡಗಳಿಗಿಂತಲೂ ಅಧಿಕವೆಂಬಂತೆ ಪುರಾಣಗಳಲ್ಲಿ ರಚಿಸಲಾಗಿದೆ. ಪೌರಾಣಿಕ ದೃಷ್ಟಿಯಿಂದ ವೀರಶೈವ ಪುರಾಣಗಳು ಪ್ರಾರಂಭದಲ್ಲಿ ಸಾಮಾನ್ಯವಾಗಿ ಬರೆಯಲ್ಪಟ್ಟು ನಂತರ ಪೌರಾಣಿಕ

ಹಿನ್ನೆಲೆಯನ್ನು ತನ್ನೊಟ್ಟಿಗೆ ಅರಗಿಸಿಕೊಂಡಿರುವುದನ್ನು ಕಾಣುತ್ತೇವೆ. ಇಲ್ಲಿನ ಅತೀಂದ್ರಿಯ ಪ್ರವರ್ಧತೆಯ ಪವಾಡಗಳು ನಂಬಲರ್ಹವಲ್ಲದವಾಗಿದ್ದರೂ, ಅವುಗಳ ಚರ್ಚೆ ಇಲ್ಲಿ ಪ್ರಮುಖವೇ ಆಗಿದೆ. ವೈಜ್ಞಾನಿಕ ನೆಲೆಯನ್ನು ಸ್ಪರ್ಶಿಸದೆ ತಾತ್ವಿಕತೆಯನ್ನಾಧರಿಸಿ, ಸಾಹಿತ್ಯಿಕ ಹಿನ್ನೆಲೆಯಲ್ಲಿ ಚರ್ಚಿಸುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ.

"ಪವಾಡಗಳ ಸತ್ಯಾಸತ್ಯತೆಯ ಬಗೆಗೆ ಸಂಶೋಧನೆ ನಡೆಸಿ ನಿರ್ಣಯಿಸುವುದು ಮತ್ತು ಅವುಗಳನ್ನು ವೈಜ್ಞಾನಿಕ ಪರಿಭಾಷೆಯಲ್ಲಿ ಅರ್ಥೈಸುವುದು ಪ್ರಕೃತ ಪ್ರಬಂಧದ ಉದ್ದೇಶಕ್ಕೆ ಹೊರತಾದುದು. ಪವಾಡಗಳನ್ನು ಸಮರ್ಥಿಸುವುದಾಗಲಿ, ಸ್ಥಿರೀಕರಿಸುವುದಾಗಲಿ ನಮ್ಮ ಉದ್ದೇಶವಲ್ಲ. ಸಾಹಿತ್ಯಾಭ್ಯಾಸದ ವಿದ್ಯಾರ್ಥಿಯ ವ್ಯಾಪ್ತಿಯಿಂದ ಅಂತಹ ಅಧ್ಯಯನ ಹೊರಗು"[೧] ಎಂಬ ವ್ಹಿ.ಜಿ.ಪೂಜಾರರ ನಿರ್ಣಯವನ್ನು ಒಪ್ಪಿ ಇಲ್ಲಿ ಪುರಾಣಗಳನ್ನು ಮತ್ತು ಅವುಗಳ ಕಥಾ ವಸ್ತುಗಳನ್ನು ಅಧ್ಯಯನ ಮಾಡಲಾಗಿದೆ. ಪುರಾಣ ಸಾಹಿತ್ಯವು ಕೇವಲ ಅತೀಂದ್ರಿಯ ಹಾಗೂ ಭವ್ಯ ಚಾರಿತ್ರಿಕ ಘಟನೆಗಳನ್ನು ಒಳಗೊಂಡಿದ್ದು, ರಚನಾ ಶೈಲಿ, ನಿರೂಪಣೆ ಮುಂತಾದ ಅಂಶಗಳಿಂದ ಅದರದ್ದೇ ಆದ ಪ್ರಾಮುಖ್ಯತೆ ಪಡೆದುಕೊಂಡಿದೆ. ಚರಿತ್ರೆಯನ್ನು ಭವ್ಯತೆಗೊಳಪಡಿಸಿ ಕಥಾ ನಾಯಕನನ್ನು ದೈವತ್ವಕ್ಕೋ ದೇವದೂತನೆಂದೋ ಹೇಳುವ ಪರಂಪರೆ ಇದೆ. ಜೇಡರದಾಸಿಮಯ್ಯನನ್ನು ಕುರಿತು ರಚನೆಗೊಂಡ ಸಾಹಿತ್ಯವು ಪುರಾಣ ಸಾದೃಶ್ಯವೇ ಆಗಿದ್ದು, ಅದರ ವಿಶ್ಲೇಷಣೆ ಅಗತ್ಯವಾಗಿದೆ. ಇಲ್ಲಿ ಚರ್ಚಿಸಲ್ಪಡುವ ಎಲ್ಲಾ ಕಾವ್ಯಗಳಲ್ಲಿ ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯನ ಕಥೆಗಳು ಒಂದರೊಳಗೆ ಒಂದು ಸೇರಿ ಹಾಸುಹೊಕ್ಕಾಗಿ ಹೆಣೆಯಲ್ಪಟ್ಟಿದ್ದು ಸನ್ನಿವೇಷಕ್ಕನುಗುಣವಾಗಿ ಆ ಇಬ್ಬರ ಹೆಸರುಗಳನ್ನು ಬಳಸಲಾಗಿದೆ.

'ವೀರಶೈವ ಕವಿಗಳ ಸಾಹಿತ್ಯದ ಬಹುಪಾಲು ಶರಣರ ಚರಿತ್ರೆಗೆ ಮೀಸಲು. ಅಲ್ಲಿ ಸ್ವತಂತ್ರ ಕೃತಿ ಇಲ್ಲವೆ ಉಪಕಥೆಯ ರೂಪದಲ್ಲಿ ಶರಣರ ಚರಿತ್ರೆ ಅರಳಿನಿಂತಿದೆ. ಆದರೆ ಮೂಲವಿಗ್ರಹವನ್ನು ಮರೆಗೊಳಿಸುವ ಅಲಂಕಾರದ ಹೊರೆಯಂತೆ ಇಲ್ಲಿ ಶರಣರ ಸುತ್ತ ಪವಾಡಗಳು ಹೆಣೆದು ನಿಂತಿವೆ. ಕೆಲವು ಸಲ ಒಬ್ಬನ ಪವಾಡ ಮತ್ತು ಘಟನೆಗಳನ್ನು ಇನ್ನೊಬ್ಬನ ತಲೆಗೆ ಕಟ್ಟಲಾಗಿದೆ. ಇನ್ನು ಕೆಲವು ಸಲ ಒಬ್ಬನ ಘಟನೆ ಮತ್ತು ಪವಾಡಗಳು ಕೃತಿಯಿಂದ ಕೃತಿಗೆ ಭಿನ್ನವಾಗಿವೆ. ಹೀಗಾಗಿ ಇತಿಹಾಸದ ಎಳೆಗಳ ಕೊರತೆಯಿಂದ ಕೂಡಿದ ಈ ಚರಿತ್ರೆ ಮತ್ತು ಪುರಾಣವನ್ನು ಎರಡನೇ ವರ್ಗದ ಆಧಾರಗಳೆಂದು' ವಿದ್ವಾಂಸರು ಕರೆಯುತ್ತಾರಾದರೂ, ಇವು ಅಧ್ಯಯನದ ದೃಷ್ಟಿಯಿಂದ ಪ್ರಾಮುಖ್ಯತೆ ಪಡೆದೇ ಇರುತ್ತವೆ. ಹಾಗಾಗಿ ಜೇಡರದಾಸಿಮಯ್ಯನ ಕುರಿತ ಸಾಹಿತ್ಯ ಕೃತಿಗಳನ್ನು ಅನಾವರಣಗೊಳಿಸಿ ಚಾರಿತ್ರಿಕ ಅಂಶಗಳನ್ನು ಪರಿಗಣಿಸಿ ಚರಿತ್ರೆಯನ್ನು ಮರುತೂಗಿ ನೋಡುವ ಉದ್ದೇಶವನ್ನು ಹೊಂದಿ ಅಧಯಯನವನ್ನು ಕೈಗೊಳ್ಳಲಾಗಿದೆ.

**ಜೇಡರದಾಸಿಮಯ್ಯನ ಕುರಿತ ಸಾಹಿತ್ಯ ಕೃತಿಗಳು**

೧ ವಿರೂಪಾಕ್ಷ ದೇಶಿಕನ 'ದೇವರದಾಸಿಮಯ್ಯನ ಪುರಾಣ'

೨ ಅಯ್ಯಪ್ಪ ಕವಿಯ 'ದೇವಾಂಗ ಪುರಾಣ'

೩ ರಾಘವಾಂಕನದೆನ್ನಲಾದ 'ದೇವಾಂಗ ದಾಸಿಮಯ್ಯ ಪುರಾಣ'

೪ ಮಹಾಂತ ದೇಶಿಕನ 'ಶಿವಶರಣ ವಿಲಾಸ'

ಈ ಕೃತಿಗಳು ಪುರಾಣಗಳೇ ಆಗಿದ್ದರೂ ಜೇಡರದಾಸಿಮಯ್ಯನ ಕುರಿತ ಆಕರಗಳ ಚರ್ಚೆಯಲ್ಲಿ ಕೆಲಮಟ್ಟಿಗೆ ಸತ್ಯದ ದಾರಿಯನ್ನು ತೋರುತ್ತವೆ. ಜೇಡರದಾಸಿಮಯ್ಯನ ನಿರ್ಮಲವಾದ ಬದುಕು ಸತ್ಯವಿದ್ದರೂ ಪುರಾಣ ನಿರ್ಮಾರ್ತೃಗಳಿಂದ ಅದು ಭವ್ಯತೆಯಿಂದ ಕೂಡಿ ಆತನ ಚರಿತ್ರೆಯು ಒಂದಂಶವಾಗಿ ವೀರಶೈವ ಆಚಾರಗಳು ಮತ್ತು ಆತನ ಪವಾಡಗಳೇ ಕೃತಿಯ ಮೂರಂಶವನ್ನು ಆವರಿಸಿರುವುದು ಕಂಡು ಬರುತ್ತದೆ. ಜೇಡರದಾಸಿಮಯ್ಯನೊಂದಿಗೆ ದೇವರ ದಾಸಿಮಯ್ಯನ ಚಾರಿತ್ರಿಕ ಹಾಗೂ ಪವಾಡದ ಅಂಶಗಳು ಸೇರಿ ಹೋಗಿವೆ.

**೫.೧. ವಿರೂಪಾಕ್ಷ ದೇಶಿಕನ 'ದೇವರದಾಸಿಮಯ್ಯನ ಪುರಾಣ'**

ಭಾಮಿನಿ ಷಟ್ಪದಿಯಲ್ಲಿರುವ ಈ ಕೃತಿಯು ಸಂಸ್ಕೃತದಿಂದ ಕನ್ನಡಕ್ಕೆ ಅನುವಾದವಾಗಿದೆ. ಇದನ್ನು ಕವಿಯೇ ಹೇಳಿಕೊಂಡಿದ್ದಾನೆ.

ಮೊದಲು ಸಕ್ಕದಮಿರಲು ಕರ್ನಾಟ
ಕದ ಬಗೆಯ ಮೃದುಮಧುರ [ಸ]ರಸಾ
ಸ್ವದವೆನಿಸಿ ಮುದನೂರದಾಸನ ಕೃತಿಯ ಹರುಷದೊಳು
ಸದಮಲೋತ್ತಮ ಮತಿಯು ತನ್ನಿ
ರ್ಮದ ಗುಣಾಂಕಂ ಲಿಂಗಗುರುಚರ
ಪದಭಜಕ ವಿರೂಪಾಕ್ಷದೇಶಿಕ ಪೇಳ್ದ ಸಂತಸದಿ[೨]

ಎಂದು ಹೇಳುವಲ್ಲಿ ವಿರೂಪಾಕ್ಷದೇಶಿಕನೇ ಈ ಕಾವ್ಯ ರಚಿಸಿದ್ದಾನೆಂದು ಸ್ಪಷ್ಟವಾಗುತ್ತದೆ. ಅದರಲ್ಲಿ ಯಾವುದೇ ಅನುಮಾನಗಳಿಲ್ಲ.

ಶ್ರೀಗುರುವೆ ಸದ್ಗುರುವೆ ಸದ್ವಿ
ದ್ಯಾಗುರುವೆ ಮಾಂಗಲ್ಯದಾಯಕ
ಭೋಗ ಮೋಕ್ಷಪ್ರದ ಮಹಾಗುರು ಮೂರ್ತಿ ಮಹಿಮಾಬ್ಧಿ
ರಾಗರೋಷಾದಿ ವಿರಹಿತ ಸಕ

ಲಾಗಮ ಸುತತ್ವಾರ್ಥಬೋಧ

ಕ ಗುರುವೆ ಜಯ ಜಯತು ಶ್ರೀ ಮಲೆಶಾಂತ ಮಮಗುರುವೇ[೩]

ಎಂಬ ಪದ್ಯದಲ್ಲಿ ವಿರೂಪಾಕ್ಷ ದೇಶಿಕನ ಗುರುವಿನ ಬಗ್ಗೆ ಹೇಳಿಕೊಂಡಿದ್ದಾನೆ 'ಶ್ರೀ ಮಲೆಶಾಂತ ಮಮ ಗುರುವೆ' ಎಂಬಲ್ಲಿ ಮಲೆಯಶಾಂತ ಈತನ ಗುರು ಎಂದು ಸ್ಪಷ್ಟವಾಗುತ್ತದೆ. 'ಮಲೆಯ' ಎನ್ನುವುದಾದರೆ, ಇತ್ತೀಚಿನ ದಿನಗಳಲ್ಲಿ ನಾವು ಕರೆಯುವ ಮಲೆಯ ಮಹಾದೇಶ್ವರ, ಮಲೆಯ ಶಂಕರ ಎಂದಿಟ್ಟುಕೊಂಡರೆ ಈತನೂ ಸಹ ಯಾವುದೋ ಒಬ್ಬ ಬೆಟ್ಟವಾಸಿಯಾದ ಸನ್ಯಾಸಿಯೋ ಮತ್ತಾರೋ ಆಗಿರಬೇಕು ಎಂದೆನಿಸುತ್ತದೆ. ಮತ್ತೊಂದು ಅರ್ಥದಲ್ಲಿ ಮಲೆ ಎಂದರೆ "ಪ್ರಾಚೀನಕಾಲದಲ್ಲಿ ಶಿವಗಂಗೆಗೆ ಮಲೆ ಎಂಬ ಹೆಸರನ್ನು ಬಳಸಿದ್ದು."[೪] ಈ ಕವಿ ಶಿವಗಂಗೆ ಯವನೇ ಆಗಿರಬೇಕು ಮತ್ತು ರೂಢಿಗತವಾದ ಗುರು ಪರಂಪರೆಯವನೇ ಆಗಿರಬೇಕು ಎಂಬ ಸರಸ್ವತಿ ಭಗವತಿಯವರ ಮಾತು ಸಹ ಇಲ್ಲಿ ಹೆಚ್ಚು ಪ್ರಸ್ತುತವೆನಿಸುತ್ತದೆ. ಈ ಲೇಖಕರ ಮಾತನ್ನೆ ಆಧಾರವಾಗಿ ಬಳಸಿಕೊಂಡಲ್ಲಿ ಕವಿಯ ಸ್ಥಳದ ವಿಚಾರವೂ ಸ್ಪಷ್ಟಗೊಂಡು 'ಶಿವಗಂಗೆ' ಎಂದು ದೃಢೀಕರಿಸಬಹುದು. ಇನ್ನು ಕಾಲದ ವಿಚಾರಕ್ಕೆ ಬಂದರೆ ಕವಿ ಎಲ್ಲಿಯೂ ತನ್ನ ಕಾಲದ ಬಗ್ಗೆ ಹೇಳಿಕೊಂಡಿಲ್ಲ. ಕೊನೆಯಲ್ಲಿ ಲಿಪಿಕಾರ 'ಯಿತೀ ಶ್ರೀ ದೇವರದಾಸಿಮಯ್ಯ ನವರ ಪುರಾಣ ಸಂಪೂರ್ಣವಾದ ಮಿತಿ/ಶಕ ೧೭೬೫ ಶೋಭಕೃತ್ನಾಮ ಸಂವತ್ಸರದ ಭಾದ್ರಪದಮಾಸ ಬಹಳ ಚತುರ್ಥಿ/ಕಜವಾಸರ ಅಶ್ವಿನಿ ನಕ್ಷತ್ರ ಚಂದ್ರಹೊರ್ಯದಲ್ಲಿ/ಲೇಖನ ಮುಗಿಯಿತ್ತು ಎಂದು ದಾಖಲಿಸಿದ್ದಾನೆ.[೫]

ಮಲೆಯರಾಜ ಮಯೂರ ಬಾಣನ
ಮಲುಹಣನ ರಾಘವನ ಸೋಮನ
ಸುಲಭ ಗುಣ ಕವಿಕಾಳಿದಾಸನ ಹರಿಹರೇಶ್ವರನ।
ಕಲಿಮಲಾಪಹ ಚಾಮರಸ ನಿ
ರ್ಮಲ ಸುಮತಿ ಭವಭೂತಿಗಳ ಪದ
ಜಲಜವನು ಕೊಂಡಾಡಿ ಪೇಳುವೆನೀ ಮಹಾಕೃತಿಯ[೬]

ಈ ಪದ್ಯದಲ್ಲಿ ಈತನಿಗೂ ಮೊದಲು ಜೀವಿಸಿದ್ದ ಮತ್ತು ಆತನಿಗೆ ಪರಿಚಿತವಿದ್ದ ಕೆಲವು ಕವಿಗಳ ಹೆಸರನ್ನು ಹೇಳಿದ್ದಾನೆ. ಅದರಲ್ಲಿ ಚಾಮರಸ ಈಚಿನವನಾದ್ದರಿಂದ ಆತನನ್ನೆ ಗಣನೆಗೆ ತೆಗೆದುಕೊಳ್ಳುವುದಾದರೆ, ವಿರೂಪಾಕ್ಷದೇಶಿಕ ೧೬ನೇ ಶತಮಾನದ ನಂತರದವನು ಎಂದು ಸಾಧಿಸಬಹುದು. ಮೇಲೆ ಹೇಳಿದಂತೆ ಕೃತಿಯು ಪ್ರತಿಯಾದ ಕಾಲ ೧೭೬೫ ಎಂಬುದನ್ನು ಗ್ರಹಿಸಿ ೧೬ನೇ ಶತಮಾನದ ನಂತರದ ಹಾಗೂ ೧೮ನೇ ಶತಮಾನಕ್ಕೂ ಮೊದಲು ಈತ

ಬದುಕಿದ್ದ ಎಂದು ಸ್ಪಷ್ಟವಾಗುತ್ತದೆ. ಕೃತಿಯು ಅಲ್ಲಲ್ಲಿ ಸಂಸ್ಕೃತ ಶ್ಲೋಕಗಳಿಂದ ಕೂಡಿದ್ದು, ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿದೆ. ಸರಳ ಹಾಗೂ ಸಾಮಾನ್ಯರಿಗೂ ಅರ್ಥವಾಗುವ ಭಾಷೆಯಲ್ಲಿ ಕವಿ ಕಾವ್ಯವನ್ನು ನಿರೂಪಿಸಿದ್ದಾನೆ. ಅಷ್ಟಾದಶವರ್ಣನೆಗಳ ಪರಿಪಾಟ ಇಲ್ಲಿಯೂ ಮುಂದುವರೆದಿದೆ. ಕವಿ ಹರಿ ಬ್ರಹ್ಮಾದಿಗಳಾದ ಜಗತ್ಕಾರಣರನ್ನು ಸ್ತುತಿಸಿ 'ಶಿವಭಕ್ತಿ ಉದ್ಧರಿಸಿದ ದೇವರದಾಸಿಮಯ್ಯನ ಪುರಾಣಕ್ಕೆ' ದೇವರ ಅಪ್ಪಣೆ ಪಡೆದು ದೇವಾಂಗನು ಅವತರಿಸಿದ್ದನ್ನು ಹೇಳುತ್ತಿದ್ದೇನೆ. ಭೂಜನರು, ಸಜ್ಜನರು ಕೇಳಿ ಎಂದೇ ಕಾವ್ಯವನ್ನೂ ಪ್ರಾರಂಭಿಸುತ್ತಾನೆ. ಶಂಕರ, ಗಿರಿಜೆ, ಗಣಪತಿ, ಷಣ್ಮುಖ, ಬಸವಣ್ಣ, ಚೆನ್ನಬಸವಣ್ಣ, ಅಲ್ಲಮ, ಬಾಣ, ಮಲುಹಣ, ರಾಘವ, ಸೋಮ, ಕವಿಕಾಳಿದಾಸ, ಹರಿಹರ, ಚಾಮರಸ, ಭವಭೂತಿ, ಮೊದಲಾದವರನ್ನು, ಅವರ ಮಹಿಮೆಯನ್ನು ಮೊದಲ ಸಂಧಿಯಲ್ಲಿ ಕವಿಯು ಕೊಂಡಾಡಿದ್ದಾನೆ. ಇದೆಲ್ಲದರ ನಂತರ ಕಾವ್ಯದ ಪ್ರಾಮುಖ್ಯತೆಯನ್ನು ವಿರೂಪಾಕ್ಷ ದೇಶಿಕನು ಹೇಳುತ್ತಾನೆ.

ಸತ್ತು ಹೋಗುವ ನರರ ಕೊಂಡಾ
ಡುತ್ತ ತಮ್ಮಯ ಹೊಟ್ಟೆಯನು ಹೊರೆ
ವುತ್ತಮಿಹ ದುಷ್ಕವಿಯ ಕೃತಿಯಂತಲ್ಲವೀ ಕಾವ್ಯ।
ಚಿತ್ತ ಜಾರಿಗೆ ವಸ್ತ್ರವನು ನೆ
ಯ್ದಿತ್ತು ತವನಿಧಿಯ ಪಡೆದು ಜಿನಮತ
ಮತ್ತವನು ಮುರಿದಂಥ ಮಹಿಮನ ಕೃತಿಯ ಪೇಳುವೆನು.(ಸಂಧಿ ೧, ಪ.೧೨)

ಎಂಬಲ್ಲಿ ಹರಿಹರನ ಕಾವ್ಯ ಧೋರಣೆಯೇ ವ್ಯಕ್ತವಾದಂತೆ ಕಂಡು ಬರುತ್ತದೆ. ವಿರೂಪಾಕ್ಷ ದೇಶಿಕನು ಈ ಹಿನ್ನೆಲೆಯಿಂದ ನೋಡಿದಾಗ ಹರಿಹರನ ಪರಂಪರೆಯನ್ನು ಅನುಸರಿಸಿದ ಕವಿ ಎನ್ನಬಹುದು.

"ಮನುಜರ ಮೇಲೆ ಸಾವವರ ಮೇಲೆ ಪದ್ಯಮಂ ಕನಿಷ್ಠರ ಮೇಲೆ
ತನಗಿಂದ್ರ ಚಂದ್ರ ರವಿಕರ್ಣ ದಧೀಚಿ ಬಲೀಂದ್ರನೆಂದು ತಾ
ನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ
ನೆನೆ ಪೊಗಳರ಼್ಸೆಮ್ಮ ಕಡು ಸೊಂಪಿನ ಪೆಂಪಿನ ಹಂಪೆಯೊಳನಂ"[೭]

ಎಂಬ ಪದ್ಯದಲ್ಲಿ ಹರಿಹರ ಮನುಜರ ಮೇಲೆ, ಸಾವವರ ಮೇಲೆ, ಕನಿಷ್ಠರ ಮೇಲೆ ಪದ್ಯ ಬರೆಯುವುದಿಲ್ಲವೆಂದು ಹೇಳುತ್ತಾನೆ ಇದನ್ನೆ ವಿರೂಪಾಕ್ಷ ದೇಶಿಕನೂ ಅನುಸರಿಸಿದಂತೆ ಕಾಣುತ್ತದೆ.

ಶರಣ ದೇವರ ದಾಸಿಮಯ್ಯನ
ಚರಿತೆ ಮೊದಲಿರಲೀತ ಪೇಳ್ವುದು

ಮರುಳತನವೆನ್ನದಿರಿ ಪೇಳುವೆವನವನ ವಂಶಿಕರು।
ಕರಮುಗಿವುತೀ ಕೃತಿಯು ಸಂಸ್ಕೃತ
ವಿರಲದವನು ಕರ್ನಾಟಕ ಭಾಷೆಯೊ
ಳೊರೆ ಎನಲು ಪೇಳಿದೆನು ಕೇಳ್ವದು ಸಕಲ ಸಜ್ಜನರು(ಸಂಧಿ೧/ಪದ್ಯ೧೩)

ಎಂದೆನುತ್ತಾ, ಚರಿತ್ರೆಯನ್ನು ಹೊಗಳುವಾಗ ಎನಗೆ ಕಂಡದನ್ನು ಹೇಳಿದ್ದೇನೆ ಮತ್ತೆ ಅನುಸಾರದಲ್ಲಿ ಕ್ರಮವಾಗಿ ಸೂಚಿಸಿದ್ದೇನೆ. ಸಜ್ಜನರು ಈ ತೊದಲು ನುಡಿಗಳನ್ನು ತಂದೆಯಂತೆ ಸ್ವೀಕರಿಸಬೇಕು ಎಂದಿದ್ದಾನೆ.

ಎಲ್ಲಕೃತಿಗಿದು ಮೇಲುಕೃತಿಯೆಂ
ದಿಲ್ಲಿ ಪೇಳ್ದೆನದ್ಯಾಕೆನಲ್ಕಾಂ
ಸೊಲ್ಲಿಸುವೆನಾಭರಣಕೆಲ್ಲಂ ವಸ್ತ್ರ ಮುಖ್ಯವೆನೆ।
ಸಲ್ಲಲಿತ ಸನ್ನೀಲೆಯುಂಟಾ
ಗಿಲ್ಲಿ ದಿಗ್ವಸ್ತ್ರಂಗೆ ವಸ್ತ್ರವ
ನಿಲ್ಲದಿ ಮತ್ತೊಲಿಸಿದನ ಕೃತಿಯ ಕಾರಣಾದಿ(ಸಂಧಿ೧/ಪದ್ಯ೧೬)

ಎಲ್ಲಾ ಕೃತಿಗಳಿಗಿಂತಲೂ ಇದು ಮೇಲುಕೃತಿಯೆಂದು ಹೇಳುತ್ತಾ, ಇದಕ್ಕೆ ಕಾರಣವನ್ನೂ ಹೇಳುತ್ತಾನೆ. ಆಭರಣಗಳೆಲ್ಲಕ್ಕಿಂತಲೂ ವಸ್ತ್ರವೇ ಅತ್ಯಂತ ಮುಖ್ಯವಾದುದು. ಅಂತಹದರಲ್ಲಿ ಸನ್ನೀತಿಗಾಗಿ ವಸ್ತ್ರವಿಲ್ಲದವಂಗೆ ದಿವ್ಯವಸ್ತ್ರವನ್ನು ನೀಡಿ ಒಲಿಸಿದವನ ಕೃತಿಯಾದ ಕಾರಣ ಮೇಲುಕೃತಿಯೆಂದಿದ್ದೇನೆ ಎನ್ನುತ್ತಾನೆ. ಇಲ್ಲಿ ವಸ್ತ್ರ ಸಂಸ್ಕೃತಿಯನ್ನು ಎತ್ತಿ ಹಿಡಿಯುತ್ತಾ ಅದರ ಪ್ರಾಧಾನ್ಯತೆಯನ್ನು ಹೇಳಿಕೊಂಡಿದ್ದಾನೆ ಮುಂದುವರೆದು ಕಾವ್ಯ ಎಂಬ ಅಂಗನೆಯ ದೇಹಕೆ ಹೊಸ ವಸ್ತ್ರಗಳಿಲ್ಲದಿರೆ ಸಂಭಾವ್ಯವಲ್ಲವೆಂದು ಸಜ್ಜನರು ನುಡಿಯ ಬೇಡಿರಿ ಭವ್ಯವಾದ ಸರ್ವ ಆಭರಣಕ್ಕೆಲ್ಲಕ್ಕೂ ಸೇವ್ಯವಸ್ತ್ರಾಲಂಕಾರವೇ ಸುಶಾವ್ಯವೆಂದು ಉಳಿದ ಅಲಂಕಾರದಿಂದ ಫಲವೇನು ಎಂದು ಹೇಳುತ್ತಾ ದೇವದಾನವನಿಂದ ಪಸರಿಸಿದ ವಸ್ತ್ರ ಅಥವಾ ಉಡುಗೆ ಸಂಸ್ಕೃತಿಯು ಬೆಳೆದು ಬಂದುದನ್ನು ಇಲ್ಲಿ ಹೇಳುತ್ತೇನೆ ಎಂದಿದ್ದಾನೆ. ಈ ಕೃತಿ ಪ್ರಾರಂಭವಾದದ್ದು ಎಲ್ಲಿಂದ ಎಂಬುದನ್ನು ಕೆಳಗಿನಂತೆ ಹೇಳುತ್ತಾನೆ.

ಈ ಕೃತಿಗೆ ಮೊದಲಾದುದೆನೆ ಘನ
ಭೇಕಕರ್ಕಟ ಕರಮಚ್ಛ್ಯಾ
ನೇಕ ಜಲಚರ ಮೃಗತರಂಗ ಜಲೋತ್ತರಣ ತೀರಾ।
ನೇಕಹಾಂಮೃತ ಶಂಕನೊರೆ ಬಹು

ಜೋಕೆಯಿಂ ಬೆಳದಿರ್ದವಿಧ್ರುಮ

ದಾಕೆವಾಳಿಕೆಯಿಂದೆ ಮೆರೆದುದು ಲವಣವಾರಿಧಿಯು(ಸಂಧಿ೧/ಪದ್ಯ೨೩)

ಅಂತಹ ಕಡಲ ಮಧ್ಯದಲ್ಲಿ ಮೆರೆದಿದ್ದ, ಹಿಮಾಚಲದ ಪೂರ್ವದಲ್ಲಿ ರಜತಗಿರಿಯಲ್ಲಿ ಆಸ್ಥಾನಮಂಟಪದ ಆಸನದ ಮೇಲೆ, ಅಂದರೆ ಕೈಲಾಸದಲ್ಲಿ ರತ್ನಸಿಂಹಾಸನದಲ್ಲಿ ಪಾರ್ವತಿ ಪರಮೇಶ್ವರರು ಆಸೀನರಾಗಿದ್ದರು. ಹರಿಬ್ರಹ್ಮಾದಿ, ದೇವತೆಗಳು, ಗಣರು, ಗರುಡ, ಗಂಧರ್ವರು ಎಲ್ಲರೂ ನೆರೆದಿದ್ದರು. ಆಸ್ಥಾನಕ್ಕೆ ಆಗಮಿಸಿದ ನಾರದನು ನಂದೀಶನಿಗೆ ವಂದಿಸಿ ಮಹದೇವನ ಬಳಿ ಬಂದನು.

ಇಂಥಾ ಸಂದರ್ಭದಲ್ಲಿ ಬಂದ ನಾರದನು ದೇವನಲ್ಲಿ ಕುಶಲೋಪರಿಯನ್ನು ವಿಚಾರಿಸಿ ಭೂ ಲೋಕದಲ್ಲಿನ ಅರಾಜಕತೆಯನ್ನು ಸಾರಿದನು. 'ನಿನಗಚಲ ಭಕ್ತಿಯನು ಕೊಟ್ಟಿಂ ಸಕಲ ಲೋಕಗಳು। ಅನುಮತಿಸುತಂ ತಿರುಗುತಿಹನೀಂ ಮನುಜರಾಚರಿಸುತಿಹ ಧರ್ಮದ ಘನ ಸೂಸಲ ನೀನು ಕಂಡದ ಪೇಳು ನಮಗೆಂದು' ಎಂದು ಶಿವನೆನಲು ನಾರದನು ಭೂಲೋಕದ ಮನುಜರ ಹಲವು ಕೃತ್ಯಗಳನ್ನು ವರ್ಣಿಸಲು ಪ್ರಾರಂಭಿಸಿದನು.

ಕೇಳು ಇಂದೂಧರ ಭೂಲೋಕದಲ್ಲಿ
ಕೊಡುವ ಹಸ್ತಗಳಿಲ್ಲ ಸತ್ಯವ
ನುಡಿವ ನಾಲಗೆಯಿಲ್ಲ ಸುಜನರ
ಬಿಡದೆ ನೋಡುವ ಕಂಗಳಿಲ್ಲ ತೀರ್ಥಯಾತ್ರಕ್ಕೆ
ನಡೆವ ಪಾದಗಳಿಲ್ಲ ದೃಢದಿಂ
ಮೃಡಗೆ ಬಾಗುವ ಜಗಳಿಲ್ಲೆನೆ
ಪಡಪಡಾ ಕಲಿಯುವ ನರರೊಳಗೇನನು ಸುರುವೆನು.(ಸಂಧಿ೧/ಪದ್ಯ೪೦)

ಎಂದು ವರ್ಣಿಸಲು ಎತ್ತನೋಡಲು ಪಾಪಗಳೆತ್ತನೋಡಲು ಮುನಿಸು ತಾಪಗಳೆತ್ತ ನೋಡಲು ದುರ್ವಾಸನೆಯ ಮೊತ್ತ ಬಲ್ಲವ, ಸೊಲ್ಲವರು, ಹೊಲ್ಲರು, ಕಲಿಯುಗದ ದುರ್ನಡತೆಗಂಜುತ ರಾಕ್ಷಸರೂ ರಾಜಿಯಾಗುತ್ತಿದ್ದಾರೆ. ಆ ಎಲ್ಲವನ್ನೂ ದಾಟಿಬಂದ ನಾನೇ ಭಾಗ್ಯವಂತ ಎಂದು ಕಂಡುದನೆಲ್ಲವನ್ನೂ ಭಿನ್ನೈಸಲು, ಶಿವನು ನಾರದನನ್ನು ಬೀಳ್ಕೊಟ್ಟು ಅಲ್ಲೇ ಇದ್ದ ದೇವಗಣನನ್ನು ಕರೆದು "ದೇವ ನೀನು ಇಳೆಯೊಳಗೆ ಜನಿಸು, ಇದಕ್ಕೆ ಕಾರಣ ಭೂಮಿಯ ನರರ ಜೀವನವನ್ನು ನೀನು ಕೇಳಿದೆ. ಅಲ್ಲಿ ಸಾವಧಾನದಿ ಹೋಗಿ ನಿನ್ನೊಳಗಿನ ವಿದ್ಯಾನುಭವದಿಂದ 'ವೀರಶೈವ' ಆಚಾರ ಮಾರ್ಗವನ್ನು ಧರಣಿಯೊಳಗೆ ಉದ್ಭವಿಸಿ ಬಾ ಎಂದು ಕಳುಹಲು, ದೇವಗಣನು ದೇವ ನಾನು ಯಾವ ದೇಶದ? ಯಾವ ಗ್ರಾಮದಲ್ಲಿ? ಯಾವ ಬಸುರಿನಲ್ಲಿ ಉದಯಿಸಬೇಕೆಂದು

ಕೇಳಲು, ಮಹಾದೇವನು ನಗುತ್ತ ದೇವಗಣನೇ ಕೇಳು–'ಶಾವಳಿಯೋಳತ್ಯಧಿ ಕಮೆನಿಸುವ ಶ್ರೀವೀರಾಜಿತಮಪ್ಪ ಕನ್ನಡ ದೇಶದಲ್ಲಿ' ಎಂದು ಉತ್ತರವಿತ್ತನು. ಸಕಲ ಸಂಪತ್ತುಗಳಿಂದ ಕೂಡಿದ, ಧರ್ಮ, ಕರುಣೆಗೆ ಉತ್ತಮವಾದ ಮುದನೂರು ಪಟ್ಟಣದಲ್ಲಿ ರಾಮನಾಥನ ಗರ್ಭದಲ್ಲಿ ಜನಿಸು ಎನ್ನಲು ದೇವಗಣನು ಬೀಳ್ಕೊಂಡನು. ಕೃತಿಯ ಎರಡನೇ ಸಂಧಿಯಲ್ಲಿ ಮುದನೂರನ್ನು ಸುರಗಿರಿ ಎಂದು ಬಣ್ಣಿಸಲಾಗಿದೆ.

ಸುರಗಿರಿಯ ದಕ್ಷಿಣದ ಭಾಗದೊ
ಳುರೆ ಮೇಲಿನ ಕರ್ನಾಟದೇಶದ
ಪರಿಯ ಪೇಳ್ವದಸಾಧ್ಯ ನಾಂ ಬಲ್ಲನಿತ ಪೇಳುವೆನು।
ಕರೆ ತೊರೆ ಮಹಾಪಾಪಿಕೂಪ ನಿ
ಕರ ಮಹಾವನ ಸುರಸಿ ಶಿವ ಮಂ
ದಿರ ನಿಚಯವೆಸದಿರ್ದವಾ ಕರ್ನಾಟಕ ದೇಶದೊಳು. (ಸಂಧಿ೨/ಪದ್ಯ೨)

ಎಂದು ಮುದನೂರಿನ ಚಿತ್ರಣವನ್ನು ವಿರೂಪಾಕ್ಷ ದೇಶಿಕನು ನೀಡುತ್ತಾನೆ. ಎಲ್ಲಿ ನೋಡಲು ಅರವಟಿಗೆ ಅನ್ನ ಛತ್ರಗಳು, ಬನ ಪುಂಡೇಕ್ಷು ತೋಟಗಳು, ಗರ್ದೆಗಳು, ಪರ್ಣ ಮೊಟಗ, ಹೂದೋಟಗಳಿಂದ ಕೂಡಿದೆ. ಅಷ್ಟು ಸಮೃದ್ದವಾದ ನಾಡು ಮುದನೂರು. ನೀತಿ ನಿಪುಣತೆಗೆ ನ್ಯಾಯ ಸಮತತೆಗೆ, ವಿನಯಕ್ಕೆ, ಸಕಲ ಸೌಭಾಗ್ಯ, ಕೀರ್ತಿ, ಪ್ರೀತಿ, ಜ್ಞಾನ ಮೊದಲಾದವುಗಳಿಗೆ ಹೆಸರಾಗಿದ್ದಂತಹ ಕರ್ನಾಟಕ ದೇಶದ ಮುದನೂರು ರಾಮೇಶ್ವರನ ಗರ್ಭದಲ್ಲಿ ದೇವಗಣನು ದೇವಾಜ್ಞೆಯಂತೆ ಉದಿಸಿದನು. ದಾನಿಗಳು, ಧರ್ಮಿಗಳು, ಬಹು ಸನ್ಮಾನಿಗಳು, ಎಲ್ಲರೂ ಸೇರಿ ಮುದನೂರು ರಾಮೇಶನನ್ನು ಸ್ತುತಿಸುತಿದ್ದರು. ಪಂಚವಾದ್ಯಗಳು ನುಡಿಯುತಿರಲು, ನಿರ್ವಂಚಕರು ಜಯ ಜಯವೆಂದು ಹರಸುತಿರಲು, ಸಂಗೀತ ಮೊಳಗುತಿರಲು, ಸನ್ಯಾಸಿಗಳು ಧ್ಯಾನಿಸುತ್ತಿರಲು ಇವರ ಮಧ್ಯೆ ಶಂಕರನು ಮೆರೆಯುತ್ತಿದ್ದನು. ಎಲ್ಲರೂ ನೋಡ ನೋಡುತ್ತಲೇ 'ಲಿಂಗದ ಮಧ್ಯ'ದಲ್ಲಿ ಭವ್ಯ ಕಾಂತಿಯೊಂದು ಮೂಡಲು,

ಕರದ ಲಿಂಗದಿ ಮನವು ಮಂತ್ರೋ
ಚ್ಚರಣೆ ಮುಖದೊಳು ಭಾಳದೊಳು
ನೆರೆ ಮಿಸುಪ ಭಸ್ಮತ್ರಿಪುಂಡ್ರ ಗುರುಪರಸೇವೆ ಕಾಯದೊಳು
ಮೆರೆಯೆ ಶ್ರೀ ಮುದನೂರು ರಾಮೇಶ್ವ
ರನ ಗರ್ಭದೊಳುದಿಸಿದನು ಶಿವ
ಶರಣರಣರಘೆಯೆನೆ ದೇವಗಣವರ ದೇವನಾಜ್ಞೆಯೊಳು(ಸಂಧಿ೨/ಪದ್ಯ೨೫)

ಆಗ ದೇವ ದುಂದುಭಿಗಳು ಮೊಳಗಲು ಹೂವಿನ ವೃಷ್ಟಿ ಸೂಸಲು ಭಯ ಭಕ್ತಿಯ ಸಾಷ್ಟಾಂಗವನ್ನು ಎರಗಲು ಭಕ್ತರ ಜೀವವ ಪೊರೆ ಎನುತ್ತಾ ಶಿವನು,

ರಾಮೇಶ್ವರನು ತಲೆ
ದೂಗಿ ಹರುಷದಿ ಜಂಗಮಾಕೃತಿ
ಯಾಗಿ ಬರಸೆಳದಪ್ಪಿ ಕೊಂಡಾಡುತ್ತ ಮುಂಡಾಡಿ ।
ಬೇಗದಿಂ ಪರಮತವ ಖಂಡಿಸಿ
ರಾಗದಿಂ ಶಿವಮತವ ಮುಂಡಿಸು
ಹಾಗ ನೀಂ ಮೊಡೆಸುತ ಪೊಳಳುತ ಭೋಧಮಿತ್ತೆಂದ (ಸಂಧಿ೨/ಪ೨೯)

ಎಂದು ಹರಸುತ್ತ ಹರನೇ ಜಂಗಮ ರೂಪಿಂದ ಬಂದು ದೇವರದಾಸಿಮಯ್ಯನೆಂಬ ಹೆಸರನ್ನು ಕರೆದು ಶಿವತತ್ವವನ್ನು ಶಿವ ಮತವನ್ನು ಮಂಡಿಸು ಎಂದು ಹೇಳಿದನು. ಶಿವನ ಎಲ್ಲ ಹಿತನುಡಿ ಗಳೊಂದಿಗೆ ವಸ್ತ್ರ ಕಾಯಕವನ್ನು ಮಾಡಿ ಬಂದ ಕ್ರಯದಿಂದ ಧಾನ್ಯದಿಂದ ದಾಸೋಹಮಾಡು ಪರಧನವನ್ನು ಪಡೆಯದಿರು. ಹುಸಿಯನ್ನು ನುಡಿಯದಿರು, ದುರ್ಮಾರ್ಗದತ್ತ ನಡೆಯದಿರು. ಲೋಕಾಪವಾದವನ್ನು ಪಡೆಯದಿರು, ಪರಸತಿಯ ನೋಡದಿರು. ಶಿವಭಕ್ತ ನೀತಿಯ ತೊರೆಯದಿರು ಶಿವ ಮಂತ್ರವ ಮರೆಯದಿರು ಎಂದು ಆಶೀರ್ವದಿಸಿದನು. ಈ ಮಾತನ್ನು ಕೇಳಿ ದೇವರದಾಸಿಮಯ್ಯ ಮನಸ್ಸಿನಲ್ಲಿಯೇ ಯೋಚಿಸುತ್ತ ಇರುವಾಗ ಶಂಕರನು ಲಿಂಗದಲ್ಲಿ ಲೀನವಾದನು. ಇತ್ತ ದಾಸಿಮಯ್ಯನು ಯುಕ್ತಿಯಲ್ಲಿ ಬೆಸಸಿ ಕೊಂಡದನ್ನು ನಡೆಸುತ ಯುಕ್ತಿವಂತಳನ್ನು ವಿವಾಹವಾಗಿ ಭಕ್ತಿಯನ್ನು ನೆರವೇರಿಸುವೆನೆನುತ್ತ ದೇಶಗಳನ್ನು ತಿರುಗುತ್ತಾ, ಎಲ್ಲಿಯೂ ಅಂತಹ ಹೆಣ್ಣು ದೊರೆಯದೆ ಮುದನೂರಿಗೆ ಹಿಂದಿರುಗುತ್ತಾನೆ.

ಮುದನೂರಿಗೆ ಬರುತ್ತಾ ಅಲ್ಲಿ ಮನೆ–ಮನೆಹೊಕ್ಕು ನೋಡುತಲಾಗಿ 'ಉಮ್ಮಹದಿ ಜಲ ಕಾಷ್ಠಮಿಲ್ಲದೆ ಗಮ್ಮನೀ ಮಳಲಕ್ಕಿಯನು ಪಾಕಂ ಮಿಗಿಲು ಮಾಳ್ಪದನು ಬಲ್ಲಡೆ ಕೊಡುವದಿವಳನೆನೆ ಧರೆಯಲ್ಲಿಯೇ ಇಲ್ಲ' ಎಂದುಕೊಳ್ಳುವಾಗ ದುಗ್ಗಲದೇವಿ ದಾಸನ ಕೈಯಲ್ಲಿನ ಮಳಲಕ್ಕಿಯನ್ನು ಒಂದು ಕಬ್ಬನ್ನು ಪಡೆದು ನೋಡಿ ಇದರಿಂದಾಗದು ಕಬ್ಬಿನ ಹೊರೆ ಬೇಕು ಎಂದು ತರಿಸಿಕೊಂಡಳು. ಅದರ ಹಿಪ್ಪೆಯನ್ನು ಹಿಂಡಿ ಬಿಸಿಲಿಗೆ ಒಣಗಿಸಿ ಕಿಚ್ಚನ್ನು ಮಾಡಿ ಕಬ್ಬಿನ ಹಾಲನ್ನು ಕಾಯಲು ಇಟ್ಟು, ಮಳಲಕ್ಕಿ ಹಾಕಿ ಬೇಯಿಸಿದಳು. ಹಾಲಿನ ಕೆಳಗಡೆ ಮರಳು ಕೂಡಲು ಮೇಲೆ ಮಧುರವಾದ ಪಾಯಸ ತಯಾರಾಯಿತು. ಹೀಗೆ ಮಾಡಿದನ್ನು ಇಷ್ಟ ಪುರುಷನಿಗೆ ಬಡಿಸಿದಳು. ದುಗ್ಗಳೆಯ ತಂದೆ–ತಾಯಿಯರಾದ ಸಂಕಣ್ಣ–ಶಿವದೇವಿಯರ ಒಪ್ಪಿಗೆ ಪಡೆದು ಅವರಿಬ್ಬರು ವಿವಾಹವಾಗಿ ಗುರು–ಲಿಂಗಜಂಗಮರ ಸೇವೆಯನ್ನು ಮಾಡುತ್ತ ಕೀರ್ತಿವಂತರಾಗಿದ್ದರು. ದಾಂಪತ್ಯ

ಜೀವನವು ಸುಗಮವಾಗಿ ಸಾಗುತಿರಲು ಅವರಿಗೆ ಒಂದು ಕೊರಗು ಕಾಡುತ್ತಿತ್ತು ಮಕ್ಕಳಿಲ್ಲದ ಕೊರಗು

ಮದುವೆಯಾದುದು ಮೊದಲು ನೋಡ
ಲ್ಕು ದಿಸಲಿಲ್ಲವು ಪುತ್ರರದರಿಂ–
ದುರುಸಿಲೇ ಬೆಂಕಾತುರಂಯೆನಲರಿದು ನಸುನಗುತಾ ।
ಪದುಮಮುಖಿ ಕೇಳ್ ಕ್ಷೀರಸಾಗರ
ಮಿದಿರೊಳಿಗೆ ನೀರಡಿಸಿ ಬಳಲ್ವರೆ
ಮೃದುಕರದೊಳೀ ಲಿಂಗಮಿರೆ ತನಯಂಗೆ ಚಿಂತಿಪರೆ (ಸಂಧಿ೩/ಪದ್ಯ೧೬)

ಎಂದು ದಾಸಿಮಯ್ಯನು ದೇವರಾಜ ಮಧುಮಾನಿನಿಯರ ಕಥೆಯನ್ನು ಹೇಳುತ್ತಾನೆ. ದೇವರಾಜ ಮಧುಮಾನಿಯರು ಹಲವು ವರ್ಷ ಮಕ್ಕಳಿಲ್ಲದೆ ಪರಿತಪಿಸುತ್ತಿದ್ದರು. ಅದಕ್ಕಾಗಿ ಪರಶಿವನನ್ನು ಕುರಿತು ತಪಸ್ಸು ಮಾಡಿದ್ದರು. ಪ್ರತ್ಯಕ್ಷನಾದ ಶಿವನು ಹದಿನಾರು ವರ್ಷದ ಸರಸಮತಿಯಾದ ಮಗನು ಬೇಕೋ? ಶತಾಯುಷ್ಯದ ದುರ್ಮತಿ ಪುತ್ರ ಬೇಕೋ? ಎಂದು ಕೇಳಲು ಆ ದಂಪತಿಗಳು ಸಮತಿಯಾದ ಪುತ್ರನನ್ನು ಬೇಡಿದರು. ಮಗುವಾಯಿತು ಅದಕ್ಕೆ ಮಲಯರಾಜ ಎಂದು ಹೆಸರು ಇಟ್ಟರು. ಮಗನ ಅಲ್ಪಾಯುಷದ ಅಗಲಿಕೆಯ ದುಃಖ ಒಂದೆಡೆಯಾದರೆ, ಪ್ರಕರವಾಗಿ ಬೆಳೆಯುವ ಆತನ ಸನ್ನಡತೆ ಒಂದೆಡೆ ದೇವರಾಜನನ್ನು ಬಾಧಿಸುತ್ತಿತ್ತು. ಇದು ಮಲಯರಾಜನಿಗೆ ತಿಳಿದು ಶಿವನನ್ನು ಬೇಡಲು ಶಿವನು ಆತನನ್ನು ಆತನ ತಂದೆ ತಾಯಿಯನ್ನೊಳಗೊಂಡು, ಆತನ  ಬಂಧುಗಳನ್ನೂ ಕೈಲಾಸಕ್ಕೊಯ್ದನು.

ಈ ಕತೆಯನ್ನು ಕೇಳಿ ದುಗ್ಗಳೆಯು ಸಮಾಧಾನಿಸಿಕೊಂಡಳು. ಶಿವನ ಪ್ರಾರ್ಥನೆಯಲ್ಲಿ ದಂಪತಿಗಳು ತೊಡಗಿದರು. ಶಿವನ ಅನುಗ್ರಹದಿಂದ ಮಗುವನ್ನು ಪಡೆಯುತ್ತಾರೆ. ಆ ರಾಮಲಿಂಗನನೇ ಜಂಗಮಾಕಾರವಾಗಿ ಬಂದು ಮಗುವಿಗೆ ಲಿಂಗಧಾರಣೆ ಮಾಡಿ ಬಯಲಾದನು. ಮಗುವಿಗೆ ರಾಮಲಿಂಗವೆಂಬ ಹೆಸರು ಬಂತು. ಮಗು ಬೆಳೆಯುತ್ತಾ ದೈವ ಭಕ್ತಿಯನ್ನು ಮನೆಯಿಂದಲೇ ಪಡೆದು ಬೆಳೆಯಿತು. ಗುರು ಚರಮೂರ್ತಿಗಳ ಸೇವೆ ಮೊದಲಾದವುಗಳನ್ನು ಮಾಡುತ್ತಾ ತಂದೆ ತಾಯಿಗೆ ತಕ್ಕ ಮಗನಾಗಿ ಬೆಳೆದನು.

ಇಂತಹ ಮಗನಂ ಸಲಹುತಂ ನಿ
ಶ್ಚಂತದಿಂ ಗುರುಲಿಂಗ ಜಂಗಮ
ಸಂತತಂ ಪೂಜಿಸುತ ತಕ್ಕೀಷವನು ಸಂತಿಸಹಿತ
ನಂತ ಭಕ್ತಿಯೊಳುಂಡು ತಾನೇ

ಕಾಂತದೊಡು ತತ್ವಾನುಭವವ ಬೆಂತಿಸುವ

ದಾಸಿಮಯ್ಯನಾ ಮುದನೂರೊಳಿರುತಿರ್ದಂ(ಸಂಧಿ೩/ಪದ್ಯ೫)

ಎಂದು ಮೂರನೇ ಸಂಧಿ ಸಮಾಪ್ತಿಯಾಗುತ್ತದೆ. ನಾಲ್ಕನೇ ಸಂಧಿಯಲ್ಲಿ ಪ್ರಧಾನವಾಗಿ ಕವಿ ವಿರೂಪಾಕ್ಷ ದೇಶಿಕನು ಶಂಕರನಿಗೆ ವಸ್ತ್ರವನ್ನು ನೀಡಿ, ತವನಿಧಿಯನ್ನು ಪಡೆದು ದಾಸೋಹ ಮಾಡಿದ ದಾಸಿಮಯ್ಯನ ಕಥೆಯನ್ನು ಹೇಳಿದ್ದಾನೆ. ಈ ದಂಪತಿಗಳು ವಸ್ತ್ರಕಾಯಕವನ್ನು ಮಾಡಿ ದಾಸೋಹ ನಿರತರಾದಾಗ ಹದಿನಾಲ್ಕು ವರ್ಷಗಳಿಂದ ಒಂದು ಚಿತ್ರವಿಚಿತ್ರವಾದ ವಸ್ತ್ರವೊಂದನ್ನು ದಾಸಿಮಯ್ಯನು ನೇಯ್ದನು.

ಪರಿಪರಿಯ ವರ್ಣವನು ಕೂಡಿಸಿ

ತರತರದ ಸಮಗರ್ಭಿತಚರಾ

ಚರದ ವಿಸ್ತಾರದ ಬಗೆಯ ಸೂಕ್ಷ್ಮದೊಳು ಪದಿನಾಲ್ಕು

ವರುಷನೆಯ್ದಂ ನೋಡಿದವರಿದ

ನೋರಿಯಬಾರದು ಬೆಲೆಯೆನುತ್ತಿಹ

ಹರೆ ಬರಿದು ಹಿಂದಿಂದುಮುಂದಿಲ್ಲೆನುತ ನುತಿಸುತಿರೆ(ಸಂಧಿ೪/ಪದ್ಯ)

ಇಂತಹ ದಿವ್ಯ ವಸ್ತ್ರವನ್ನು ಕೊಳ್ಳುವುದಕ್ಕೆ ಬೆಲೆಯೇ ಕಟ್ಟಲು ಸಾಧ್ಯವಿಲ್ಲ. ಅದನ್ನು ಹಿಡಿದು ಸಂತೆಗೆ ಹೋದನು. ಅಲ್ಲಿ ಅದನ್ನು ಮಾರಲು ಸಂತೆಯಲ್ಲಿ ತಿರುಗುತ್ತಿರುವಾಗ ಶಿವನೇ ಜಂಗಮಾಕಾರದಲ್ಲಿ ಬಂದು ಆತನನ್ನು ಹರಸಿ ಒಂದು ಮಾನ ಧಾನ್ಯ ಕೊಡುವೆ ಸತ್ಯವಾಗಿ ಹೇಳುವೆ ಇದನಾರುಕೊಳ್ಳುವುದಿಲ್ಲ. ಚಳಿ ನನ್ನನ್ನು ಭಾದಿಸುತ್ತಿದೆ. ಇದನ್ನು ನನಗೆ ಕೊಡು ಎಂದು ತೆಗೆದುಕೊಂಡು, ಆತನೆದುರಿಗೆ ಆ ಜಂಗಮ ಪಡೆದ ಬಟ್ಟೆಯನ್ನು ಹಲವು ತುಂಡುಗಳಾಗಿ ಹರಿದು ವಿಕಾರವಾಗಿ ಕುಣಿದು ಆ ತುಂಡುಗಳನ್ನು ಕಂಠ, ಭುಜ, ಜಡೆಗೆ, ಕಟ್ಟಿಕೊಂಡನು ಅಲ್ಲಿಂದ ಕುಣಿಯುತ್ತಾ ಬಂದು ದಾಸನ ಪತ್ನಿ ದುಗ್ಗಳೆಗೆ ನಿನ್ನಯ ಪತಿ ಹದಿನಾರು ವರುಷ ನೇಯ್ದ ವಸ್ತ್ರವನ್ನು ಒಂದು ಮಾನ ಭತ್ತಕ್ಕೆ ಕೊಟ್ಟಿದ್ದಾನೆಂದು ಚಾಡಿ ಹೇಳುತ್ತಾನೆ. ದುಗ್ಗಳೆ 'ನಿನ್ನಯ ಭಕ್ತರಿಗೆ ಸಂದಾಗ ಕುಲತಾಂ ಪಾವನಾಯತಲಾ' ಎಂದು ಹೇಳಿ, ಪತಿ ಮಾಡುವ ಸೇವೆಗೆ ಪತ್ನಿ ಬೇಡವೆಂದಡೆ ನರಕವಾಗುವುದು. ಗಂಡ ಮಾಡುವ ದಾನಗುಣವನ್ನು ಕೋಪದಿಂದ ನೋಡಿದರೆ ಚಂಡಿಯಂತಾಗುವುದಿಲ್ಲವೇ ಎಂದು ಹೇಳುತ್ತಾ.

ಗಂಡ ಮಾಡುವ ಭಕ್ತಿಗಂ ತಾಂ

ಗಂಡುಗೆಲವುತ ಪಲ್ದಿನುತಪ ಬಲ

ಭಂಡು ಮಾಡುತ ಬಿಡಿಸುತಂ ತನ್ನಯ ತವರ್ಮನೆಯ

ತಂಡ ತಂಡ (ದಿ) ಬಂದ ಬಳಗಕೆ
ಚಂಡಿಯಾಗದೆ ನೀಡಿ ಕೀರ್ತಿಯ
ಕೊಂಡಿರುವಳವಳ್ಗೆಲ್ಲಿಯದು ಸದ್ಗತಿಯು ಕೇಳಯ್ಯಾ(ಸಂಧಿ೪/ಪದ್ಯ೧೩)

ಎಂದು ಆ ಸನ್ಯಾಸಿಗೆ ಹೇಳುತ್ತಾಳೆ. ಮುಂದುವರೆದು ದುಗ್ಗಳೆಯು ಎಲ್ಲಾ ಗುಣದೊಳು ದಾನಗುಣವೆ ದೊಡ್ಡದು ಪೂರ್ವಪುಣ್ಯದ ದೊಡ್ಡತನದಿಂದ ದೊರೆಯುವುದನ್ನು ಸಹಿಸದೆ ಹೋದರೆ ಹೇಗೆ ಎಂದು ಬಲಿ ಚಕ್ರವರ್ತಿ ಹಾಗೂ ಶುಕ್ರನ ಕಥೆಯನ್ನು ಹೇಳುತ್ತಾಳೆ.

ಬಲಿಯು ಮಾಡುವ ದಾನಕಂ ಕವಿ
ಯಲಘುಮಲೆಯಡ್ಡಾಗಲಾತನ
ಸುಲಲಿತಾಕ್ಷಿಯು ಪೋಗಲವಗಶುಕ್ರನೆಂಬಾಖ್ಯಾ।
ಫಲಿಸಿತ್ತದರಿಂದಿನಿಯ ಮಾಡುವ
ಸತಿಸುಭಕ್ತಿಗೆ ಬೇಡೆನಲ್ಕಾ
ಲಲನೆಗೇನಹುದೆಂಬುದಂ ನಾನರಿಯೆ ಕೇಳ್ಮತ್ತೆ(ಸಂಧಿ೪/ಪದ್ಯ೧೭)

ಎನ್ನುತ್ತಾ ಜಂಗಮದ ಪ್ರಾಧಾನ್ಯತೆಯನ್ನು ಹೇಳಿ, ದುಗ್ಗಳೆಯು ನಯ ಭಯದಿಂದ ನಡೆದುಕೊಳ್ಳುವಾಗ ದೇವರದಾಸಿಮಯ್ಯನೂ ಅದನ್ನು ಒಪ್ಪಲು, ಅವರನ್ನು ಮೆಚ್ಚಿ ತವನಿಧಿಯನ್ನು ಕೊಟ್ಟು ಶಂಕರನು ಪರಮಾನಂದದಿಂದ ಕೈಲಾಸಕ್ಕೆ ಹೋದನು. ಇತ್ತ ದಂಪತಿಗಳು ಉತ್ತಮೋತ್ತಮ ವಸ್ತ್ರಗಳನ್ನು ನೆಯ್ದು ಶಿವನನ್ನು ಮೆಚ್ಚಿಸಿ ತವನಿಧಿಯನ್ನು ಪಡೆದರು ಎಂಬ ಕೀರ್ತಿ ಜಗತ್ತಿಗೆ ತಿಳಿಯಲು ಅದನ್ನು ನೋಡಲು ಶಿವಗಣಗಳು ಬರುತ್ತಿದ್ದರು. ಮುದನೂರಿಗೆ ಬರುತ್ತಿದ್ದ ಜನರನ್ನು ಸಂಬಾಳಿಸಿ ಇದು ನಮ್ಮ ಭಾಗ್ಯವೇ ಸರಿ ಎಂದು ಬಂದವರನ್ನು ಉಪಚರಿಸಿ ಶಿವಮಂತ್ರವ ವಾಚಿಸುತ ದಾಸೋಹ ಮಾಡುತ್ತಾ ಇದ್ದರು. ಈ ಸಮಯದಲ್ಲಿ ಕೇರಳದೇಶದ ಅಮರ ನೀತಿಗಳನ್ನು ನೆನೆಯುತ್ತಾ ಅಮರ ನೀತಿಗಳು ಹಿಂದೆ ಶಿವನಿಗೆ ವಸ್ತ್ರ ನೇಯ್ದು ಕೊಟ್ಟು ಕೈಲಾಸಕ್ಕೆ ಹೋದರು. ಅಂತೆಯೇ ದಾಸಿಮಯ್ಯ ತವನಿಧಿಯನ್ನು ಪಡೆದ ಎಂದು ಜನರು ಕೊಂಡಾಡಿದರು. ಹೀಗಿರುವಾಗ ಒಂದು ದಿನ ಸಂಸಾರ ಶ್ರೇಷ್ಠವೋ ಸನ್ಯಾಸ ಶ್ರೇಷ್ಠವೋ ಎಂದು ಚರಮೂರ್ತಿಗಳು ಮುದನೂರ ದೇವರದಾಸಿಮಯ್ಯನ ಹತ್ತಿರ ಬಂದು

ಎಲೆ ಶರಣ ನಮ್ಮೀರ್ವರೊಳು ಬಲು
ಕಲಹಬಂದುದದೆಂತೆನಲ್ಕೇ
ಳ್ ಲಲನೆಯಂ ಪರಿಣಯನಮತ್ತಿರುವುದದು ಸುಖವೋ।
ಸತಿ ನಿರಾಸತೆಯಿಂದ ದೇಶಂ

ಗಳ್ ಸಂಚರಿಸುವುದು ಸುಖವೋ ನ್ಯಾಯದ
ನೆಲೆಯನರಿಯಲ್ಬೆಕೆನುತ ನಿನ್ನಗೈದಿದೆವು.(ಸಂಧಿ೫/ಪದ್ಯ೩)

ಎಂದು ಹೇಳಿ, ನೀನು ಇದರ ವೃತ್ತಾಂತವನ್ನು ಹೇಳಬೇಕು. ಮಾನವಿಲ್ಲದೆ ಎಲ್ಲದನ್ನು ನಿಜನುಡಿಯ ಬೇಕು ಎಂದು ಚರಮೂರ್ತಿಗಳು ಕೇಳಲು, ಮಾನವತಿಯಾದ, ಸದ್ಗುಣ ಸಂಪನ್ನೆಯಾದ, ಪತಿಯ ಸೇವೆಯಲ್ಲಿ ಸ್ವಲ್ಪವೂ ಊನವಾಗದಂತೆ ನೋಡಿಕೊಳ್ಳುವ ಸತಿ ಇರಲು ಸಂಸಾರವೇ ಸುಖವೆಂದನು ದಾಸಿಮಯ್ಯ. ಮುಂದುವರೆದು ಗಂಡನಾಜ್ಞೆಯನ್ನು ಮೀರಿ ಕಾಮೋದ್ದಂಡತೆಯೊಳು ನಡೆದುಕೊಳ್ಳುವ ಸತಿಯಾದರೆ ಸಂಸಾರಕ್ಕಿಂತ ವೈರಾಗ್ಯವೇ ಲೇಸು ಎಂದನು. ಅತ್ತೆ ಮಾವನ ಸೇವೆಯನ್ನು ಮಾಡುತ, ತನ್ನಯ ಬಂಧುಬಳಗಕ್ಕೆ ರತ್ನವಾಗಿ, ಪತಿಗೆ ಹಿತವಾಗಿ ನಡೆದುಕೊಳ್ಳುವ ಚಿತ್ತವಲ್ಲಬೆಯಾಗಿ ಕಲ್ಯಾಣ ಕಾರ್ಯಗಳಲ್ಲಿ ಮುತ್ತೈದೆಯಾಗಿ ಮೆರೆವ ಸತಿ ಉತ್ತಮಳು ಗಂಡನ ಮನೆಯನ್ನೇ ದೈವವೆಂದು ಗಂಡನೇ ಕುಲದೈವವೆಂದು, ಗಂಡನೇ ಸರ್ವವೆನ್ನುವಂತಹ ಸತಿಯು ಸಂಸಾರದ ಸುಖಕ್ಕೆ ದಾರಿಯಾಗುವಳು. ಇದಕ್ಕೆ ವಿರುದ್ದವಾಗಿ ನಡೆದು ಕೊಳ್ಳುತ್ತಾ ತನ್ನ ಪುರುಷನನ್ನು ವಂಚಿಸಿ ಪರರಲ್ಲಿ ಹಿತಾಸಕ್ತಿ ಇಡುವ ಸತಿಯಾದರೆ, ವೈರಾಗ್ಯ ಲೇಸು ಎಂದೆನುತ ದಾಸಿಮಯ್ಯನು ಪತಿವ್ರತಾಂಗನೆಯರ ಕತೆಯನ್ನು ಹೇಳುತ್ತೇನೆ ಕೇಳಿ ಎಂದು ಹೇಳತೊಡಗಿದನು. ಪತಿಯ ಸೇವೆಯನ್ನು ಮಾಡಿ ಪತಿಯ ಪ್ರೀತಿ ಪಡೆದು ಸದ್ಗತಿಯನ್ನು ಪಡೆದ ಗೌರಿಯ ಕಥೆಯನ್ನೂ, ಪತಿಯು ತಪಸ್ಸಿನಿಂದ ಬರುವವರೆಗೂ ಇತ್ತ ಕೈಕಸೆಯು ತಪೋನಿರತಳಾಗಿರುವುದು ಕಂಡು ವರವ ಬೇಡು ಎನಲು, ಪತಿಯ ಪಾದಕ್ಕೆರಗಿದ ಕೈಕಸೆ ಸುತನನ್ನು ಬೇಡಿದ ಕಥೆಯನ್ನು, ಪರಾಕ್ರಮಿಯಾದ ರಾವಣ ಸೀತೆಯನ್ನು ಅಪಹರಿಸಿ ರಾಮ ಬಂದು ಬಿಡುಗಡೆಗೊಳಿಸಿಕೊಂಡು ಸೀತಾ ಅಗ್ನಿಪರೀಕ್ಷೆಯ ಕಥೆಯನ್ನು ಹೇಳಿ ಇಂತಹ ಸತಿಯಿರಲು ವನವಾಸದಲ್ಲಿಯೂ ಸಂಸಾರವೇ ಸುಖ ಎಂದು ದಾಸಿಮಯ್ಯನು ಹೇಳಿದನು.

ಸಂಧಿ ಆರರಲ್ಲಿ ಈ ಕಥೆಯೇ ಮುಂದುವರೆಯುವುದು. ಸುಗುಣ ಸತಿಯರ ಕಥೆಯನ್ನು ಹೇಳಿದ ದಾಸಿಮಯ್ಯನು ಇಲ್ಲಿ ದುರ್ಗುಣದ ನಾರಿಯರ ಕಥೆಯನ್ನು ಹೇಳುವನು. ಪಾರಿಯಾತ್ರಕನೆಂಬ ರಾಜ ಆತನ ಪತ್ನಿ ಜೋಗಿಯನ್ನು ಕೂಡಿ ಬಾಳುವಾಗ ಆಕೆಯ ಕೃತ್ರಿಮವನ್ನು ತಿಳಿಯದೆ ಪಟ್ಟದ ರಾಣಿ ಹಿರಿಸತಿಯನ್ನು ಕೊಂದು, ಆಕೆಯೊಂದಿಗೆ ಸುಖದಿಂದಿದ್ದನು. ಒಂದುದಿನ ತನ್ನ ಚಿಕ್ಕ ಸತಿ ಜೋಗಿಯೊಂದಿಗಿರುವುದನ್ನು ಕಂಡು ದುಃಖ ತಪ್ತನಾಗಿ ತಪದಿಂದಲೂ ಮುಕ್ತನಾಗದೆ ಕೆಟ್ಟಂತಹ ರಾಜನ ಕತೆಯನ್ನು ಹೇಳುತ್ತಾನೆ. ಬ್ರಾಹ್ಮಣನೊಬ್ಬ ತನ್ನ ಮಾತನ್ನು ಕೇಳದ ಹೆಂಡತಿಯನ್ನು ಬದಲಿಸಲಾಗದೆ ಚಿಂತೆಯಲ್ಲಿದ್ದ ವೇದಾಧ್ಯಾಯಿಯಾದ ಒಬ್ಬ ಬ್ರಾಹ್ಮಣನು

ಅವನು ಮುಖವನ್ನು ನೋಡಿ ಎಲ್ಲವನ್ನು ತಿಳಿಯುತ್ತಾ 'ನಿನ್ನ ಇಚ್ಛೆಗೆ ವಿರುದ್ಧವಾದದನ್ನೇ ಆಕೆಗೆ ಹೇಳು' ಎಂದು ಹೇಳುತ್ತಾನೆ ಅಂತೆಯೇ ಬ್ರಾಹ್ಮಣನು ತಂದೆಯ ಶ್ರಾದ್ಧದ ವಿಚಾರವಾಗಿ ವಿರೋಧಗಳನ್ನು ತಿಳಿಸಲು ಹೆಂಡತಿಯು ಸಾಕಾರಗೊಳಿಸುತ್ತಾ ಕೊನೆಗೆ ಪಿಂಡವನ್ನು ಗೋವಿನ ಮುಂದೆ ಹಾಕು ಎನಲು ಆಕೆ ತಿಪ್ಪೆಗೆಸೆದ ಚಂಡಿಯ ಕಥೆಯನ್ನು ಹೇಳುತ್ತಾನೆ. ಅಂತೆಯೇ ರಾಜನೊಬ್ಬನ ಇಬ್ಬರು ಹೆಂಡತಿಯರು ಪರಸ್ಪರ ಮತ್ಸರಿಸುತ್ತಿದ್ದ ಕತೆಯನ್ನೂ, ಶರಣ ಘಟ್ಟಿವಾಳಯ್ಯರ ಚರಿತೆ ಮತ್ತು ಅಲ್ಲಮನು ಮಾಯದೇವಿಯ ಮೋಹಕ್ಕೆ ಒಳಗಾಗದ ಕತೆಗಳನ್ನು ಆ ಚರಮೂರ್ತಿಗಳಿಗೆ ತಿಳಿಸುತ್ತಾನೆ.

ಇದೆಲ್ಲವೂ ಆದ ನಂತರ ದಾಸಿಮಯ್ಯನು ತನ್ನ ಹೆಂಡತಿಯನ್ನು ಕರೆಯುತ್ತಾನೆ. ಆಕೆ ಎತ್ತಿದ ಒನಕೆಯನ್ನು ಹಾಗೆ ಬಿಟ್ಟು ಬರುತ್ತಾಳೆ, ದೀಪವನ್ನು ತಾ ಎನಲು ತಂದು ಕೊಡುತ್ತಾಳೆ, ಕೈಗೆಟಕುವ ಅಳತೆಯಲ್ಲಿದ್ದ ಕುಂಚಿಗೆಯನ್ನು ಕೇಳಲು ಆಕೆ ತಂದಿಡುತ್ತಾಳೆ, ಇದನ್ನು ಕಂಡ ಚರಮೂರ್ತಿಗಳಿಗೆ ಆಶ್ಚರ್ಯವಾಗುತ್ತದೆ. ಆಗ ದಾಸಿಮಯ್ಯನು

ಜಗದ ಗುರುಗಳೆ ಕೇಳಿರಿಂತೀ
ಬಗೆಯು ಸತಿಯಿರಲಿದು ಸುಖವು ಬಲು
ಸೊಗಸುವೀ ತೆರನಿಲ್ಲದಿರೆ ವೈರಾಗ್ಯವೇ ಗುಣವು॥ (ಸಂಧಿ೬/ಪದ್ಯ೪೩)

ಎಂದು ಹೇಳಿ ಅವರ ದ್ವಂದ್ವವನ್ನು ಕಳೆಯುತ್ತಾನೆ. ಸಂಧಿ ಏಳರಲ್ಲಿ ಸುಗ್ಗಲೆ, ದೇಸಿಂಗರಾಯರ ಕುರಿತು ಹೇಳಲಾಗಿದೆ. ಮುದನೂರಿನಲ್ಲಿ ಹೀಗೆ ಹೆಸರಾದ ದಾಸಿಮಯ್ಯ ಇರಲು, ಹೊಟ್ಟಲಕೆರೆ ಅಥವಾ ಹೊಟ್ಟಲಗೆರೆ ಎಂಬ ಊರು. ಅಲ್ಲಿನ ರಾಜ ದೇಸಿಂಗರಾಯ. ಆತನ ಸತಿ ಸುಗ್ಗಲೆ, ಆಕೆ ಯಾವಾಗಲು 'ಬತ್ತಲೆಯ ಭಂಡರಕುಲದಿ ಪುಟ್ಟತ್ತ ಪಾಪವ ಸಂಗ್ರಹಿಪ ಭೂಪೊತ್ತಮಗೆ ಸತಿಯಾಗಿ ರಾಜ್ಯಾಂತ್ಯಾದಿ ನರಕವೆಂದು ಬರವೆಣದಯ। ಉತ್ತಮೋತ್ತಮವೆನಿಪ ನೀತಿ ಯಿರುತ್ತಿರುಲ್ಕಿದನರಿದರಿದು ನಾಂ ಮತ್ತೆ ಭವದೊಳು ಬರುವದನುತಮ್' ಎಂದು ಮನದೊಳಗೆ ಬಯಸುತ್ತಿದ್ದಳು ಈ ಎಲ್ಲಾ ಬಂಧನಗಳಿಂದ ಹೊರಬರಬೇಕು ಆತ್ಮ ಶುದ್ದ ಭಕ್ತಿಯಿಂದ ಮುಕ್ತಿಯನ್ನು ಹೊಂದಬೇಕು ಎಂದು ಚಡಪಡಿಸುತ್ತಿದ್ದಳು. ಹೀಗಿರಲು ಒಮ್ಮೆ ಮುದನೂರು ರಾಮೇಶ್ವರನು ಯತಿಯ (ಜಂಗಮ) ರೂಪತಾಳಿ ಸುಗ್ಗಲಾಂಬೆಯ ಕನಸಿನಲ್ಲಿ ಬಂದು 'ನನ್ನ ಮಗ ದುಗ್ಗಳಾಂಬೆಯ ಪತಿ ಎನಿಸಿರುವ ದೇವರದಾಸಿಮಯ್ಯನು ಆತನೇ ಜಿನಮತವನ್ನು ಸಂಹರಿಸಲೇಂದೇ ಬಂದಿಹನು ಅವನಿರುವುದು ಮುದನೂರಿನಲ್ಲಿ ಆತನನ್ನು ಒಲಿಸಿ ಗುರುವನ್ನಾಗಿ ಮಾಡಿಕೊ ಎಂದು ಹೇಳಿ ಮಾಯವಾದನು. ಇತ್ತ ದಾಸಿಮಯ್ಯನಿಗೂ ಪೊಟ್ಟಲಕೆರೆಯ ಜೈನರ ಉಪಟಳವನ್ನು ನಿವಾರಿಸಬೇಕಾಗಿ ತಿಳಿಸಿ ಆತನಿಗೆ ಬೇಕಾದ ಸಕಲ ಬಿರುದುಗಳನ್ನು ನೀಡುತ್ತಾನೆ.

ದೂರದೇಶದೊಳೊಸೆದು ಶ್ರೀಮುದ
ನೂರಪುರದೊಳಗಿಹನ ದರ್ಶನ
ದೂರಮಾದದು ಎನ್ನ ಪತಿ ಜನಭಕ್ತಸಾಗತರೂ।
ಸೇರಿಹರುಮೀಪುರದೊಳಗೆ ನಾಂ
ಮಾರ ಜಿನ್ಮತದಲ್ಲಿ ಪುಟ್ಟಿದ
ನೀರಸಿಯೊಳಿಂತಪ್ಪ ಘೋರಮದುಂಟು ನನಗೆನುತ । (ಸಂಧಿ೭/ಪದ್ಯ೧೮)

ಚಿಂತಿಸುತ್ತಿರಲು ಸಕಲ ಜ್ಞಾನ, ದಿವ್ಯದೃಷ್ಟಿಯೊಂದಿಗೆ ದಾಸಿಮಯ್ಯನು ಸಕಲ ಜಯ ಘೋಷಗಳೊಂದಿಗೆ ಹೊಟ್ಟಲಕೆರೆಗೆ ಬಂದಿಳಿದನು. ಹೀಗೆ ಬಂದು ಅಲ್ಲಿನ ಜೈನರನ್ನು ವಾದದಲ್ಲಿ ಗೆದ್ದನು, ಅಲ್ಲಿಯು ಅವನ ಕೀರ್ತಿ ಹರಡಿ ಸುಗ್ಗಲೆಗೆ ತಿಳಿಯಿತು. ಆಕೆ ತನ್ನ ಪತಿಯನ್ನು ಕೇಳಿ ಆತನಿಂದ ಅಪ್ಪಣೆ ಪಡೆದು ದಾಸಿಮಯ್ಯನನ್ನು ಬಂದು ಕಾಣುತ್ತಾಳೆ. ಆತನ ಚರಣಗಳಿಗೆ ನಮಿಸಿ ನಾನು ದೇಸಿಂಗರಾಯನ ವರಸತಿಯೆಂದು ಪರಿಚಯಿಸಿಕೊಳ್ಳಲು ದಾಸಿಮಯ್ಯನು ತನ್ನ ಸ್ವಪ್ನದಲ್ಲಿ ರಾಮೇಶ್ವರನು ಬಂದು ಸುಗ್ಗಲಾ ದೇವಿಯ ಕುರಿತು ಹೇಳಿದನು ಎಂದು ಆಕೆಗೆ ಹೇಳುತ್ತಾನೆ. ಆಕೆ ಶೈವ ದೀಕ್ಷೆಯನು ಬೇಡಲು ದಾಸಿಮಯ್ಯನು.

ಅರುಹ ಕುಲದೊಳು ನೀನು ಪುಟ್ಟಿದೆ
ನರುಹ ಕುಲದವ ನಿನ್ನ ವಲ್ಲಭ
ನರುಹನಂ ಪೂಜಿಪರೆ ನಿನ್ನಯ ಕುಲಗುರುಗಳ ವನಂ
ಸ್ಮರಿಪವರೆ ಬಂಧುಬಳಗಗ
ಳಿರುಭಿನೊಳು ನೀಂ ಸಿಕ್ಕಿ ಶಂಕರ
ನರುಹ ನಿನಗೆಂತಳವಡುವುದೆಲೆ ತರುಣಿ ಬೇಡಮ್ಮ (ಸಂಧಿ೭/ಪದ್ಯ೨೨)

ಎಂದು ಹೇಳಲು ಆಕೆ ಕೈಮುಗಿದು 'ಕೋಗಿಲೆ ಕಾಗೆಯ ಆಶ್ರಯ ಪಡೆದರೇನು, ಕಮಲ ಕೆಸರಿನಲ್ಲಿ ಹುಟ್ಟಲು ಕುಂದಬಹುದೇ? ನಾನು ಜೈನ ಕುಲದಲ್ಲಿ ಹುಟ್ಟಿದರೆ ಕುಂದಹುದೇ ? ಎಂದು ಕೇಳುತ್ತಾ ದಯವಿಟ್ಟು ಸನ್ಮಾರ್ಗ ತೋರು ಶರಣ ಎಂದು ಬೇಡಿಕೊಳ್ಳುತ್ತಾಳೆ. ಎಲ್ಲವನ್ನು ತೊರೆದು ಈ ದೀಕ್ಷೆ ಪಡೆಯುವುದು ಉಚಿತವೇ ಎನಲು ಆಕೆ 'ನನಗೆ ಗುರುವು ನೀನೆ, ತಂದೆ, ತಾಯಿ, ಬಂಧು, ಬಳಗ ಎಲ್ಲ ಸಕಲ ಕಾರ್ಯಗಳಿಗೆ ಗುರು ನೀನೆ ಎಂದು ಹೇಳುತ್ತಾಳೆ ಅದಕ್ಕೆ ದಾಸಿಮಯ್ಯನು ಇಂತಹ ಭೋಗವನು ಬಿಟ್ಟು ನಿತ್ಯ ವಲ್ಲದ ದುಂದುಗವನ್ನ ಸತ್ಯವೆಂದೆನುತ ಪಾಲಿಸುವುದಾಗಿ ಹೇಳುತ್ತಿರುವೆ. ಇದು ಸಾಧ್ಯವೇ ಎನಲು ಆಕೆ ಅಕ್ಕಮಹಾದೇವಿ– ಕೌಶಿಕನನ್ನು ಪದ್ಮಾವತಿಯು ಗುರುಬೋಧೆ ಪಡೆದುದನ್ನು ಉದಾಹರಣೆಯಾಗಿ ನೀಡುತ್ತಾಳೆ.

ಸುಗ್ಗಲೆಯ ಈ ದೃಢತೆಯನ್ನು ಮೆಚ್ಚಿ ದಾಸಿಮಯ್ಯನು ಆಕೆಗೆ ಶಿವದೀಕ್ಷೆಯನ್ನು ನೀಡುತ್ತಾನೆ ಶಿವತತ್ವಾನುಸಾರ ಲಿಂಗ ಪೂಜೆಯ ವಿಧಾನಗಳನ್ನು ಆಕೆಗೆ ಉಪದೇಶಿಸುತ್ತಾನೆ.

ದೇವರದಾಸಿಮಯ್ಯನು ಸಂಧಿ ೮ ರಿಂದ ೧೪ ರ ವರೆಗೆ ಸುಗ್ಗಲಾದೇವಿಗೆ ಅಷ್ಟಾವರಗಳ ಮಹಿಮೆಯನ್ನು ಹೇಳುತ್ತಾನೆ. ಹೀಗೆ ಹೇಳುವಾಗ ಅನೇಕ ಉಪಕಥೆಗಳನ್ನು ಶರಣರ ಕಥೆಗಳನ್ನು ಇಲ್ಲಿ ಹೇಳಲಾಗಿದೆ. ದೇವರದಾಸಿಮಯ್ಯನು ಮೊದಲನೆದಾಗಿ 'ಶಿಷ್ಯನು ಗುರುವಿಗೆ ಸಲ್ಲಿಸುವ ಸೇವೆ'ಯಿಂದ ಹಿಡಿದು ಲಿಂಗವಿಚಾರ, ಜಂಗಮ ಮಹಿಮೆ, ಭಸ್ಮದ ಮಹಿಮೆ, ರುದ್ರಾಕ್ಷಿ ಮಹಿಮೆ, ಪಾದ ತೀರ್ಥದ ಮಹಿಮೆ, ಶಿವಪ್ರಸಾದ ಮಹಿಮೆ ಹೀಗೆ ಕ್ರಮವಾಗಿ ಅಷ್ಟಾವರಣಗಳು ಒಬ್ಬ ಶರಣನಿಗೆ ಎಷ್ಟು ಮುಖ್ಯ ಎನ್ನುವುದನ್ನು ತಿಳಿಸುತ್ತಾನೆ. ಲಿಂಗವಿಚಾರವನ್ನು ಹೇಳುವಾಗ ಕಲಿನಾಥನ ಕಥೆಯನ್ನು, ಜಂಗಮವಿಚಾರವನ್ನು ವಿವರಿಸುವಾಗ ಸಿಂಧು ಬಲ್ಲಾಳನ ಕಥೆಯನ್ನು ಹೇಳುತ್ತಾ ಉಪದೇಶ ನೀಡುತ್ತಾನೆ. ಅಷ್ಟಾವರಣಗಳ ಉಪದೇಶದ ಸಂದರ್ಭದಲ್ಲಿ ಭದ್ರಾಯಕನ ಕಥೆ, ರುದ್ರಾಕ್ಷಿಯ ಉಗಮದ ಕಥೆ, ಕೇಕೆಯ ಬ್ರಾಹ್ಮಣನ ಕಥೆ, ಕುಂದಿನೀಪುರದ ದನಪಾಲನ ಕಥೆ, ನುಲಿಯ ಚಂದಯ್ಯನ ಕಥೆಗಳು ಕಾವ್ಯದಲ್ಲಿ ಬರುತ್ತವೆ. ಈ ಎಲ್ಲಾ ಕಥೆಗಳ ಸಾರದಂತೆ ಕಾಯ ವಾಚಾ ಮನಸ್ಸಾ ಮಾಡುವ ಭಕ್ತಿ ಮಾತ್ರ ಶಿವನನ್ನು ಮುಟ್ಟುವುದು. ಗರ್ವದಿಂದ ಭಕ್ತಿ ವಿಫಲವಾಗುವುದು ಎಂದು ಹೇಳುತ್ತಾ ಶಿವನು ಪಾರ್ವತಿಗೆ ವಿವರಿಸುವ ಸಂದರ್ಭವನ್ನೂ, ಸುಂದರ ನಂಬಿಯ ಜನನ, ಭಕ್ತಿ, ಮೆರೆಮಿಂಡಯ್ಯನ ಭೇಟಿ ಮೊದಲಾದ ವೃತ್ತಾಂಶಗಳನ್ನು ವಿವರಿಸುವನು, ತಿರುವಾರೂರಿನ ತಿರುನೀಲಕಂಠನ ಕಥೆಯನ್ನು, ಆತನ ಲಿಂಗಾಚಾರವನ್ನೂ ಇಲ್ಲಿ ಕವಿ ತಂದಿದ್ದಾನೆ. ನಿಜವಾದ ಶರಣ ಎಂದರೆ ಯಾರಲ್ಲೂ ವೈಷಮ್ಯ ಕೂಡದೇ, ಎಲ್ಲರನ್ನು ತನ್ನಂತೆ ಕಾಣುತ್ತಾ, ಎಳ್ಳಿನಲ್ಲಿ ಎಣ್ಣಿಯಂತೆಯೂ, ಎಣ್ಣೆಯಲ್ಲಿ ಎಳ್ಳು ಇದರಂತೆಯೂ, ನಡೆ ನುಡಿ ಒಂದಾಗಿ, ಸಮದೃಷ್ಟಿಯಿಂದ ಜಗತ್ತನ್ನು ನೋಡುವವನು ಎಂಬ ಅರ್ಥವನ್ನು ನೀಡಿ ಅದನ್ನು ಕವಿ ದಾಸಿಮಯ್ಯನಿಂದ ಉಪದೇಶಿಸಿದ್ದಾನೆ

ಮುಂದುವರೆದು ಹದಿನೈದನೇ ಸಂಧಿಯಲ್ಲಿ ಧರ್ಮ, ಅಧರ್ಮದ ಬಗ್ಗೆ ಸುಗ್ಗಲಾ ದೇವಿಗೆ ಉಪದೇಶ ನೀಡುವನು.

ಲಲನೆ ಕೇಳುಜ್ಞಾನ ಸಂಸ್ಕೃತಿ
ಬಳಕೆಯ ಸಧರ್ಮ ದ್ವೇಷದ
ಬಳಕೆಯಲ್ಲವ ಧರ್ಮವದು ತಾತ್ವವನನುಭವಿಪಾ ।
ನೆಲೆಯೆ ಜೀವಿಗೆ ಶರೀರವಹುದದ

ರೊಳು ಸುತಾಪ್ತದಿಗಳ ದುಸ್ಕದಿ
ಸಲೆಹುದುಗಿದಹಿಯಂತೆ ನೆಲೆಗೆಡುತಿಹರು ಕೇಳಮ್ಮ ॥(ಸಂಧಿ೧೫/ಪದ್ಯ೧೩)

ಶಮೆ, ದಮೆ, ಸತ್ಯ, ಲಜ್ಜೆ, ಶ್ರದ್ಧೆ, ತಪಸ್ಸು, ಧ್ಯಾನ, ಚಿತ್ತಶುದ್ಧಿ ಇವೆಲ್ಲವೂ ಮುಕ್ತಿಯ ಸಾಧಕಗಳು. ಅಧರ್ಮದ ಗುಣಗಳು ಸ್ಥೂಲ ಮತ್ತು ಸುಸೂಕ್ಷ. ಅಧರ್ಮದ ನಡೆಯಿಂದ ಹುಟ್ಟು, ಸಾವುಗಳ ಆಚೆಯು ನರಳಬೇಕಾಗುತ್ತದೆ. ಬಹುಜನ್ಮಪಡೆದು ನರಕಯಾತನೆ ಪಡೆಯ ಬೇಕಾಗುವುದು. ಇಲ್ಲಿ ನಾಲ್ಕು ಜನನದ ಬಗೆಗಳನ್ನು ಹೇಳುವನು. ಅವು ಉದ್ಭಜ, ಅಂಡಜ, ಸ್ವೇದಜ, ಜರಾಯುಜಗಳು ಅಧರ್ಮದ ಪರಿಗಳು ದೇಹಮಾತ್ರಕ್ಕೆ ಸೀಮಿತವಲ್ಲ. ಹೊರಗೆ ದೇಹವನ್ನು ತೊಳೆದು ಒಳಗೆ ಶುದ್ಧವಾಗದಿದ್ದರೆ ಅದು ಮನದ ಮೈಲಿಗೆ, ಶಿವನನ್ನು ದೃಢವಾಗಿ ನಂಬುವವನು ಮೃತ್ಯುವನ್ನು ಗೆಲ್ಲುತ್ತಾನೆ. ಧನದ ಬಗೆಗೆದಿನ ಮೋಹವನ್ನು ವಿರೂಪಾಕ್ಷ ದೇಶಿಕನು ಅದ್ಭುತವಾದ ಕಲ್ಪನೆಯನ್ನು ನೀಡುತ್ತಾನೆ.

'ಮಾಂಸವನ್ನು ಕಂಡು ಕೆಲವು ಕಾಗೆಗಳೂ, ಹದ್ದುಗಳೂ ಕೋಲಾಹಲ ಮಾಡಿ ಅದನ್ನೆತ್ತಿ ಕೊಂಡು ಆಕಾಶದಲ್ಲಿ ಹಾರಾಡುವವು. ಅದು ಜಾರಿ ನೆಲಕ್ಕೆ ಬೀಳಲು, ಅಲ್ಲಿದ್ದ ನಾಯಿಗಳು ಪರಸ್ಪರ ಕಚ್ಚಾಡುವವು. ಅವುಗಳಲ್ಲಿ ಒಂದು ಅದನ್ನು ಕಚ್ಚಿ ಓಡಿ ಹತ್ತಿರವಿದ್ದ ನದಿ ದಾಟುತ್ತಿರುವಾಗ, ಮಾಂಸದ ತುಂಡು ಜಾರಿ ಕೆಳಗೆ ಬೀಳುವುದು. ಅಲ್ಲಿದ್ದ ಮೀನುಗಳು ಅದಕ್ಕಾಗಿ ತಮ್ಮ ತಮ್ಮಲೇ ಹೋರಾಡುವುವು. ಅದರಂತೆ ಹಣವನ್ನು ಸಂಗ್ರಹಿಸಲು ಲೋಕದ ಜನ ತಮ್ಮ ತಮ್ಮಲೇ ಹೋರಾಡುವರು. ಧನದಿಂದ ಶಾಶ್ವತ ಸುಖ ದೊರೆಯದು'. ಹೀಗೆ ಎಲ್ಲ ಆಸೆಗಳನ್ನು ಬಿಟ್ಟು ಗುರೂಪದಿಷ್ಟಮಾರ್ಗದಲ್ಲಿ, ಸಧರ್ಮಶೀಲವಾಗಿ, ಸುಚರಿತರಾಗಿ ಶಿವನನ್ನು ಒಲಿಸಿಕೊಂಡು ಮುಕ್ತಿ ಪಡೆಯಬೇಕು ಎಂದು ದಾಸಿಮಯ್ಯ ಆಕೆಗೆ ವಿವರಿಸುತ್ತಾನೆ.

ದಾಸಿಮಯ್ಯನ ಎಲ್ಲ ಉಪದೇಶಗಳನ್ನು ಕೇಳಿ ಸುಗ್ಗಲೆಯು ಗುರುಲಿಂಗ ಜಂಗಮ ವನ್ನಾಚರಿಸಲು ಪ್ರಾರಂಭಿಸಿದಳು. ಕೆಲದಿನಗಳು ಹೀಗೇ ನಡೆಯುತಿರಲು ಅಲ್ಲಿನ ಜನಗಳಿಗೆ ಈ ವಿಷಯ ತಿಳಿಯಿತು. ರಾಣಿ ಸುಗ್ಗಲೆ ದಾಸಿಮಾರ್ಯನಿಂದ ದೀಕ್ಷೆ ಪಡೆದು ಶೈವಾಚಾರಕ್ಕೆ ಒಳಗಾಗಿರುವಳೆಂದು ಎಲ್ಲೆಡೆ ಜನ ಮಾತನಾಡಿಕೊಳ್ಳುತ್ತಿದ್ದರು. ಈ ವಿಚಾರ ರಾಜಗುರು ಸರ್ವಜ್ಞನೇಮಿಗೆ, ತಿಳಿದು, ಜಯಸಿಂಹನನ್ನು ಬರಹೇಳಿ, ರಾಣಿಯ ವರ್ತನೆಯನ್ನು ವಿವರಿಸಿದಾಗ, ಜಯಸಿಂಗನು ಇದನ್ನು ಕ್ರೂರವಾಗಿ ಖಂಡಿಸುತ್ತಾನೆ. ಆದರೆ ಸುಗ್ಗಲೆಯು ಈ ಎಲ್ಲದಕ್ಕು ಬಗ್ಗದೆ, ಇದ್ದಾಗ, ಸತಿ ಮಾಡಿದ ಪಾಪ ಪತಿಗೂ ದಕ್ಕುವುದು. ಈಕೆ ಹೊಟಲಕೆರೆಯನ್ನು ಹೊಲಗೆಡಿಸಿ ಬಿಟ್ಟಳು ಎಂದು ಹೀನವಾಗಿ ಅಳಿಯಲು ಪ್ರಾರಂಭಿಸಿ, ನಿನ್ನ ಗುರುವನ್ನು ಕರೆಯಿಸು. ಸಶಾಸ್ತ್ರೀವಾಗಿ ನಿನಗೂ ಆತನಿಗೂ ಜೈನ ಧರ್ಮದ ಪಾರಮ್ಯ ತಿಳಿಸುತ್ತೇನೆ ಎಂದು ದಾಸಿಮಯ್ಯನಿಗೂ ಆಹ್ವಾನವನ್ನು ಕಳಿಸುತ್ತಾನೆ.

ಆಗ ಎಲ್ಲ ಧರ್ಮದ ವಾಗ್ಮಿಗಳೂ ಸಭೆಯಲ್ಲಿ ಸೇರಿರಲು ದಾಸಿಮಯ್ಯ ಪ್ರಶ್ನೆಯನ್ನು ಆಲಿಸಿ ತಾನೇ ಉತ್ತರಿಸುವ ಪರಿಪಾಟವನ್ನು ಸಭೆಯಲ್ಲಿ ನೆರವೇರಿಸಿದನು. ಶಿವನನ್ನು ಪೂಜಿಸಿದವರಿಗೆ ದೊರೆಯುವ ಫಲವೇನು? ಮಾಯೆಯೇ ಜಗತ್ತಿನ ಆಗುಹೋಗುಗಳಿಗೆ ಕಾರಣಗಳು ಎಂಬ ಮೊದಲಾದ ಪ್ರಶ್ನೆಗಳನ್ನು ಮಾಯವಾದಿಗಳು, ವೈಷ್ಣವನು, ಗಣಾಪತ್ಯನು, ಸೌರನು, ಬ್ರಹ್ಮವಾದಿಯು, ಕಾಲವಾದಿಯು ಕೇಳಲು, ಎಲ್ಲಕ್ಕೂ ಉತ್ತರಗಳನ್ನು ನೀಡುತ್ತಾನೆ. ಕೊನೆಗೆ ಸರ್ಪ ಪರೀಕ್ಷೆ ಮಾಡಿದಾಗ ಅದು ಶಿವಲಿಂಗವಾಯಿತು. ಜಯಸಿಂಹ ಇದನ್ನು ನೋಡಿ ಆತನಿಗೆ ಶರಣಾಗಿ ತನ್ನ ಅಪರಾಧವನ್ನು ಕ್ಷಮಿಸುವಂತೆ ಬೇಡಿದ ಮತ್ತು ದಾಸಿಮಾರ್ಯ ಇವರಿಂದ ಸನ್ಮಾನ ಹೊಂದಿ ಮುದನೂರಿಗೆ ಹಿಂದುರಿಗಿದ. ರಾಮನಾಥನನ್ನು ಭಕ್ತಿಯಿಂದ ಭಜಿಸಿ, ರಾಮನಾಥನನ್ನು ಹಲವು ಬಗೆಯಲ್ಲಿ ತನಗೆ ಮುಕ್ತಿದೊರೆಯುವಂತೆ ಮಾಡು ಎಂದು ಬೇಡಿಕೊಳ್ಳಲು, ರಾಮನಾಥನು ಅನುಗ್ರಹವಿತ್ತನು. ಆಗ ದಾಸಿಮಯ್ಯ ದುಗ್ಗಳಾಂಬಿಕೆಯೊಂದಿಗೆ ಅವರ ಸುಪುತ್ರನೂ ರಾಮನಾಥ ಲಿಂಗದಲ್ಲಿ ಐಕ್ಯರಾಗುತ್ತಾರೆ ಎಂದು ಕೊನೆಯ ಸಂಧಿಯಲ್ಲಿ ಹೇಳಲಾಗಿದೆ. ಇದು ವಿರೂಪಾಕ್ಷ ದೇಶಿಕನ ದೇವರದಾಸಿಮಯ್ಯ ಪುರಾಣದ ಕತೆ.

**ಕೃತಿಯ ಕುರಿತ ಕೆಲವು ಪ್ರಮುಖ ಅಂಶಗಳು**

ದೇವರದಾಸಿಮಯ್ಯನ ಪುರಾಣ ಕೃತಿಯ ಕಾಲ ಹದಿನೆಂಟನೇ ಶತಮಾನ. ಸಂಸ್ಕೃತದ ದೇವರದಾಸಿಮಯ್ಯ ಪುರಾಣ ಇದಕ್ಕೆ ಮೂಲವೆಂದು ಕವಿ ಹೆಳಿಕೊಂಡಿದ್ದರೂ, ಮೂಲದ ಕೃರ್ತವನ್ನು ಎಲ್ಲಿಯೂ ಹೆಸರಿಸಿಲ್ಲ. ಆದ್ದರಿಂದ ಇದನ್ನು ತಿಳಿಯುವುದು ಕಷ್ಟ ಸಾಧ್ಯ. ಈ ಕೃತಿಯಲ್ಲಿ ದೇವಗಣನು ಅವತರಿಸಿದನ್ನು ಹೇಳುತ್ತಾ ದೇವರದಾಸಿಮಯ್ಯನ ಚರಿತ್ರೆಯನ್ನು ಹೇಳುತ್ತೇನೆ ಎಂದು ಕವಿ ಹೇಳಿಕೊಂಡಿದ್ದಾನೆ. ಕಾವ್ಯದ ಪ್ರಾರಂಭದಲ್ಲಿ ವಸ್ತ್ರ ಸಂಸ್ಕೃತಿಗೆ ಹೆಚ್ಚಿನ ಪ್ರಾಧ್ಯಾನ್ಯತೆ ನೀಡಿದ್ದು, ನಂತರದಲ್ಲಿ ವೀರಶೈವಾಚರಣೆಯನ್ನು ಪ್ರಧಾನಗೊಳಿಸಲಾಗಿದೆ. ಇಲ್ಲಿ ದಾಸಿಮಯ್ಯನ ಹುಟ್ಟಿಗೆ ಎರಡು ಕಾರಣಗಳಿವೆ.

೧. ಭೂಲೋಕದ ಹರಾಜಕತೆಯನ್ನು ತೊಡೆಯುವುದು.

೨. ವೀರಶೈವಾಚಾರ ಮಾರ್ಗವನ್ನು ಉದ್ಧರಿಸುವುದು.

ವಿರೂಪಾಕ್ಷದೇಶಿಕನು ಕೃತಿಯನ್ನು ರಚಿಸಲು ಇರಬಹುದಾದ ಮೂಲ ಉದ್ದೇಶಗಳಾಗಿಯೂ ಇವುಗಳನ್ನು ಪರಿಗಣಿಸಬಹುದು. ದಾಸಿಮಯ್ಯನ ಚರಿತ್ರೆಯನ್ನು ಉನ್ನತೀಕರಿಸುವುದು ಕವಿಯ ಉದ್ದೇಶವಾಗಿದ್ದು, ಆತನನ್ನು ಪವಾಡ ಪುರುಷನನ್ನಾಗಿ ತೋರಿಸುವ ಅವಶ್ಯಕತೆಯಿಂದ ಜನರಿಗೆ ಉಪದೇಶ ಮಾಡುವ ಉದ್ದೇಶದಿಂದ ದಾಸಿಮಯ್ಯನ ಜನನವನ್ನು ಪವಾಡ ಸಾದೃಶಗೊಳಿಸಲಾಗಿದೆ. ಲೋಕೋದ್ಧಾರಕ್ಕಾಗಿ ಈತ ಭೂಲೋಕದಲ್ಲಿ ಜನಿಸಿದ ಎಂದು ಹೇಳುವ ಮೂಲಕ

ದೇವಧೂತನನ್ನಾಗಿಸುವ ಪ್ರಯತ್ನವನ್ನು ಕವಿ ಮಾಡಿದ್ದಾನೆ. ಮತ್ತೊಂದು ವೀರಶೈವ ಆಚರಣೆಗಳನ್ನು ಪ್ರಚಾರ ಮಾಡುವ ಉದ್ದೇಶ ಕೃತಿಯಲ್ಲಿ ಬಹುಪಾಲು ಅಡಗಿದಂತೆ ತೋರುತ್ತದೆ. ಈ ಕೃತಿಯಲ್ಲಿ ಎಲ್ಲಿಯೂ ದೇವಾಂಗನ ಬಗ್ಗೆ ಹೇಳಿಲ್ಲ. ಜ.ಚ.ನಿಯವರು ದೇವರದಾಸಿಮಯ್ಯ ಪುರಾಣದಲ್ಲಿಯಂತೆ 'ಬಸವಣ್ಣನಾಗಿ ನಂದಿ ಜನಿಸಿದನು, ದಾಸಿಮಯ್ಯನಾಗಿ ದೇವಗಣ ಜನಿಸಿದನು' ಎಂಬ ಸಿದ್ಧಾಂತ ಕವಿಯದ್ದಾಗಿದೆ.

ಮುದನೂರನ್ನು ಕಾವ್ಯದಲ್ಲಿ ಸಮೃದ್ಧಿಯ ನಾಡಾಗಿ ವರ್ಣಿಸಲಾಗಿದೆ. ಎಲ್ಲಿ ನೋಡಿದರೂ ಅರವಟಿಗೆ, ಅನ್ನ ಛತ್ರಗಳು, ಬನ ಪುಂಡೇಕ್ಷು, ತೋಟಗಳು, ಗರ್ದೆಗಳು, ಪರ್ಣ ಮೊಟಗ, ಹೂದೋಟಗಳಿಂದ ಕೂಡಿದ್ದು ನ್ಯಾಯ, ನೀತಿ ಸಮ್ಯತತೆಗೆ ಹೆಸರಾದುದು ಎಂದು ಹೇಳಲಾಗುತ್ತದೆ. ಮುದನೂರು ಒಂದು ಧಾರ್ಮಿಕ ಸ್ಥಳ ಅಂತೆಯೇ ಇದು ಸಮೃದ್ಧಿಯಿಂದ ಕೂಡಿದ್ದು, ವಾಣಿಜ್ಯ(ಹೂದೋಟ, ತೋಟ)ವಾಗಿಯೂ ಉನ್ನತ ಸ್ಥಿತಿಯಲ್ಲಿತ್ತು ಎನ್ನುವುದು ಅತ್ಯಂತ ಭವ್ಯವಾಗಿ ಈ ಕೃತಿಯಲ್ಲಿ ಅನಾವರಣವಾಗಿದೆ. ಪುರಾಣದಲ್ಲಿ ಅನೇಕ ಉಪಕಥೆಗಳಿದ್ದು, ಕೆಲವು ಪೌರಾಣಿಕ ಕಥೆಗಳಾದರೆ, ಕೆಲವು ಶರಣರ ಕತೆಗಳು. ಸಂದರ್ಭಕ್ಕೆ ತಕ್ಕಂತೆ ಕಥೆಗಳನ್ನು ಬಳಸಿಕೊಂಡು ಪುರಾಣವನ್ನು ಕಟ್ಟಲಾಗಿದೆ. ಎಲ್ಲ ಪುರಾಣಗಳಂತೆಯೇ ಈ ಕೃತಿಯಲ್ಲಿಯೂ ಉಪಕಥೆಗಳನ್ನು ಉಪದೇಶದ ಉದ್ದೇಶಕ್ಕಾಗಿಯೇ ಬಳಸಿಕೊಳ್ಳಲಾಗಿದೆ. ಈ ಪರಿಪಾಟ ಕನ್ನಡ ಸಾಹಿತ್ಯದಲ್ಲಿ ೯ನೇ ಶತಮಾನದಿಂದಲೂ ಬೆಳೆದು ಬಂದಿದ್ದು, ಧರ್ಮ ಪ್ರಸಾರದ ಉದ್ದೇಶ ಹೊಂದಿ ರಚನೆಯಾದ ಕೃತಿಗಳಲ್ಲಿ ಸರ್ವೇಸಾಮಾನ್ಯವಾಗಿ ಕಂಡು ಬರುತ್ತದೆ. ಇದಕ್ಕೆ ವಡ್ಡಾರಾಧನೆ ಮತ್ತು ಇತರ ಜೈನ ಧರ್ಮ ಪ್ರಸಾರದ ಕೃತಿಗಳೂ ಹೊರತಾಗಿಲ್ಲ. ಇಲ್ಲಿನ ಕೆಲವು ಕತೆಗಳು ವಡ್ಡಾರಾಧನೆ, ಧರ್ಮಪರೀಕ್ಷೆ ಮೊದಲಾದವುಗಳಲ್ಲಿಯ ಕತೆಗಳನ್ನು ಹೋಲುತ್ತವೆ.

ಕೃತಿಯ ಮೊದಲರ್ಧಭಾಗ ದಾಸಿಮಯ್ಯನ ಜೀವನವನ್ನಾಧರಿಸಿದ್ದಾಗಿದ್ದು, ನಂತರದ ಅರ್ಧಭಾಗ ಅಂದರೆ ೮ನೇ ಸಂಧಿಯಿಂದ ೧೪ನೇ ಸಂಧಿಯವರೆಗೆ ವೀರಶೈವ ಅಷ್ಟಾವರಣಗಳ ಮಹತ್ವವನ್ನು ಹೇಳಲಾಗಿದೆ. ಕೃತಿಯಲ್ಲಿ ದೇವರದಾಸಿಮಯ್ಯನೆಂದು ನಾಮಾಂಕಿತನಾಗಿರುವ ವ್ಯಕ್ತಿಯ ಜೀವನದಲ್ಲಿ ಜೇಡರದಾಸಿಮಯ್ಯ ಹಾಗೂ ದುಗ್ಗಳೆಯರ ಜೀವನದ ಭಾಗವು ಬಂದು ಸೇರಿದೆ. ಇಲ್ಲಿ ಕವಿಯು ಹೇಳುವಂತೆ ಜೇಡರದಾಸಿಮಯ್ಯನೇ, ದೇವರದಾಸಿಮಯ್ಯ, ದುಗ್ಗಳೆಯ ಗಂಡನೂ, ಸುಗ್ಗಲಾದೇವಿಯ ಗುರುವೂ ಇಬ್ಬರೂ ಒಬ್ಬರೇ ಪುರಾಣದ ಪೂರ್ತಿ ಕಥೆಯನ್ನು ಇದಕ್ಕೆ ಪೂರಕವೆಂಬಂತೆಯೇ ಹೆಣೆಯಲಾಗಿದೆ. ಈ ಕಾವ್ಯದಲ್ಲಿ ವಿಶೇಷವಾಗಿ ಗಮನಿಸ ಬೇಕಾದುದೆಂದರೆ, ಕವಿಯು ಸಂಸಾರ ಲೇಸೋ ಸನ್ಯಾಸ ಲೇಸೋ ಎಂಬ ಪ್ರಶ್ನೆಯನ್ನು ದಾಸಿಮಯ್ಯ ಪರಿಹರಿಸುವಾಗ, ಆತನಿಂದ ಪತಿವ್ರತಾಧರ್ಮವನ್ನು ಬೋಧಿಸಿದ್ದಾನೆ. ವಚನ ಚಳುವಳಿಯಕಾಲದಲ್ಲಿ ಸ್ತ್ರೀಪುರುಷ ಎಂಬ ಭೇದಗಳನ್ನು ತೊಡೆಯುವ ಕಾಲದಲ್ಲಿ ಸ್ತ್ರೀ ಮಾತ್ರ

ಪತಿವ್ರತಾಧರ್ಮವನ್ನು ಕಾಪಾಡುವಂತವಳು ಎಂಬ ಕಟ್ಟುಪಾಡುಗಳಿದ್ದು, ಅದರಿಂದ ಆಚೆ ಪುರುಷನೂ ಇದಕ್ಕೆ ಹೊರತಾಗಿಲ್ಲ ಎಂದು ತೋರುವ ಪ್ರಯತ್ನಗಳು ನಡೆದಿದ್ದವು. ಕೃತಿ ರಚನೆಯ ಕಾಲದ ಪರಿಸರದ ಪ್ರಭಾವದಿಂದ ಕವಿ ಇದನ್ನು ಮೀರಿ ಸಂಸಾರ ಸುಖಕ್ಕೆ ಮತ್ತು ವೈರಾಗ್ಯಕ್ಕೆ ಸ್ತ್ರೀ ಮಾತ್ರವೇ ಕಾರಣ ಎಂಬುದನ್ನು ಸ್ವಲ್ಪ ಹೆಚ್ಚೆಂಬಂತೆಯೇ ವರ್ಣಿಸಿದ್ದಾನೆ. ಸಂಸಾರವು ಸತಿಯಿಂದಲೇ ಸುಗಮವಾಗುತ್ತದೆ ಎಂಬುದನ್ನು ದಾಸಿಮಯ್ಯ ಮನವರಿಕೆಮಾಡಲು ದುಗ್ಗಳೆಯನ್ನು ಪರೀಕ್ಷಿಸಿ ಇಂತಹ ಸತಿ ಇರಲು ಸಂಸಾರ ಲೇಸು(ಇಂದಿನಿಂದ ಸ್ತ್ರೀವಾದಿ ಚಿಂತಕರು ಇದನ್ನು ಪುರುಷ ದೌರ್ಜನ್ಯದ ನೆಲೆಯಲ್ಲಿ ನೋಡುತ್ತಾರೆ.) ಎಂದು ಹೇಳುತ್ತಾನೆ. ಇಲ್ಲಿ ದಾಸಿಮಯ್ಯನು ದಾಂಪತ್ಯದಲ್ಲಿ ಸತಿ-ಪತಿಗಳ ಅನ್ಯೋನ್ಯತೆಯೊಂದಿಗೆ, ಪತ್ನಿಯ ಜವಾಬ್ದಾರಿಯೇ ಹೆಚ್ಚು ಎಂಬಂತೆ ದೂಷಿಸಲಾಗಿದೆ. ಇದು ಸ್ವತಃ ದಾಸಿಮಯ್ಯನ ವಚನಗಳಲ್ಲಿ ಕಂಡುಬರುವ ಚಿಂತನಾ ಶಕ್ತಿಯನ್ನು ವಿಚಾರಕ್ಕೀಡು ಮಾಡುವಂತೆ ಚಿತ್ರಿಸಲಾಗಿದೆ. ಆದರೆ ಕವಿ ಈ ಕೃತಿಯಲ್ಲಿ ಸಂಸಾರಕ್ಕೂ-ವೈರಾಗ್ಯಕ್ಕು ಪತ್ನಿಯ ಒಳ್ಳೆಗುಣಗಳು, ದುರ್ಗುಣಗಳೇ ಕಾರಣ ಎಂದು ಹೇಳುತ್ತಾನೆ.

ಇಲ್ಲಿ ಸುಗ್ಗಲೆಯು ಮೂಲತಃ ಜೈನಳಾಗಿದ್ದು, ನಂತರ ದೇವರದಾಸಿಮಯ್ಯನಿಂದ ದೀಕ್ಷೆ ಪಡೆದು ಶೈವಳಾದುದಾಗಿ ಈ ಪುರಾಣ ಕಾವ್ಯ ತಿಳಿಸುತ್ತದೆ. ಕೆಲವು ಕಾವ್ಯಗಳಲ್ಲಿ ಈಕೆ ಶೈವ ಧರ್ಮಕ್ಕೆ ಸೇರಿದವಳೆಂದೂ ಈಕೆಯ ಪತಿ ಜೈನನೆಂದೂ ತಿಳಿಸುತ್ತವೆ. ಈ ಮೊದಲು ರಚಿತವಾದ ಎಲ್ಲ ಕಾವ್ಯಗಳಂತೆ ಈ ಸನ್ನಿವೇಶ ಚಿತ್ರಿತಗೊಂಡಿದ್ದರೂ, ವಿಸ್ತಾರವಾಗಿ ಹೆಣೆಯಲ್ಪಟ್ಟಿದೆ. ಇಲ್ಲಿ ಸುಗ್ಗಲೆ ತನ್ನನ್ನು ಮತ್ತು ತನ್ನ ಪತಿ ದೇಸಿಂಗನನ್ನು ಅಕ್ಕಮಹಾದೇವಿ ಹಾಗೂ ಕೌಶಿಕನಿಗೆ ಹೋಲಿಕೆ ಮಾಡಿಕೊಂಡು ಅಕ್ಕನಂತೆ ತಾನೂ ಅಗತ್ಯವಿದ್ದಲ್ಲಿ ಪತಿಯನ್ನೇ ಬಿಡುವುದಾಗಿ ಹೇಳಿ ದಾಸಿಮಯ್ಯನಿಂದ ವೀರಶೈವ ದೀಕ್ಷೆ ಪಡೆಯುತ್ತಾಳೆ.

ದೇವರದಾಸಿಮಯ್ಯನೇ ಆಗಲಿ, ಜೇಡರದಾಸಿಮಯ್ಯನೇ ಆಗಲಿ ಬಸವೇಶ್ವರನಿಗಿಂತಲೂ ಈ ಇಬ್ಬರೂ ಹಿರಿಯರು. ಇಲ್ಲಿ ದಾಸಿಮಯ್ಯನು ಬಸವೇಶ್ವರನ ಕಥೆಯನ್ನು ಹೇಳುತ್ತಾನೆ. ಅಂತೆಯೇ ಸುಗ್ಗಲೆಯು ಅಕ್ಕಮಹಾದೇವಿಯನ್ನು ನೆನೆಯುತ್ತಾಳೆ. ಇದೆಲ್ಲವನ್ನು ನೋಡಿದರೆ ಕವಿ ಹಲವು ಶರಣರ ಕತೆಗಳನ್ನು ಹೇಳಿದಂತೆಯೇ ಇವರ ಕತೆಗಳನ್ನು ಕಾವ್ಯದಲ್ಲಿ ತಂದಿದ್ದಾನೆ. ಅದೂ ಕಾಲದ ಪರಿವೆ ಇಲ್ಲದೆ, ಎಂದರೆ ಬಸವೇಶ್ವರ ದಾಸಿಮಯ್ಯನ ಸಮಕಾಲೀನನೋ ಅಥವಾ ಹಿರಿಯನೋ ಇರಬೇಕೆಂದು ಕವಿ ಭಾವಿಸಿದಂತಿದೆ.

ಇಡೀ ಕಾವ್ಯದಲ್ಲಿ ಅಲ್ಲಲ್ಲಿ ಅಲಂಕಾರಗಳೂ, ನಾಡಗಾದೆಗಳೂ ಹೇರಳವಾಗಿ ಪ್ರಯೋಗಿಸಲ್ಪಟ್ಟಿವೆ. ಕಥಾನಿರೂಪಣೆಯು ಕೆಲವೆಡೆ ಬೇಸರಿಕೆಯನ್ನುಂಟು ಮಾಡುವಷ್ಟು ದೀರ್ಘವೆನಿಸುತ್ತದೆ. ಕವಿ ತನ್ನ ಕಾವ್ಯದ ಬಗ್ಗೆ ಹೀಗೆ ಹೇಳಿಕೊಂಡಿದ್ದಾನೆ.

ಮೃದುಮಧುರ ಪದಬಂಧ ಸಂಧಿಯ
ನುದಿತಭಾವಂ ರಸಪದಾರ್ಥಂ
ವಿದಿತ ಲಕ್ಷಣ ಮುಖ್ಯ ಪ್ರಸ್ತಾರಗಳರಿಯೆ....

ಎಂದು ನಿರಹಂಕಾರದಿಂದ ದೈನ್ಯವಾಗಿ ನುಡಿಯುತ್ತಾನೆ. ವರ್ಣನೆಗೆ ತಕ್ಕ ಶಬ್ದ ನಿರ್ಮಾಣ ಕಾವ್ಯದಲ್ಲಿ ಕಂಡು ಬರುತ್ತದೆ. ಇದಕ್ಕೆ ಪ್ರಧಾನ ಕಾರಣ ಕವಿಯ ಪ್ರತಿಭೆ ಎನ್ನಬಹುದು. ಒಟ್ಟಾರೆ ಈ ಕಾವ್ಯವನ್ನು ಸುಂದರವೂ ಸರಳವೂ ಆದ ಧರ್ಮ ನಿರೂಪಣೆಯ ಸಾಧನವೆಂದು ಹೇಳಬಹುದು.

### ೫.೨. ಅಯ್ಯಪ್ಪ ಕವಿಯ ದೇವಾಂಗ ಪುರಾಣ

ಅಯ್ಯಪ್ಪ ಕವಿಯು ದೇವಾಂಗ ಪುರಾಣ ರಚಿಸಿದ ಬಗ್ಗೆ ದೇವರದಾಸಿಮಾರ್ಯ ಪ್ರಶಸ್ತಿ ಭಾಗ ೨ರಲಿ ಉಲ್ಲೇಖ ದೊರೆಯುತ್ತದೆ. ಇದರ ಪ್ರಕಾರ ಈ ಕೃತಿಯು "ಪ್ರತಿಯಾದ ಕಾಲ ಶಕೆ ೧೮೨೮ ಪರಾಭವನಾಮ ಸಂವತ್ತ ಮಿತಿ ಆಷಾಢ ವಿಧಿ ಐದು ಸೋಮವಾರ ಎಂದು ಹೇಳಲಾಗಿದೆ. ಈ ಕೃತಿಯು ರುದ್ರಸ್ವಾಮಿಯವರಿಂದ ಪ್ರತಿಮಾಡಲ್ಪಟ್ಟಿದ್ದು, ಇದನ್ನು ಪ್ರತಿಮಾಡಿಸಿದವರು ಹಿರೇಮುದನೂರಿನ ಮಾಲಿಗೌಡರ ಬಸವಲಿಂಗವ್ವ ಕೋಮ ಮಡಿವಾಳಪ್ಪ"[೮] ಎಂದು ನಿಡುಮಾಮಿಡಿ ಸಂಸ್ಥಾನ ಜಗದ್ಗುರುಗಳು ದೇವರದಾಸಿಮಾರ್ಯ ಪ್ರಶಸ್ತಿಯಲ್ಲಿ ತಿಳಿಸಿದ್ದಾರೆ. ಈ ಬಗ್ಗೆ ಹೆಚ್ಚಿನ ಆಕರಗಳು ದೊರೆಯದ ಕಾರಣ ಇಲ್ಲಿನ ಕಥೆಯನ್ನೆ ಸಂಶೋಧನೆಗೆ ತೆಗೆದುಕೊಳ್ಳಲಾಗಿದೆ.

ಕವಿಯ ಹೆಸರು ಅಯ್ಯಪ್ಪ. ತಂದೆ ರಾಚಪ್ಪ, ತಾಯಿ ಗಂಗಮ್ಮ. ಇವರು ದೇವಾಂಗ ವಂಶಸ್ಥರು. ಊರು ಬಳ್ಳಾರಿ. ಇಷ್ಟನ್ನು ಹೊರತುಪಡಿಸಿ ಕವಿಯ ಬಗ್ಗೆ ಹೆಚ್ಚಿನ ವಿವರಗಳು ದೊರೆಯುವುದಿಲ್ಲ. ಕೃತಿಯ ಹೆಸರು ದೇವಾಂಗ ಪುರಾಣ. ಇದರಲ್ಲಿ ಹದಿನಾಲ್ಕು ಸಂಧಿಗಳಿವೆ. ಕೃತಿಯು ಶರ ಷಟ್ಪದಿಯಲ್ಲಿದ್ದು, ಇಡೀ ಕಾವ್ಯದಲ್ಲಿ ೧೫೧೫ ಪದ್ಯಗಳವೆ. ವಿರೂಪಾಕ್ಷ ದೇಶಿಕನ 'ದೇವರದಾಸಿಮಯ್ಯನ ಪುರಾಣ'ದಂತೆಯೇ ಇದಕ್ಕೂ ಸಂಸ್ಕೃತದ ದೇವಕವಿಯು ರಚಿಸಿದ ಸಂಸ್ಕೃತ ದೇವಾಂಗ ಪುರಾಣ ಆಧಾರವಾಗಿದೆ. "ಆತನ ಊರು ಚೋಳಾಬ್ಧಿಪುರ ಆತನ ತಾಯಿ ನಾಗಮ್ಮ. ಇವಳು ತಮ್ಮಶೆಟ್ಟಿಯ ಮಗಳು, ತಂದೆಯ ಹೆಸರಿಲ್ಲ. ದೇವಕವಿ ದೇವಾಂಗ ಕುಲ ಸಂಜಾತ ಬ್ರಹ್ಮಾಂಡ ಪುರಾಣದಲ್ಲಿರುವ ವಸ್ತ್ರ ನಿರ್ಮಾಣದ ಕಥೆಯನ್ನು ಮೂಲವಾಗಿಟ್ಟು ಕೊಂಡು ಸಂಸ್ಕೃತ ಭಾಷೆಯಲ್ಲಿ ದೇವಾಂಗ ಪುರಾಣವನ್ನು ಕನ್ನಡದಲ್ಲಿ ರಚಿಸಿದ ಮೊದಲನೇ ಕವಿಯಿವನು"[೯] ಎಂದು ಇಲ್ಲಿ ಹೇಳಲಾಗಿದೆ.

ಈ ಪುರಾಣದಲ್ಲಿ ಜೇಡರದಾಸಿಮಯ್ಯನದು ಏಳನೇ ಅವತಾರ ಇದಕ್ಕೂ ಮೊದಲು ಆರು ಅವತಾರಗಳು ಬಂದು ಹೋಗುವವು. ಈ ಕಾವ್ಯವು ವಿರೂಪಾಕ್ಷ ದೇಶಿಕನ ಪುರಾಣದ ಕಥೆಯನ್ನೇ ಪ್ರಾರಂಭದಲ್ಲಿ ಹೋಲುತ್ತದೆ. ಆದರೂ ಕಥಾ ಹಂದರದ ನಡೆಯಲ್ಲಿ ಬದಲಾಗುತ್ತಾ ಸಾಗುತ್ತದೆ. ಕಾವ್ಯದಲ್ಲಿ ಮುಂದಿನಂತೆ ಕಥೆ ಪ್ರಾರಂಭವಾಗುತ್ತದೆ. ಗಂಗಾತೀರದ ಮಳಲು ಪ್ರದೇಶದಲ್ಲಿ ಸೇರಿದ ಎಲ್ಲಾ ಮುನಿಗಳು ಕ್ಷೇಮೇಂದ್ರ ಮುನಿಯನ್ನು ಒಂದು ಕಥೆಯನ್ನು ಹೇಳು ಎಂದು ಕೇಳುವರು. ಆಗ ಆ ಮುನಿಯು ಪಿತಾಮಹನು ನಾರದ ಮುನಿಗೆ ಹೇಳಿದ ಕಥೆಯನ್ನು ಹೇಳುವನು. ಅದೇ ವಸ್ತ್ರದಾತನಾದ ದೇವಾಂಗನ ಚರಿತ್ರೆಯಾಗಿದೆ. ಶಿವನು ಒಡ್ಡೋಲಗದಲ್ಲಿರಲು ಕೈಲಾಸದಲ್ಲಿ ಬಟ್ಟೆ ಇಲ್ಲದೆ ನಗ್ನರಾದ ದೇವತೆಗಳೆಲ್ಲರೂ ಲಜ್ಜೆಯಿಂದ ಶಿವನಲ್ಲಿ ವಸ್ತ್ರ ನಿರ್ಮಾತೃ ವಿಭೂತಿ ಪುರುಷನನ್ನು ದಯಪಾಲಿಸು ಎಂದು ಬೇಡುವರು. ಆಗ ಶಿವನ ಅಂಗದಿಂದ ದೇವಾಂಗನು ಜನಿಸಿದನು. ಶಿವನಾದಿಯಾಗಿ ಎಲ್ಲ ಸುರ ಅಸುರರಿಗೆ ಮಾನವರಿಗೆ ವಸ್ತ್ರನಿರ್ಮಿಸಿ ಕೊಡುವನು ಇದು ಆತನ ಮೊದಲ ಅವತಾರ ಎಂದು ಹೇಳಲಾಗಿದೆ. ಇನ್ನು ಎರಡನೇ ಜನ್ಮ ವಿದ್ಯಾಧರನದು. ಇಲ್ಲಿ ಶಾಂಡಿಲ್ಯಮುನಿಯ ಮಗನು ದೇವಾಂಗ ಅವತಾರದಲ್ಲಿ ದೇವಾಂಗ ವಸ್ತ್ರಗಳನ್ನು ನೇಯ್ದು ಜಗತ್ತಿಗೆ ನೀಡಿದಂತೆ ವಿದ್ಯಾಧರನು ಶಾಸ್ತ್ರಗಳನ್ನು ಸುಯ್ದು ಕೊಡುತ್ತಾನೆ. ಗಜಶಾಸ್ತ್ರ ಹರಿಶಾಸ್ತ್ರ, ನರಶಾಸ್ತ್ರ, ವೈಧ್ಯಶಾಸ್ತ್ರ ಮೊದಲಾದ ಕೃತಿಗಳೊಂದಿಗೆ ಪುರಾಣಗಳನ್ನು ಬರೆದಿರುವುದಾಗಿ ಈ ಕೃತಿಯಲ್ಲಿ ಹೇಳಲಾಗಿದೆ. ಮೂರನೇ ಜನ್ಮದಲ್ಲಿ ವಿದ್ಯಾಧರನೇ ಪುಷ್ಪದತ್ತನಾಗಿ ಮರುಹುಟ್ಟು ಪಡೆಯುತ್ತಾನೆ. ಇಲ್ಲಿ ಜಗತ್ತಿಗೆ ವಿತರಿಸುವ ವಸ್ತು ಪರಿಪರಿಯ ಪುಷ್ಪಗಳು. ಈ ಜನ್ಮದಲ್ಲಿ ಪುಷ್ಪ ಸಮರ್ಪಣಾ ವ್ರತವನ್ನು ಕೈಗೊಂಡು ಪರಮಾತ್ಮನನ್ನು ಸಂತೃಪ್ತಿಗೊಳಿಸುತ್ತಾನೆ.

ಒಮ್ಮೆ ಏಣಾಂಕಧರನು ಏಕಾಂತದಲ್ಲಿ ತನ್ನ ಪತ್ನಿ ಗಿರಿಜೆಗೆ ಕಥೆ ಹೇಳುತ್ತಿದ್ದಾಗ, ಪುಷ್ಪದತ್ತನು ಕೇಳಿಸಿಕೊಳ್ಳುತ್ತಾನೆ. ಗುಪ್ತವಾಗಿ ಕೇಳಿಸಿಕೊಂಡ ತಪ್ಪಿಗೆ ಶಿವನ ಶಾಪಕ್ಕೆ ಗುರಿಯಾಗಿ ಬೇತಾಳನಾಗಿ ಹುಟ್ಟುತ್ತಾನೆ. ಆತನು ಹುಟ್ಟಿದ ಪ್ರದೇಶ ಉಜ್ಜಯನಿಯ ವನ ಪ್ರದೇಶ ಅಲ್ಲಿಯೇ ಹಿರಿದಾದ ವಟವೃಕ್ಷದಲ್ಲಿ ವಾಸವಾಗಿರುತ್ತಾನೆ. ಇತ್ತ ವಿಕ್ರಮಾದಿತ್ಯನಿಂದ ಪುಷ್ಪದತ್ತನ ಪತ್ನಿ ಹಗಲು ಚಿಗಿರಿಯಾಗಿ ರಾತ್ರಿ ಗಂಧರ್ವ ಕನ್ನೆಯಾಗಿ ಇರುವಂತೆ ಶಾಪಪಡೆದಿದ್ದು, ಶಾಪ ವಿಮೋಚನೆಯ ಕುರುಹು ಪಡೆದ ಆಕೆ ಬೇತಾಳನಿದ್ದ ವನಕ್ಕೆ ಬರುತ್ತಾಳೆ. ಈ ನಡುವೆ ಬೇತಾಳನು ಜಗತ್ತಿಗೆ ಮಲ್ಲ ವಿದ್ಯೆಯನ್ನು ಬೋಧಿಸುತ್ತಾನೆ. ಚಂದ್ರಗುಪ್ತರಾಜನ ಮಗಳು ಮಲ್ಲಿಕಾದೇವಿ ಮತ್ತು ಅವಳ ಪತಿ ಗೋವಿಂದ ಭಗವಾನ್ ಇವರಿಗೆ ಮಗನಾಗಿ ವಿಕ್ರಮನು ಜನ್ಮ ತಾಳುವನು. ಮೊದಲೇ ನಿರ್ಧರಿತವಾದಂತೆ ಬೇತಾಳ ದಂಪತಿಗಳು ಶಾಪದಿಂದ ವಿಮೋಚಿತರಾಗುತ್ತಾರೆ. ನಂತರದ ಜನ್ಮ ವರರುಚಿ ಅವತಾರ. ಪುರಾಣದಲ್ಲಿ ಹೇಳಿರುವಂತೆ

ವರುಚಿಯ ತಂದೆ ದೇವಣಾರ್ಯ. ತಾಯಿಯ ಬಗ್ಗೆ ಹೇಳಿಲ್ಲ ಸ್ಥಳ ಪೈಠಾಣಪುರ ಈತನು ವ್ಯಾಕರಣ ಶಾಸ್ತ್ರಗಳನ್ನು ವಿಶ್ವದಲ್ಲಿ ಹರಡಿದನು.

ಪರಮೇಶ್ವರನ ಅನುಜ್ಞದಂತೆ ಈತನು ಧಾರನಗರದ ಭೋಜರಾಜನ ಆಸ್ಥಾನ ಕವಿಯಾಗಿದ್ದು, ಒಮ್ಮೆ ವಿದ್ಯಾವತಿಯು, ಜ್ಞಾನ ಸಂಪನ್ನಳು ಆದ ಕಲಾವತಿಯ ಸವಾಲನ್ನು ಸ್ವೀಕರಿಸಿ ಪಾಣಿಗ್ರಹಣ ಮಾಡಿಕೊಳ್ಳಲು ಮುಂದಾದನು. ಆಕೆ ಆತನನ್ನು ತಿರಸ್ಕರಿಸಲು, ಕುರಿಕಾಯುವವನನ್ನು ವಿದ್ವಾಂಸ ನೆಂದು ಹೇಳಿ ಆಕೆಗೆ ವಿವಾಹ ಮಾಡಿಸಿದ ಪ್ರಸಂಗ ಪುರಾಣದಲ್ಲಿ ದೊರೆಯುತ್ತದೆ. ಈತನು ಭೋಜರಾಜನ ಆಸ್ಥಾನದಲ್ಲಿ ಕೋಶಾಧಿಕಾರಿಯಾಗಿಯೂ ಕಾರ್ಯ ನಿರ್ವಹಿಸುತ್ತಿದ್ದಂತೆ ಈ ಪುರಾಣ ತಿಳಿಸುತ್ತದೆ.

ವರರುಚಿಯ ಅವತಾರದ ನಂತರ ದೇವಸಾಲಿಯಾಗಿ ಹುಟ್ಟುವನು. ದೇವಸಾಲಿಯ ತಂದೆ ಬಲ್ಲಾಲ, ತಾಯಿ ಸುವ್ರತಿ, ಜನ್ಮನಾಮ ದೇವಣಾರ್ಯ ಇತರ ಜನ್ಮಗಳಲ್ಲಿಯಂತೆಯೇ ಈ ಅವತಾರದಲ್ಲಿಯೂ ಈತನು ಜಗತ್ತಿಗೆ ಶಿವಸಾಲಿ, ಸಾಮಸಾಲಿ, ಬಿಲ್ಸಾಲಿ, ಪುಟ್ಟಸಾಲಿ, ಎಂಬ ಮುಂತಾದ ಪಂಗಡಗಳನ್ನು ನಿರ್ಮಿಸಿದನು. ಆದ್ದರಿಂದಲೇ ದೇವಣಾರ್ಯನು ದೇವಸಾಲಿ ಎಂದು ಹೆಸರಾದನು. ಈ ಅವತಾರದಲ್ಲಿ ಈತನು ವಿವಾಹವಾಗದೆ ಮಹಾಯೋಗಿಯಾಗಿ ಬದುಕಿ ಬಾಳುವನು.

ನಂತರದ ಜನ್ಮವೇ ಜೇಡರದಾಸಿಮಯ್ಯನದು. ಇದು ದೇವಾಂಗನ ಏಳನೇ ಅವತಾರ. ಈತ ಮುದನೂರಿನಲ್ಲಿ ಜನಿಸುತ್ತಾನೆ. ತಂದೆ-ತಾಯಿಗಳ ಹೆಸರಿಲ್ಲ ಈತನು ದುಗ್ಗಳೆಯನ್ನು ವಿವಾಹವಾಗುತ್ತಾನೆ. ಈತನ ಕಾಯಕ ಬಟ್ಟೆ ನೇಯುವುದು. ಇಲ್ಲಿ ಜೇಡರದಾಸಿಮಯ್ಯನು ಶಿವನಿಂದ ತವನಿಧಿ ಪಡೆಯುವನು. ಸುಗ್ಗಲೆ ಈತನ ಶಿಷ್ಯೆ. ದೇಸಿಂಗ ಬಲ್ಲಾಳನಿಗೆ ಶಿವದೀಕ್ಷೆ ಕೊಟ್ಟು ಜೈನರನ್ನು, ಬೌದ್ಧರನ್ನು, ಜಯಿಸಿ ಶಿವಮತಕ್ಕೆ ಸೇರಿಸುವನು. ರಾಮನಾಥನ ಅನುಗ್ರಹದಿಂದ ಜೇಡರದಾಸಿಮಯ್ಯ ದಂಪತಿಗಳು "ರಾಮಯ್ಯ" ಎಂಬ ಮಗುವನ್ನು ಪಡೆದು ಸುಖದಿಂದಿರುವರು ಎಂಬ ಹಲವು ವಿವರಗಳಿವೆ. ಈ ಕಾವ್ಯದ ಪ್ರಧಾನ ಉದ್ದೇಶ ಎಲ್ಲ ಜನ್ಮಗಳಲ್ಲೂ ಅವತಾರಿಯಾದ ದೇವಾಂಗನು ಲೋಕಕ್ಕೆ ಏನಾನಾದರೂ ನೀಡುವುದಾಗಿದೆ. ಲೋಕ ಕೊಡುಗೆಯಾಗಿ ವಸ್ತ್ರ, ಪುಷ್ಪ, ಶಾಸ್ತ್ರಗಳು ಮೊದಲಾದವುಗಳನ್ನು ನೀಡಿದ್ದಾನೆ.

## ೫.೩. ರಾಘವಾಂಕನದೆನ್ನಲಾದ ದೇವಾಂಗ ದಾಸಿಮಯ್ಯನ ಪುರಾಣ

ಮೈಸೂರು ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗದಲ್ಲಿ ೩೦೯ ನಂಬರಿನಡಿಯಲ್ಲಿ ನಮೂದಿತವಾದ ದೇವಾಂಗ ದಾಸಿಮಯ್ಯನ ಪುರಾಣ ಎಂಬ ಹಸ್ತಪ್ರತಿಯೂ ದಾಸಿಮಯ್ಯ

ಪ್ರಶಸ್ತಿಯಲ್ಲಿ ಡಿ.ಎಲ್. ನರಸಿಂಹಾಚಾರ್ಯರು ಉಲ್ಲೇಖಿಸಿರುವ ಹಸ್ತಪ್ರತಿಯಲ್ಲಿನ ಕಥೆಯೂ ಒಂದೇ ಎಂದು ಭಾವಿಸಲಾಗಿದೆ. ಈಗ ಈ ಹಸ್ತಪ್ರತಿ ಮೈಸೂರು ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗದಲ್ಲಿ ಉಪಲಬ್ದವಿಲ್ಲ. ಈ ಕೃತಿಯು ೭ ಸಂಧಿಗಳಿಂದ ಕೂಡಿದ್ದು ೧೭೦೭ ಪದ್ಯಗಳನ್ನು ಒಳಗೊಂಡಿದೆ. ಕೃತಿಯು ದೇವಾಂಗ ಪುಣ್ಯಚಾರಿತ್ರ್ಯ ಎಂಬ ಹೆಸರಿನಿಂದ ರಚಿತಗೊಂಡಿದ್ದು, ಕರ್ತೃ ಹಂಪೆಯ ಹರಿದೇವನ ವರಸುತ ರಾಘವಾಂಕ ಎಂದು ಹೇಳಲಾಗಿದೆ. ಕೃತಿಯ ಮೊದಲ ಸಂಧಿ ದೇವತಾ ಸ್ತುತಿಗಳಿಂದ ಕೂಡಿದೆ ಎರಡನೇ ಸಂಧಿಯಿಂದ ಕಥೆ ಆರಂಭವಾಗುತ್ತದೆ. ಡಿ.ಎಲ್.ನರಸಿಂಹಾಚಾರ್ ಅವರು ಕೃತಿಯನ್ನು ಎರಡು ಭಾಗವಾಗಿ ವಿಂಗಡಿಸಿ[೧೦] ಅದರ ಪ್ರಾಧಾನ್ಯತೆಯನ್ನು ತಿಳಿಸುತ್ತಾರೆ. ಈ ಕೃತಿಯು ಸಾಂಗತ್ಯದಲ್ಲಿ ರಚಿಸಲ್ಪಟ್ಟಿದೆ.

ಈ ಕಾವ್ಯದಲ್ಲಿ ವಿವರಿಸಿರುವಂತೆ ಕಥೆ ಹೀಗಿದೆ. ಒಮ್ಮೆ ಶಿವನ ಸಭೆಯಲ್ಲಿ ದೇವತೆಗಳು ಋಷಿಗಳು ಪ್ರಥಮ ಗಣಗಳು ಎಲ್ಲರೂ ನೆರೆದಿರುತ್ತಾರೆ. ಅಂತಹ ಸಂದರ್ಭದಲ್ಲಿ ನಾರದನು ಶಿವನ ಸಭೆಗೆ ಬಂದು ವಸ್ತ್ರಕಾರರನ್ನು ಹುಡುಕುತ್ತಾ, ಸಕಲಭುವನಗಳಲ್ಲಿ ಸಂಚರಿಸುತ್ತಾ ಬಂದಿದ್ದನು. ಶಿವನನ್ನು ಕುರಿತು 'ಹರನೆ ನಿನ್ನೊಡ್ಡೋಲಗವು ಬತ್ತಲೆಯಿದೆ. ಕರುಣಿ ನೀ ನೋಡಲುಚಿತವೆ' ಎಂದು ಹೇಳಲಾಗಿ ನಾರದನಿಗೆ ಶಿವನು "ಏನಯ್ಯಾ ನಾರದ ಅಭಿಮಾನರಕ್ಷಿಪ ಜ್ಞಾನಿಗಳು ಯಾರಾದರೂ ಇದ್ದರೆ ಅವರನ್ನು ಕರೆದು ತರುವಂತೆ ಅಪ್ಪಣೆ ಮಾಡಿದನು. ಅದರಂತೆ ನಾರದನು ಸ್ವರ್ಗಾದಿಲೋಕಗಳನ್ನು ಹೊಕ್ಕು ನೋಡಿ ನವಖಂಡಗಳನ್ನು ಛಪ್ಪನ್ನ ದೇಶಗಳನ್ನು, ಅತಳಾದಿ ಸಪ್ತಪಾತಾಳ ಲೋಕಗಳನ್ನು ಸೇರಿ ವಸ್ತ್ರಕಾರನ್ನಾರನ್ನೂಕಾಣದೆ ಹರಿಬ್ರಹ್ಮರ ಸಭೆಗಳೂ ಬೆತ್ತಲೆ ಇರುವುದನ್ನು ಕಂಡು ಶಿವನ ಸಭೆಗೆ ಮರಳಿ ಬಂದನು".[೧೧]

ಜಗತ್ತಿನೆಲ್ಲೆಡೆ ನೋಡಿದರು ವಸ್ತ್ರಕಾರನಿಲ್ಲ ಜಗತ್ತಿನ ಉತ್ಪತ್ತಿ ಸ್ಥಿತಿಲಯಗಳಲ್ಲಿ ಕಾರಣನು ನೀನು ವಸ್ತ್ರಕಾರನನ್ನು ಬೇಗ ನಿರ್ಮಿಸಿ ಲೋಕದ ಅಭಿಮಾನವನ್ನು ಕಾಯಯ್ಯ ಎನಲು ಶಿವನು ಉಗ್ರತಪಸ್ಸನ್ನು ಮಾಡಿ ತನ್ನ ಪ್ರಾಣಲಿಂಗದಿಂದ ದೇವಾಂಗನನ್ನು ನಿರ್ಮಿಸಿದನು ದೇವಾಂಗನು ಶಿವನ ನಾಭಿಯಿಂದ ಜನಿಸಿದನು. ಶಂಕರಿಯು ದೇವಾಂಗನೊಡನೆ ಹುಟ್ಟಿದರಿಂದ ಸಹೋದರಿ ಎಂದು ಆಕೆಯನ್ನು ಕರೆಯಲಾಯಿತು. ಆತನಿಗೆ ದೇವಾಂಗ ಕುಸುಮಕೋದಂಡನೆಂಬ ಹೆಸರನ್ನು ನೀಡಲಾಯಿತು. ಆತನಿಗೆ ದೇವದತ್ತೆ ಮೊದಲಾದ ಸಪ್ತ ಸ್ತ್ರೀಯರೊಡನೆ ವಿವಾಹ ವಾಗುತ್ತದೆ. ಶಂಕರಿಯು ಯೋಗಿಣಿಯರನ್ನು ಸೃಷ್ಟಿಸಿದರೆ ದೇವಾಂಗನು ಬ್ರಹ್ಮಾಂಡಾದಿಗಳನ್ನು ಸೃಷ್ಟಿಸಿದನು ದೇವಾಂಗನಿಗೆ ಮೊದಲ ಪತ್ನಿ ದೇವದತ್ತೆಯಿಂದ ಆದಿರಘು ಜನಿಸಿದನು. ಕ್ರಮವಾಗಿ ಏಳು ಪತ್ನಿಯರಲ್ಲಿ ಹುಟ್ಟಿದ ಏಳು ಮಕ್ಕಳು, ಏಳು ಹಟಗಾರ ಕುಲಗಳಿಗೆ ದೀಕ್ಷಾ ವಿಧಾನವನ್ನು ನೆರವೇರಿಸಿದನು. ಒಂದು ದೀಕ್ಷೆಯನ್ನೊಲದ ಕುಲವಾಯಿತು ಅದಕ್ಕೆ ದೇವಾಂಗನು ಶಾಪವನ್ನು

ನೀಡಿದನು. ಉಳಿದ ಆರು ಸಾಲೆಯವರು ಶಿವಲಾಂಛನ ಪಡೆದರು. ಹಟಗಾರ ಕಾಯಕವನ್ನು ಪುತ್ರವೃಂದಕ್ಕೆ ನೀಡಿ ಬೇಕಾದ ಸಲಕರಣೆಗಳನ್ನು ಸಿದ್ಧಮಾಡಿಕೊಳ್ಳಲು ಪ್ರಯತ್ನಿಸಿದನು. ಆದರೆ ಕೆಲವು ಕೊರತೆಗಳಾದವು. ಆಗ ಶಿವನಲ್ಲಿಗೆ ಹೋಗಿ ವಸ್ತ್ರ ನಿರ್ಮಾಣಕ್ಕೆ ವಿಧ ವಿಧದ ಹಾಲು ನೂಲುಗಳು ಬೇಕಾಗಿದ್ದು ವಸ್ತ್ರನೇಯವುದಕ್ಕೆ ಬೇಕಾದ ಸಲಕರಣೆಗಳಿಲ್ಲ ಎಂದು ಬೇಡಿದರು. ಆಗ ಶಿವನು ಅವರಿಗೆ ವೈಕುಂಠಪುರದಲ್ಲಿ ವಿಷ್ಣುವಿನ ಕಮಲನಾಭಿಯೊಳಗಿನ ಅಪೂರ್ವಬಣ್ಣಗಳನ್ನು, ಹಾಲು ನೂಲುಗಳನ್ನು ಕೇಳಿ ತನ್ನಿ ಎಂದು ಕಳುಹಿಸಿದನು.

ಶಂಕರಿಯು ತನ್ನ ಸೇನೆಯೊಡನೆ ವೈಕುಂಠಕ್ಕೆ ದಂಡೆತ್ತಿ ಹೋಗಿ ಪೋಲಾಸುರ, ಮೊಳಗಾಸುರ, ಮೈಸಾಸುರರೆಂಬ ಮೂರು ರಾಕ್ಷಸರನ್ನು ಸೋಲಿಸಿದಳು ಅವರಿಂದ ನೀಲಿ ಬಣ್ಣಗಳು, ಕೆಂಪು ಚಕ್ಕೆಗಳು ಹುಟ್ಟಿದವು. ಮಾದಾರರೂ ಹೊಲೆಯರೂ ಪಡೆದ ವೃತ್ತಿಗಳ ಬಗ್ಗೆಯೂ, ಬಾದಾಮಿ ಅಮವಾಸೆಯು ಹುಟ್ಟಿದ್ದು, ಚೌಡೇಶ್ವರಿಗೆ ಹೊಲೆಯಿಂದ  ಪೂಜೆ ಯಾಗುವುದು ಮೊದಲಾದವುಗಳ ಬಗ್ಗೆಯೂ ಕಥೆಗಳು ಈ ಪ್ರಸಂಗದಲ್ಲಿ ಬರುತ್ತವೆ.  ಮೈಸಾಸುರ ನನ್ನು ಕೊಂದಿದ್ದರಿಂದ ಅವನ ಸಪ್ತಧಾತುಗಳಿಂದ ಹಲವು ವಸ್ತುಗಳು ಹುಟ್ಟುತ್ತವೆ. ನಂತರ ದೇವಾಂಗ ಮತ್ತು ಶಂಕರಿಯರು ವಿಷ್ಣುವಿನ ಬಳಿ ಆರು ಬಗೆಯ ನೂಲಿನ ಬೀಜಗಳನ್ನು ಪಡೆದು, ಅದರಿಂದ ೭೮ ಬಣ್ಣಗಳನ್ನು ನಿರ್ಮಿಸಿದರು. ಸಚರಾಚರ ಪ್ರಪಂಚಕ್ಕೆಲ್ಲ ವಸ್ತ್ರವನ್ನು ಹಂಚಿದರು. ಇದರಿಂದ ಸಂತೋಷಗೊಂಡ ಶಿವನು ತವನಿಧಿಯನ್ನು ನೀಡಿ ದಶಪುರುಷಗಳನ್ನು ದೇವಾಂಗನಿಗೆ ಕೊಟ್ಟನು. ಹರಿ ಸುರರಿಂದ ಪಟ್ಟಾಭಿಷೇಕವಾಗಿ ಮಾನಂಗ, ದೇವಾಂಗ, ಸರ್ವಾಂಗ, ವಿಶ್ವಂಗಗಳೆಂಬ ೪ ಹೆಸರುಗಳನ್ನು ಪಡೆದನು.

ದೇವಾಂಗ ಬ್ರಹ್ಮನಿಗೆ ರಾಣಿ ಬೊಪ್ಪಾಜಿ. ಹೀಗಿರುವಾಗ ೧೪ ಲೋಕಗಳಿಗೆ ಹನ್ನೆರಡು ವರ್ಷಗಳ ಘೋರ ಕ್ಷಾಮ ಒದಗಿತು. ಆಗ ದೇವಾಂಗ ಭಗೀರಥ ಗಂಗೆಯನ್ನು ತಂದು ಜನರನ್ನು ರಕ್ಷಿಸುತ್ತಾನೆ. ಇದರಿಂದ ದೇವಾಂಗನನ್ನು ಪರಶಿವನು ಮೆಚ್ಚಿ ನಾಲ್ಕು ಅವತಾರಗಳಾದ ಮೇಲೆ ಐದನೇ ಅವತಾರದಲ್ಲಿ ದಾಸಯ್ಯನಾಗಿ ಭೂಲೋಕದಲ್ಲಿ (ಮರ್ತ್ಯಲೋಕ) ಹುಟ್ಟು ಎಂಬ ವರವನ್ನು ನೀಡಿದನು. ಆ ನಾಲ್ಕು ಅವತಾರಗಳೇ ಮಾನಂಗ, ದೇವಾಂಗ, ಸರ್ವಾಂಗ, ವಿಶ್ವಂಗಗಳು.

ಇಲ್ಲಿಂದ ಮುಂದೆ ಮುದನೂರಿನ ದಾಸಿಮಯ್ಯನ ಕಥೆ ಪ್ರಾರಂಭವಾಗುತ್ತದೆ. ಅಭಿನವ ಕೈಲಾಸ ಎಂಬ ಹೆಸರನ್ನು ಪಡೆದ ಮುದನೂರಿನಲ್ಲಿ ರಾಮಯ್ಯನ ಸ್ಥಾನದಲ್ಲಿ ಜನಿಸಬೇಕೆಂದು ನುಡಿದು ಪರಶಿವನು ಕಳಿಸುತ್ತಾನೆ. ಆ ಹೊತ್ತಿಗಾಗಲೇ ಈ ಕಡೆ ಕಲ್ಯಾಣದಲ್ಲಿ ಶಿವನ ದ್ವಾರಪಾಲಕ ಸಿಲಾಮುನಿ ವೃಷಭನನ್ನು ಹೊಡೆಯಲು ಹರನಿತ್ತ ಶಾಪಕ್ಕೆ ಚಾಲುಕ್ಯ ರಾಜನ

ಗರ್ಭದಲ್ಲಿ ಬಿಜ್ಜಳನಾಗಿ ಹುಟ್ಟಿದನು. ವೃಷಭನು ಇಂಗಳೇಶ್ವರ ಭಾಗವಾಡಿಯ ಮಾದಿರಾಜನಿಗೆ ಮತ್ತು ಮಾದಲಾಂಬಿಕೆಗೆ ಮಗನಾಗಿ ಬಸವಣ್ಣನಾಗಿ ಜನಿಸಿದನು. ಪಾರ್ವತಿಯು ಅಕ್ಕ ನಾಗಾಯಿಯಾಗಿ ಜನಿಸಿದಳು. ಹೀಗೆ ಮಮಕಾರ ಮತ್ತು ಮೋಹಿನಿಗೆ ಕಾಮಲತೆಯೂ, ನಿರಹಂಕಾರ-ಸುಜ್ಞಾನಿಗೆ ಅಲ್ಲಮಪ್ರಭು (ನಿರ್ಮಾಯಗಣೇಶ್ವರ), ಉಪಮನ್ಯು ಚನ್ನಯ್ಯನಾಗಿ, ಅಕ್ಕನಾಗಮ್ಮನ ಮಗನಾಗಿ ಚೆನ್ನಬಸವನು ಹುಟ್ಟಿದನು. ಏಳುನೂರ ಎಪ್ಪತ್ತು ಅಮರ ಗಣಂಗಳು ರುದ್ರಗಣಂಗಳು ಇತರೆಡೆಗಳಲ್ಲಿ ಹುಟ್ಟಿ ಕಲ್ಯಾಣಕ್ಕೆ ಬಂದು ಚನ್ನಬಸವೇಶನ ಆಜ್ಞೆಯಲ್ಲಿ ಇದ್ದರು. ಬಸವಣ್ಣನು ಮಧುವರಸ ಓದಲಾಗದ ಒಂದು ರಜತಲಿಪಿಯನ್ನು ಓದಿ ಬಿಜ್ಜಳನಿಂದ ಮುದ್ರೆಯುಂಗುರ ಪಡೆದು ದಂಡನಾಯಕನಾದನು.

ಇಂತಹ ಸಮಯದಲ್ಲಿ ದೇವಾಂಗನು ಕಲ್ಯಾಣ ನಗರಿ (ಪ್ರದೇಶ) ಯಲ್ಲಿ ಶಂಕರಿ ಮತ್ತು ಕಾಮಯ್ಯರಿಗೆ ಪುತ್ರನಾಗಿ ಜನಿಸುತ್ತಾನೆ. ಬಸವ ದಂಡೇಶನು ಮಗುವಿಗೆ ದೇವರದಾಸಿಮಯ್ಯನೆಂದು ನಾಮಕರಣ ಮಾಡುತ್ತಾನೆ ಅಲ್ಲಮನು ಸಂಚರಿಸುತ್ತಾ ಗೊಗ್ಗಯ್ಯನಿಗೆ ಬೋಧಿಸಿ ಅನಿಮಿಷನಲ್ಲಿಗೆ ಬಂದು ಅಲ್ಲಿ ಅವನನ್ನು ಕೊಂಡಾಡಿ ಸೊನ್ನಲಿಗೆಗೆ ಬಂದು ಅಲ್ಲಿ ಸಿದ್ಧರಾಮನ ಅಹಂ ಅನ್ನು ಕರಗಿಸಿ ಸಿದ್ದರಾಮನೊಡನೆ ಕಲ್ಯಾಣ ಪುರಕ್ಕೆ ಬಂದು ದಾಸಿಮಯ್ಯನನ್ನು ಕಂಡು ದೀಕ್ಷೆ ನೀಡಿ ಹೀಗೆ ಹೇಳುತ್ತಾನೆ.

ಹಿರಿಯಾಗ್ರರಗಳ ಗೊಬ್ಬರದ ವಾಸವು
ಹಿರಿದಾದ ಕ್ಷೇತ್ರ ಗೇರಿಯಲಿ ।
ಫರಮಶೀವೈಕ್ತ ಮಲ್ಲಯ್ಯನ ಮಹದೇವಿ
ಶರೀರ ದಂಪತಿಯ ಗರ್ಭದಲಿ।
ದುಗ್ಗಳಾಂಬಿಕೆಯು ಜನಿಸಿ೧೨

ಶಿವಭಕ್ತಿ ಮೆರೆಯುತ್ತಾಳೆ, ಅವಳನ್ನು ವಿವಾಹವಾಗಿ ಸೇವೆಯಲ್ಲಿ ತೊಡಗು ಎಂದು ಹೇಳಿ ಹೊರಟನು ಅದರಂತೆ ದಾಸಿಮಯ್ಯನು ಹೊರಟು ಊರೂರು ಅಲೆಯುತ್ತಾ ಗೊಬ್ಬೂರಿಗೆ ಬರುತ್ತಾನೆ. ಆ ಊರು ವಿಪ್ರರು ಹೆಚ್ಚಿರುವ ಊರು. ಅಲ್ಲಿ ವಾಮನ ಋಷಿಯ ಮಠಕ್ಕೆ ಬಂದು, ಅಲ್ಲಿ ತುಂಡುಲವನ್ನು ತೋರಿ ಇದರಿಂದ ಅನ್ನಮಾಡಿ ನೈವೇದ್ಯಕ್ಕಣಿ ಮಾಡುವ ಕನ್ಯೆ ಎಲ್ಲಿದ್ದಾಳೆ ಎನಲು ಮುನಿಯು ಮನಸ್ಸಿನಲ್ಲಿಯೇ ಧ್ಯಾನಿಸಿ ಶಿವಪುರದಲಿರುವಳೆಂದು ತಿಳಿದು ದಾಸಿಮಯ್ಯನೊಂದಿಗೆ ಆತನು ಹೊರಟು ಆಕೆಯ ಮನೆಗೆ ಬಂದರು. ದುಗ್ಗಳೆ ಹಾಗೂ ತಂದೆ ಮಲ್ಲಯ್ಯ ಅವರಿಗೆ ಆತಿಥ್ಯ ಮಾಡಲು ವಾಮನ ಮುನಿ ಅಲ್ಲಿನ ವಿಪ್ರರಿಗಂಜಿ ಹಿಂತಿರುಗಿದನು. ಆಗ ದಾಸಿಮಯ್ಯನ ಕಂಡು ದುಗ್ಗಳೆ

ಗೋರೆಗಲ್ಲುಗಳ ನುಚ್ಚಿನ ತುಂಡುಲಗಳೀಯೇ
ನಾರಿ ಮುಂಜೆರ ಗೋಡ್ಡಿ ಪಿಡಿದೂ।
ಚಾರು ಶ್ರೀ ಚರಣಕೆ ನಮಿಸಿ ದಾಸಿಮಯ್ಯನ
ಪೂರೈಪ ಪಾದೋದಕವನು ॥೧೩

ತೆಗೆದುಕೊಂಡು ತನ್ನ ಇಷ್ಟಲಿಂಗಕ್ಕೆ ಎರೆದು ಅದರಿಂದ ಬಂದ ಉದಕದಿಂದ ಅಡುಗೆ ಮಾಡಿದಳು. ದಾಸಿಮಯ್ಯ ತಂದ ಕಲ್ಲಿನ ಚೂರುಗಳಿಂದ ಅಡುಗೆ ಮಾಡಿದ್ದರಿಂದ ಆಕೆಯ ಅಡುಗೆ ಷಡುರಸಾನ್ನವಾಯಿತು ಎಂದು ಪುರಾಣದಲ್ಲಿ ಹೇಳಲಾಗಿದೆ. ನಂತರ ದಾಸಿಮಯ್ಯ ದುಗ್ಗಳೆಯರ ವಿವಾಹವಾಗುತ್ತದೆ. ಹೀಗೆ ಗುರುಚರ ಮೂರ್ತಿಗಳಿಗೆ ಸತ್ಕರಿಸುತ್ತಿರಲು ಒಮ್ಮೆ ಹರಿಯಜರುದ್ರರು 'ಸಂಸಾರ ಲೇಸೋ ಯೋಗ ಲೇಸೋ' ಎಂದು ಕೇಳಲು, ದಾಸಿಮಯ್ಯನು ದುಗ್ಗಳೆಗೆ ದೀಪ ತಾರೆನಲು ತಂದು ಕೊಟ್ಟಳು. ಅದನ್ನು ತೋರಿ ದಾಸಿಮಯ್ಯ ಅವರಿಗೆ ಸತಿಪತಿಗಳ ಭಕ್ತಿ ದಾಂಪತ್ಯದ ಕುರಿತು ಹೇಳುತ್ತಾನೆ.

ಗೊಬ್ಬೂರಿನಿಂದ ದಾಸದುಗ್ಗಳೆಯರು ಮುದನೂರಿಗೆ ಬಂದು ನೆಲೆಸುತ್ತಾರೆ. ಇಲ್ಲಿ ರಾಮಯ್ಯ ದೇವರ ದೇವಸ್ಥಾನದ ಹತ್ತಿರ ಮನೆಮಾಡಿಕೊಂಡು ನೆಲೆಸಿ ತ್ರಿಕಾಲದಲ್ಲಿ ಪೂಜಿಸುತ್ತಾ ಇರುತ್ತಿದ್ದರು. ಒಮ್ಮೆ ವಿಪ್ರರಿಗೂ ಮತ್ತು ದಾಸಿಮಯ್ಯನಿಗೂ ವಾದವಾಗಿ ನಾವು ಮುತ್ತು ರತ್ನ ಮಾಣಿಕದ ಪೂಜೆಯನ್ನು ಮಾಡಿದೆವು ನೀನು ಮಾತ್ರ ಬಾಯಲ್ಲೇ ದೇವರೇ ಗತಿ ಎನ್ನುತ್ತಿ ಎಂದು ವಿಪ್ರರು ಹೇಳಲು, ದಾಸಿಮಯ್ಯ ಮನದಲ್ಲೇ ನೊಂದು ದೇವರು ರಾಮಯ್ಯನಿಗೆ 'ನಾವು ಮಾಡಿದ ತಪ್ಪ ನೀವು ಬಲ್ಲಿರಲ್ಲದೆ, ಈ ಮಾನವರರಿಯರು ನೋವನಾರಿಸಿಕೊಂಬೆ ಪುರವನಗಲಿ ನಾವು, ನೀತಣ್ಣಗೆ ಇರು ಎಂದೆನಲು ರಾಮಯ್ಯನು ಅವರೊಟ್ಟಿಗೆ ಹೊರಟನು, ಮೂವರು ಚಿಕ್ಕನೂರು ಪಟ್ಟಣಕ್ಕೆ ಬಂದು ನೆಲಸುತ್ತಾರೆ.

ಆಗ ಮುದನೂರಿನ ದೇವಾಲಯದ ಬಾಗಿಲ ಮುಚ್ಚಿತ್ತು. ಮುದನೂರು ಅನಿಷ್ಟದ ಬೀಡಾಯಿತು, ಇದಕ್ಕೆ ದೇವರದಾಸನೇ ಗತಿಯೆಂದು ಅಲ್ಲಿನ ಜನ ಕೂಡಿ ಕೊಂಡರು. ಈ ವಿಷಯ ದೊರೆಯನ್ನು ಮುಟ್ಟಿತು. ಕರಿಘಟೆಗಳಿಂದ ಶಿವಾಲಯದ ಕದವನ್ನು ತಳ್ಳಿಸಿದರೂ ತೆರೆಯದಾಯಿತು. 'ಆಗ ಆ ಪಟ್ಟಣದ ಶೆಟ್ಟಿ ಸಮೂಹವು ಹಾರುವರು ಚೇಷ್ಟೆಯನ್ನು ಹಿಯಾಳಿಸಿ ಸಂಗನ ಬಸವ, ಬಿಜ್ಜಳರಿಗೆ ಕೊಂಡೆಯ ಮಂಚಣ್ಣನು ಗದ್ದಗೆ ಉರುಹಿದ ಕಥೆಯನ್ನೂ, ಶಂಕರದಾಸಿ ಲೋಹದ ಪ್ರತಿಮೆಯನ್ನು ಸುಟ್ಟದನ್ನೂ, ಬೊಮ್ಮಯ್ಯನ ಕಥೆ, ಪಂಡಿತಾರಾಧ್ಯರನ್ನು ಪಂಡರಾಪುರದಿಂದ ಕಲ್ಯಾಣಕ್ಕೆ ತಂದುದನ್ನೂ ತಿಳಿಸಿದರು. ಆಗ ದಾಸಿಮಯ್ಯನನ್ನು ಮತ್ತೆ

ಕರೆತರಲು ಯೋಚಿಸಿದರು. ದಾಸಿಮಯ್ಯನು ಮತ್ತೆ ಊರಿಗೆ ಬರಲು, ಊರು ಮತ್ತೆ ಸುಭೀಕ್ಷವಾಯಿತು. ಹೀಗೆ ಮುದನೂರಿನಲ್ಲಿ ಸುಖದಿಂದಿದ್ದರು ಎಂದು ಕಥೆ ಸಮಾಪ್ತಿಯಾಗುತ್ತದೆ. ನಂತರ "ದೇವಾಂಗನ ಮಂಗಳಾರುತಿ ಪದ"[೧೪] ಎಂಬ ೯ ಸಾಂಗತ್ಯಗಳಿದ್ದು ದೇವಾಂಗನ ಕಥೆಯನ್ನು ಇದರಲ್ಲಿ ಹೇಳಲಾಗಿದೆ.

**ಕೃತಿಯನ್ನು ಕುರಿತ ಕೆಲವು ಪ್ರಮುಖ ಅಂಶಗಳು**

ಈ ಕೃತಿಯ ಕರ್ತೃ ರಾಘವಾಂಕನೆಂದು ಕೃತಿಯಲ್ಲಿನ ಹಲವು ಪದ್ಯಗಳನ್ನು ನೋಡಿದಾಗ ತಿಳಿಯುತ್ತದೆ. ಆದರೆ ಇದನ್ನು ಹರಿಹರನ ಶಿಷ್ಯ ರಾಘವಾಂಕನು ಬರೆದಿರಲಿಕ್ಕಿಲ್ಲ ಎಂಬ ಗೊಂದಲವು ಇದೆ. ಸ್ವತಃ ಕವಿಯೇ ಹಾಗೆ ಹೇಳಿಕೊಂಡಿರುವುದರಿಂದ ಇದರ ಕರ್ತೃ ರಾಘವಾಂಕನೆನ್ನದೇ ಬೇರೆ ವಿಧಿ ಇಲ್ಲ. ಬೇರೆ ಯಾರೋ ಬರೆದು ರಾಘವಾಂಕನ ಕೊರಳಿಗೆ ಕಟ್ಟಿರಬಹುದು ಎಂಬ ವಾದವೂ ಸಾಹಿತ್ಯ ವಲಯದಲ್ಲಿದೆ. ಪ್ರಸುತ ಪುರಾಣದಲ್ಲಿ ದೇವರದಾಸಿಮಯ್ಯನು ಜನಿಸುವ ಹೊತ್ತಿಗಾಗಲೇ ಅಲ್ಲಮ, ಬಸವ, ಚೆನ್ನಬಸವ, ಸಿದ್ಧರಾಮ ಮೊದಲಾದ ಎಲ್ಲ ಶರಣರ ಜನನವಾಗಿದ್ದು, ದೈವಾಂಶ ಹೊಂದಿ ಹುಟ್ಟಿದ ಮಗು ಎಂಬ ಕಾರಣದಿಂದ ಮಗುವಿನ ಜನನ ನಂತರ ಎಲ್ಲಾ ಶರಣರು ಮಗುವನ್ನು ನೋಡಲು ಬರುತ್ತಾರೆ. ಅಲ್ಲಮ, ಸಿದ್ಧರಾಮರು ಬಂದು ಮಗುವನ್ನು ನೋಡಿ ದೀಕ್ಷೆ ನೀಡಿದ ಪ್ರಸಂಗ ಬರುತ್ತದೆ. ಇದು ಒಂದು ರೀತಿಯ ದೈವೀ ಸಂಭೂತರಾದ ಎಲ್ಲ ಧರ್ಮ ನಿರ್ಮಾತೃಗಳ ಜನನವನ್ನು ಹೋಲುವಂತಿದೆ.

ಇಲ್ಲಿ ಹೇಳುವ ಕೆಲವು ಉಲ್ಲೇಖಗಳು "ಪರಶಿವನ ದ್ವಾರಪಾಲಕ ಚಾಲುಕ್ಯ ಬಿಜ್ಜಳನಾಗಿ ಹುಟ್ಟಿದ್ದು, ಬಸವನಿಗೆ ಕುಮಾರ(ಬಾಲ) ಸಂಗಯ್ಯನೆಂಬ ಮಗನಾಗಿದ್ದು, ನಾಗಲಾಂಬೆಯ ಗಂಡ ಶಿವಸ್ವಾಮಿ ಎಂಬುದು ಈ ಮೂರು ಅಂಶಗಳು ಸಿಂಗಿರಾಜ ಪುರಾಣದಂತರ್ಗವಾಗಿರುವುವು. ಇವು ಅದಕ್ಕಿಂತ ಹಿಂದಿನ ವೀರಶೈವ ಸಾಹಿತ್ಯದಲ್ಲಿ ಇರುವಂತೆ ನಮಗೆ ತಿಳಿದಿಲ್ಲ. ಆದ್ದರಿಂದ ಈ ಕೃತಿ ಸಿಂಗಿರಾಜ ಪುರಾಣ ಕಾಲದ ನಂತರ ರಚಿತವಾಗಿರಬೇಕು. ಸುಮಾರು ೧೫೦೦ ರಿಂದ ಈಚೆಗೆ"[೧೫] ಎಂದು ಡಿ.ಎಲ್. ನರಸಿಂಹಾಚಾರ್ಯರು ಅಭಿಪ್ರಾಯಿಸುತ್ತಾರೆ. ಅಂತೆಯೇ ಇಲ್ಲಿ ಬಂದಂತಹ ಕಥಾ ಭಾಗಗಳನ್ನಾಧರಿಸಿ ಈ ಅಭಿಪ್ರಾಯವನ್ನು ಒಪ್ಪಬಹುದು. ಹರಿಹರ ಮೊದಲಾದವರು ದೇವರ ದಾಸಿಮಯ್ಯನ ಬಗ್ಗೆ ಹೇಳಿದ ಹಲವು ಸನ್ನಿವೇಶ ಚಿತ್ರಣಗಳು ಇಲ್ಲಿ ವ್ಯತಿರಿಕ್ತವಾಗಿ ಮೂಡಿ ಬಂದಿವೆ. ಇದಕ್ಕೆ ಸಂಬಂಧಿಸಿದಂತೆ ಡಿ.ಎಲ್. ನರಸಿಂಹಾಚಾರ್ ಅವರು ಮೇಲಿನಂತೆ ಹಲವು ಆಧಾರಗಳನ್ನು ನೀಡುತ್ತಾರೆ.

ಕಥೆಯ ಪ್ರಧಾನ ಆಶಯ ದೇವಾಂಗ ಮುನಿಯ ಚರಿತ್ರೆ ಮತ್ತು ದೇವರದಾಸಿಮಯ್ಯನ ಚರಿತ್ರೆಯನ್ನು ನಿರೂಪಿಸುವುದು. ಇದಕ್ಕೆ ಪೂರಕವಾಗಿ ಹಲವು ಸನ್ನಿವೇಶಗಳನ್ನು ಚಿತ್ರಿಸಲಾಗಿದೆ. ದೇವರದಾಸಿಮಯ್ಯನಿಗೆ ತವನಿಧಿ (ಬೇರೆ ಪುರಾಣಗಳಲ್ಲಿರುವಂತೆ )ಯನ್ನು ಪರಶಿವ ನೀಡಿದ ಎಂಬ ಕಥೆಯು ಇಲ್ಲಿ ಭಿನ್ನವಾಗಿ ನಿರೂಪಿತವಾಗಿದೆ. ಈ ಪುರಾಣ ಕಾವ್ಯದಲ್ಲಿ ಶಿವನಿಂದ ತವನಿಧಿಯನ್ನು ಪಡೆದಾತ ದಾಸಿಮಯ್ಯನಲ್ಲ ಬದಲಾಗಿ ದೇವಾಂಗ. ಕಾವ್ಯದಲ್ಲಿ ಎಲ್ಲಿಯೂ ದಾಸಿಮಯ್ಯನ ತವನಿಧಿ ಪ್ರಸಂಗ ಬರುವುದಿಲ್ಲ. ದೇವಾಂಗನಿಗೆ ಇಲ್ಲಿ ಐದು ಜನ್ಮಗಳು ಮಾತ್ರ ಅಯ್ಯಪ್ಪ ಕವಿಯ ಪುರಾಣದಲ್ಲಿದ್ದಂತೆ ೭ ಜನ್ಮಗಳು (ಅವತಾರಗಳು) ಇಲ್ಲ. ದಾಸಿಮಯ್ಯ ದುಗ್ಗಳೆಯನ್ನು ಹುಡುಕ ಹೊರಟದ್ದು, ಗೊಬ್ಬೂರಿಗೆ ಬಂದು ಸೇರಿದ್ದು, ಅಲ್ಲಿ ವಾಮನ ಸಿಕ್ಕು ಶಿವಪುರವನ್ನು ಸೂಚಿಸಿದ ಪ್ರಸಂಗವಿದೆ. ದುಗ್ಗಳೆಯ ಊರು ಎಂದು ಕರೆಯುವ ರಾಯಚೂರಿನ ಗಬ್ಬೂರಿನ ಸುತ್ತ ೧೦ ಕೀ.ಮೀ ಅಂತರದಲ್ಲಿ ಶಿವಪುರ ಎಂಬ ಊರು ಇಲ್ಲ. ಮೇಲಾಗಿ ಇದು ವಿಪ್ರರಿರುವ ಊರು ಎಂದೇ ಉಲ್ಲೇಖಿತವಾಗಿದೆ. ಇಲ್ಲಿ ಎರಡು ಸಂಶಯಗಳು ಪ್ರಧಾನವಾಗುತ್ತವೆ. ರಾಯಚೂರಿನ ಗೊಬ್ಬೂರಿನಲ್ಲಿ ಶೈವ ಕುರುಹುಗಳು ದೊರೆಯುತ್ತವೆ. ಗೊಬ್ಬೂರಿನ ಒಂದು ಪ್ರದೇಶ ಶೈವಾರಾಧಕರದ್ದಾಗಿದ್ದು, ಇದನ್ನೇ ಶಿವಪುರ(ಅಗ್ರಹಾರವೆಂಬುದಕ್ಕೆ ಸಮಾನವಾದ ಶೈವರನೆಲೆ) ಎಂದಿರಬಹುದೇ ಎನ್ನುವುದು ಒಂದಾದರೆ, ಎರಡನೆಯದು ವಿಪ್ರರು ಪ್ರಧಾನವಾಗಿರುವ ಪ್ರದೇಶದಲ್ಲಿ ಶಿವಪುರವಿದ್ದಿರಬೇಕು ಎಂಬುದು. ಗೊಬ್ಬೂರನ್ನು ಅನುಲಕ್ಷಿಸಿದಾಗ ಈಗಲೂ ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿಪ್ರರು ಕಂಡುಬರುವುದರಿಂದ ಶಿವಪುರ ಸಂಸ್ಕೃತಿಯು ಇಲ್ಲಿತ್ತು ಎಂದು ಊಹಿಸಬಹುದು.

ಇತರ ಪುರಾಣಗಳಲ್ಲಿ ದಾಸಿಮಯ್ಯನಿಗೆ ದುಗ್ಗಳೆ ಮೆಚ್ಚುಗೆಯಾಗಿದ್ದು ಮಳಲಕ್ಕಿಯಿಂದ ಪಾಯಸ ತಯಾರಿಸಿದ್ದಕ್ಕಾಗಿ, ಆದರೆ ಈ ಪುರಾಣದಲ್ಲಿ ಕಲ್ಲಿನ ಚೂರುಗಳಿಂದ ದುಗ್ಗಳೆ ಅಡುಗೆ ಮಾಡಿ ಶರಣರಿಗೆ ಸಂತೃಪ್ತಿಯುಂಟುಮಾಡಿದಳು ಎಂದು ಬರುತ್ತದೆ. ಇಲ್ಲಿ ಗೋರಿಕಲ್ಲು ಎಂದರೆ ಸಣ್ಣಕಲ್ಲು, ಹರಳು ಎಂದರ್ಥ. ಇನ್ನೊಂದು ಅರ್ಥದಲ್ಲಿ ಗೋರೆ ಎಂದರೆ ನೆಲವನ್ನು ಸಮಮಾಡುವ ಉಪಕರಣ ಅಥವಾ ಹಲುಬೆ. ಇದರೊಂದಿಗೆ ಅಚ್ಚಿಗೆ ಹಾಕಿದ ಬೆಲ್ಲದಲ್ಲಿ ಗೋರುಮಣೆಯಿಂದ ತೆಗೆದ ಬೆಲ್ಲದ ಪುಡಿ ಎಂಬ ಅರ್ಥವೂ ಇದೆ. ಇಲ್ಲಿ ಕಲ್ಲಿನಿಂದ ಅಡುಗೆ ಮಾಡಿದಳು ಎನ್ನುವುದಕ್ಕಿಂತ ಹರಳುಗಳಿಂದ ಕೂಡಿದ ಪದಾರ್ಥದಿಂದ ಅಡುಗೆಮಾಡಿರಬಹುದಾಗಿ ಊಹಿಸಬಹುದು. ಇಲ್ಲವೇ ಗೋರುಮಣೆಯಿಂದ ತೆಗೆದ ಬೆಲ್ಲದ ಪುಡಿಯಿಂದ ಅಡುಗೆ ಮಾಡಿದಳು ಎಂದು ಇದನ್ನು ಗ್ರಹಿಸುವುದು ಸೂಕ್ತವೆನಿಸುತ್ತದೆ. ದುಗ್ಗಳೆ-ದಾಸಿಮಯ್ಯರು ವಿವಾಹದ ನಂತರ ಗೊಬ್ಬೂರಿನಲ್ಲಿಯೇ ವಾಸವಿದ್ದು ಕೆಲಕಾಲವಾದ ಮೇಲೆ ಮುದನೂರಿಗೆ ಬಂದು ನೆಲೆಸುತ್ತಾರೆ. ರಾಮನಾಥ ದೇವಾಲಯ ಬಾಗಿಲು ಹಾಕುವ ಪ್ರಸಂಗದಲ್ಲಿ ಸ್ವತಃ

ರಾಮಯ್ಯ ದಾಸಿಮಯ್ಯ ದುಗ್ಗಳೆ ಮೂರು ಜನ ಮುದನೂರನ್ನು ಬಿಟ್ಟು ಚಿಕ್ಕನೂರಿಗೆ ಹೋಗಿ ನೆಲೆಸುತ್ತಾರೆ. ರಾಮಯ್ಯನೇ ಗಾಡಿಯನ್ನು ನಡೆಸುತ್ತಾನೆ ಗಾಡಿಯ ಎಡದ ಅಚ್ಚು ಮುರಿಯಲು ದುಗ್ಗಳೆಯು ತನ್ನ ಕೈಬೆರಳನ್ನು ಅಡ್ಡ ಇಟ್ಟು ಗಾಡಿಯು ತೊಂದರೆ ಇಲ್ಲದಂತೆ ಮುನ್ನಡೆಯಲು ಅನುವಾಗುತ್ತಾಳೆ. ಈ ಸನ್ನಿವೇಶ ಚಿತ್ರಣ ಮುನ್ನಿನ ಕಾವ್ಯಗಳಲ್ಲಿ ಎಲ್ಲಿಯೂ ಕಂಡು ಬರುವುದಿಲ್ಲ. ರಾಮನಾಥ ದೇವಾಲಯ ಬಾಗಿಲು ಹಾಕಿದಾಗ ರಾಜನ ಓಲಗವನ್ನೊಳಗೊಂಡು ಸಂಗನ ಬಸವ ಮತ್ತು ಬಿಜ್ಜಳನಿಗೆ ಕೊಂಡೆಯ ಮಂಚಣ್ಣ ಹಾಗೂ ಶಂಕರದಾಸಿಮಯ್ಯ ಮೊದಲಾದವರ ಕಥೆಯನ್ನು ಹೇಳಲಾಗುತ್ತದೆ.

ಈ ಒಂದು ಅಂಶ ಇಲ್ಲಿ ಪ್ರಧಾನವಾಗಬಹುದು ಬಸವ, ಬಿಜ್ಜಳ, ದಾಸಿಮಯ್ಯರು ಸಮಕಾಲೀನರಾಗಿದ್ದು, ಶಂಕರದಾಸಿಮಯ್ಯ ಇವರೆಲ್ಲರಿಗಿಂತ ಹಿರಿಯನಿರಬಹುದು ಆದರೆ ಇದೇ ಕಾವ್ಯದ ಮುನ್ನಿನ ಸಂಧಿಯಲ್ಲಿ ಬಸವ ಬಿಜ್ಜಳ ಅಲ್ಲಮ ಮೊದಲಾದವರು ಜನಿಸಿ ಪ್ರೌಢಾವಸ್ಥೆಗೆ ಬಂದ ನಂತರ ದಾಸಿಮಯ್ಯ ಜನಿಸುತ್ತಾನೆ ಎಂಬ ವಿಷಯದ ಪ್ರಸ್ತಾಪವಿದೆ. ಆದ್ದರಿಂದ ಈ ಕೃತಿಯ ರಚನೆ ಹಾಗೂ ವಿಷಯ ವಿವರಣೆಯ ದೃಷ್ಟಿಯಿಂದ ಹಲವು ಗೊಂದಲಗಳು ಏರ್ಪಡಬಹುದೇ ಹೊರತು ನಿರ್ಣಯ ಕಷ್ಟಸಾಧ್ಯ. ಇಲ್ಲಿ ಶರಣರ ಸಮೂಹ ಅಥವಾ ಬಸವಾದಿಗಳಿಂದ ಕೂಡಿದೊಂದು ಶರಣ ಪಂಥ ನಿರ್ಮಾಣದ ನಂತರ ದಾಸಿಮಯ್ಯನ ಜನನವಾಗುವುದು. ಇದು ಕವಿಯು ಬಸವಣ್ಣನೇ ದಾಸಿಮಯ್ಯನಿಗಿಂತಲೂ ಹಿರಿಯನೆಂದು ಭಾವಿಸಿದ್ದರಿಂದ ಸೃಷ್ಟಿಯಾದ ಗೊಂದಲವಿರಬಹುದು. ಇಲ್ಲವೇ ಕವಿಸೃಷ್ಟಿಯ ಕಲ್ಪನೇ ಆಗಿರಬಹುದು. ಇನ್ನು ಮುದನೂರು ಕಲ್ಯಾಣ ಸರಹದ್ದಿನಲ್ಲಿದ್ದಂತಹ ಊರು ಎಂಬ ಉಲ್ಲೇಖ ಈ ಕೃತಿಯಲ್ಲಿಯೇ ದೊರೆಯುತ್ತದೆ. ಬಿಜ್ಜಳ ಚಾಲುಕ್ಯ ರಾಜನ ಗರ್ಭದಲ್ಲಿ ಜನಿಸಿದಾತ ಎಂಬ ಹಲವಾರು ಗೊಂದಲಕರ ವಿಷಯಗಳು ಪ್ರಸ್ತಾಪಿಸಲ್ಪಟ್ಟಿವೆ. ದಾಸಿಮಯ್ಯನ ವೃತ್ತಾಂಶ ವಿವರಣೆಯಲ್ಲಿ ದಾಸಯ್ಯನ ಕುರಿತ ಪ್ರಮುಖ ಪ್ರಸಂಗಗಳು ದೊರೆಯುತ್ತವೆ. ಆದರೆ ತವನಿಧಿಯನ್ನು ಶಿವನು ದಾಸಿಮಯ್ಯನಿಗೆ ಅನುಗ್ರಹಿಸಿದ ಕಥೆ ಬರುವುದಿಲ್ಲ. ಕವಿಯು ಕಲ್ಯಾಣ ರಾಜ್ಯ ಹಾಗೂ ಅಲ್ಲಿ ನಡೆದ ಶರಣರ ಚಳುವಳಿಯನ್ನು ಒಂದು ಹಂತದ ದೂರದಿಂದ ಗ್ರಹಿಸಿ ಕಥೆಯನ್ನು ಕಟ್ಟಿದಂತೆ ಕಾಣುತ್ತದೆ. ಕಲ್ಯಾಣದಲ್ಲಿ ಎಲ್ಲ ಶರಣರು ಸೇರಿ ಭಕ್ತಿ ಹಾಗೂ ಸಾಮರಸ್ಯದಿಂದ ನಡೆದುಕೊಳ್ಳುವ ಒಂದು ಶರಣ ಕಲ್ಯಾಣದ ಚಿತ್ರಣವನ್ನು ಇಲ್ಲಿ ನೀಡುತ್ತಾನೆ. ಬಿಜ್ಜಳನನ್ನೊಳಗೊಂಡು ಅಲ್ಲಿನ ಎಲ್ಲ ಶಿವಶರಣರು ದೇವಾಂಶ ಸಂಭೂತರಾದ ೭೭೦ ಅಮರಗಣಂಗಳು, ರುದ್ರಗಣಂಗಳು ಭೂಲೋಕದಲ್ಲಿ ಜನ್ಮ ಪಡೆದು ಒಂದು ಸುಭೀಕ್ಷ ಕಲ್ಯಾಣ ರಾಜ್ಯದ ನಿರ್ಮಾಪಕರಾದರು ಎಂಬುದನ್ನು ಪ್ರತಿಪಾದಿಸುತ್ತಾನೆ.

## ೫.೪. ಮಹಾಂತದೇಶಿಕನ 'ಶಿವಶರಣ ವಿಳಾಸ'

ಶ್ರೀ ಮಹಾಂತ ದೇಶಿಕರು ಬೆಂಗಳೂರು ತಿಪ್ಪಶೆಟ್ಟಿ ಮಠದ ಅಧಿಪತಿಗಳಾಗಿದ್ದರು. ಇವರು ೧೯ನೇ ಶತಮಾನದ ಅಂತ್ಯ ಭಾಗದಲ್ಲಿದ್ದ ವೀರಶೈವ ಕವಿಗಳಲ್ಲಿ ಒಬ್ಬರು. ಶ್ರೀ ಮಹಾಂತ ದೇಶಿಕರು ರಚಿಸಿದ ಗ್ರಂಥಗಳು ರಾಜೇಶ್ವರ ಶತಕ, ರೇಣುಕಾಚಾರ್ಯ ಸ್ತೋತ್ರ ಅಂಬಾಸ್ತೋತ್ರ, ಸಿರಿಯಾಳ ಚರಿತ್ರೆ, ಸತ್ಯ ಹರಿಶ್ಚಂದ್ರ ರಾಯನ ಚರಿತ್ರೆ, ಗಂಗಾಧರ ಸ್ತೋತ್ರ, ಗೋಷ್ಟಕ ನಿರಾಳಗುರು ಸ್ತೋತ್ರ,[೧೫] ಮತ್ತು ಶಿವಶರಣ ವಿಲಾಸ. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಹಲವು ಪಂಡಿತರು ಕಾವ್ಯ ಪ್ರಿಯರನ್ನು ರಂಜಿಸುವ ಸಲುವಾಗಿ ಚಂಪೂ ಗ್ರಂಥಗಳನ್ನು ರಚಿಸಿದರು. ಆದರೆ ಅಂದಿನಿಂದೀಚೆಗೆ ಬಂದ ಕೆಲವು ಕವಿಗಳು ಅಂದಿನ ಜನ ಸಾಮಾನ್ಯರ ಮನಸ್ಸನ್ನು ಹಿಗ್ಗಿಸಬಲ್ಲ ಕನ್ನಡದ ಛಂದೋವೈವಿಧ್ಯವುಳ್ಳ ಯಕ್ಷಗಾನ ಗ್ರಂಥಗಳನ್ನು ಬರೆದರು. ಯಕ್ಷಗಾನ ಕೃತಿಗಳನ್ನು 'ಪಾಮರರ ಚಂಪೂ' ಕೃತಿಗಳೆನ್ನಬಹುದು. ಇಂತಹ "ಯಕ್ಷಗಾನ ಮಾರ್ಗವನ್ನು ಅನುಸರಿಸಿ ಬರೆದ ವೀರಶೈವ ಕೃತಿಗಳಲ್ಲಿ ಮುಖ್ಯವಾದವು ಚನ್ನಪ್ಪ ಕವಿಯ 'ಶರಣಲೀಲಾಮೃತ' ಮತ್ತು ಶ್ರೀ ಮಹಾಂತ ದೇಶಿಕರ 'ಶಿವಶರಣ ವಿಲಾಸ' ಕೃತಿಗಳು ಜನಪ್ರಿಯವಾದವು."[೧೬]

ಶಿವಶರಣ ವಿಲಾಸ ಯಕ್ಷಗಾನ ಶೈಲಿಯಲ್ಲಿದ್ದು, ಗಂಭೀರ ಬಂಧುರವಾಗಿ ರಚಿಸಲ್ಪಟ್ಟಿದೆ. ಸಂಸ್ಕೃತ ಹಾಗೂ ಕನ್ನಡವೆರಡನ್ನು ಬೆರೆಸಿದ ಶಬ್ದೋತ್ಪತ್ತಿ ಬಳಕೆ. ಸಹಜ ಕವಿತ್ವ ಕಾವ್ಯದ ವೈಶಿಷ್ಟ್ಯವಾಗಿದೆ. "ಶಿವಶರಣ ವಿಲಾಸ'ದಲ್ಲಿ ೨೫ ಸಂಧಿಗಳಿವೆ. ಒಟ್ಟು ೫೫೮೩ ಪದ್ಯಗಳಿವೆ. ಅಲ್ಲದೆ ೬೭೭ ವಚನ ಭಾಗಗಳಿವೆ. ಶರಣಲೀಲಾಮೃತದಂತೆಯೇ, ಇದರಲ್ಲಿಯೂ ೪೪ ಶಿವಶರಣರ ಕಥಾ ಸನ್ನಿವೇಶಗಳಿವೆ."[೧೭] ಶಂಕರದಾಸಿಮಯ್ಯ ಹಾಗೂ ದೇವರದಾಸಿಮಾರ್ಯರ ಕತೆಗಳೆರಡೂ ಈ ಕೃತಿಯಲ್ಲಿ ನಿರೂಪಿತವಾಗಿವೆ. ಶಿವಶರಣವಿಲಾಸದ ೧೬ನೇ ಸಂಧಿಯಲ್ಲಿ ದೇವರದಾಸಿಮಾರ್ಯರ ಕಥೆ ಇದೆ. 'ಷಟ್ತ್ರಣವ ಮತ್ರ ಕೋದಂಡ ಪರಮ', 'ಶಿವತತ್ವಾನುಭಾವಾಗ ಮಜ್ಜನೂ', 'ಪರವಾದಿ ಮದವಿಜಯ ಪ್ರಚಂಡ' ನೆನಿಸಿಕೊಂಡಿರುವ ದಾಸಿಮಾರ್ಯನು. ಶಿವಶರಣರ ರಾಜಹಂಸ, ಜನ, ಬುದ್ಧ, ಚಾರ್ವಾಕ ಭವಿಸಮಯ ಮಥನನೆನೆಸಿ ಕೊಂಡಾತನೂ, ಆದ

ದೋಷಾಮಯಾರಣ್ಯ ದಹನಾಗ್ನಿ ಶೌರ್ಯ
ಪಾಷಂಡರಸದಳನ ಗುರುದಾಸಿಮಾರ್ಯ.[೧೮]

ಈತನ ಸೇವೆಯಲ್ಲಿ ನಿರತಳಾದ ದೇಸಿಂಗರಾಯನ ಮಡದಿ ಜನಮತಸ್ಥಳಾದ ಸುಗ್ಗಲ ದೇವಿಯು ದಿನಾಲು ಶಿವ ಜಂಗಮ ಸೇವೆಯಲ್ಲಿರಲು, ದಾಸಿಮಯ್ಯನನ್ನು ಕರೆತಂದು ಮರ್ಯಾದೆ

ಮಾಡುತ್ತಿರಲು, ಪೊಟ್ಟಲಕೆರೆಯ ಜೈನಮುನಿಗಳು ಆಕೆಯನ್ನು ಓಲೈಸುತ್ತಾರೆ. ಆಕೆ ಕೇಳದಿದ್ದಾಗ ಆಕೆಯ ಪತಿ ದೇಸಿಂಗರಾಯನಿಗೆ ತಿಳಿಸಿದರು. ದೇಸಿಂಗರಾಯ ಪತ್ನಿಯನ್ನು ಕರೆಸಿ ಶೈವಗುರುವಿನ ಸೇವೆ ಒಳಿತಲ್ಲ ಅದನ್ನು ನಿಲ್ಲಿಸು ಎನಲು, ಅದಕ್ಕೆ ಬಲ್ಲವರು ಬೇಕಾದಲ್ಲಿ ಪರೀಕ್ಷಿಸಿಕೊಳ್ಳಿ ಎನ್ನುತ್ತಾಳೆ. ಒಂದು ಸುದಿನ ವಾದಗೋಷ್ಠಿಯನ್ನು ಕರೆಯಲಾಗುತ್ತದೆ. ವಿವಿಧ ಮತವಾದಿಗಳು ದಾಸಿಮಯ್ಯನೂ ಒಂದೆಡೆ ಸೇರುತ್ತಾರೆ. ದಾಸಿಮಯ್ಯನು ಅವರನ್ನು ಕುರಿತು 'ವೇದ ವೇದಾಂತ ಸಿದ್ಧಾಂತ ನ್ಯಾಯೋಪನಿಷದ್ವೈಶೇಷಿಕ ಮುಖ್ಯಾನೇಕ ಶಾಸ್ತ್ರ ವಾಗ್ವೃಷ ವಿಧಯುಕ್ತಾದಿಗಳಿಂದ ವಾದಿಸಿ ಪರವಾದಿಗಳನ್ನು ಖಂಡಿಸಿ ಶಿವನು

ಸರ್ವಸೋತ್ರಾಧಾರಜನು
ಸರ್ವಸಂಗತ್ಯಾಗಿಯಭವನು
ಸರ್ವಜೀವಾತ್ಮ ಪರಾತ್ಮ ಪರಾಪರಾನ್ವಿತನು !
ಸರ್ವತತ್ವಾನಂದಪೂರ್ಣನು
ಸರ್ವತಂತ್ರಾಸ್ಪದನು ಸತ್ಯನು
ಸರ್ವಕಾರಣನು ಸ್ವತಂತ್ರನು ಸದ್ಗುಣ ಪ್ರಭುವು[೧೯]

ಸಕಲಮುಂ ತಾನಾಗಿರುತ್ತವೆ
ಸಕಲಮಂ ಹೊಂದಿರುವ ನಿರ್ಗಣಿ
ಸಕಲವನು ಪುಟ್ಟಿಸುತ ಸಕಲದಿ ಪುಟ್ಟದಿರ್ದಭವ।
ಸಕಲನು ಕೌತುಕದಿ ನಡೆಸುತ
ಸಕಲದೊಳು ನಡೆಯದ ಸುಜಾಣನು
ಸಕಲವಳಿಯಲು ಸಕಲದೊಳು ತಾನಳಿಯದಿಹ ನಿತ್ಯ[೨೦]

ಎಂದು ಪ್ರತಿಪಾಸಿಸುತ್ತಾ, ಜೈನ ಮತವಾದಿಗಳನ್ನು ಸೋಲಿಸಲು, ಅವರು ಅವಮಾನದಿಂದ ಒಂದು ಕುಂಭದಲ್ಲಿ ಕಾಳ ಸರ್ಪವನಿಟ್ಟು, ನಿಮ್ಮ ಸರ್ಪಾಭರಣನಾದ ಈಶ್ವರನು ಸರ್ವವ್ಯಾಪಿ ಎನ್ನುವುದಾದರೆ ಇದರಲ್ಲಿಯೂ ಇದ್ದಾನೆಯೇ ತೋರು ಎನ್ನುತ್ತಾರೆ. ಆಗ ಶಿವ ಕೃಪೆಯಿಂದ ಅದನ್ನು ಮುಟ್ಟಲು ಅದು ಸ್ಪಟಿಕಲಿಂಗವಾಯಿತು. ಅಷ್ಟಕ್ಕೇ ಸುಮ್ಮನಾಗದ ಜೈನರು ಯಾವುದೇ ಖಗಮೃಗ ಪಕ್ಷಿಗಳು ನೀರು ಕುಡಿಯದ ಒಂದು ವಿಷ ಸರೋವರದ ಬಳಿ ದಾಸಿಮಯ್ಯನನ್ನು ಕರೆದುಕೊಂಡು ಹೋಗಿ "ಶಿವನಿರುವುದು ನಿಜವಾದರೆ, ಈ ಸರೋವರದ ನೀರನ್ನು ಕುಡಿದು ನಿನ್ನ ಶಿವ ಮಹಿಮೆಯನ್ನು ತೋರು ಎನ್ನುತ್ತಾರೆ. ಆಗ ದಾಸಿಮಯ್ಯನು ಆ ಸರೋವರದ

ಜಲದಲ್ಲಿ ಕೈಯಿಟ್ಟು ಕದಲಲು ನೀರು ಶುದ್ಧವಾಯಿತು. ಆಗ ಆ ಸರೋವರದ ಜಲವನ್ನೇ ಕುಡಿದನು. ಉಳಿದವರೆಲ್ಲರೂ ಕುಡಿದರು. ನೀರು ಆಪ್ಯಾಯಮಾನವಾಗಿದ್ದು, ಎಲ್ಲರ ಬಳಲಿಕೆಗಳು ಕಳೆದವು.

ಪರವಾದಿಗಳು ಅಲ್ಲಿಗೂ ಸುಮ್ಮನಾಗದೆ, ನಿಮ್ಮ ಶಿವನನ್ನು ತೋರು? ಎನಲು ದಾಸಿಮಾರ್ಯನು ಹೋಗಿ ಜೈನ ಬಸದಿಗಳ ಮುಂದೆ ನಿಲ್ಲಲ್ಲು ಅಲ್ಲೆಲ್ಲಾ ಶಿವಲಿಂಗಗಳೇ ಗೋಚರಿಸಿದವು ಅವರ ಆಗ್ರಹ ಹೆಚ್ಚಿ ಜೈನರು ಬಿಜ್ಜಳನಲ್ಲಿ ದೂರನ್ನು ಹೇಳಿದರು. ಬಿಜ್ಜಳ ಕೋಪದಿಂದ ಬಸವೇಶ್ವರನನ್ನು ಕರೆದು ದಾಸಿಮಾರ್ಯನಿಗೆ ಬುದ್ದಿ ಹೇಳು ಇಲ್ಲವಾದಲ್ಲಿ ನಾನೇ ಕಠಿಣ ಶಿಕ್ಷೆಯನ್ನು ನೀಡಬೇಕಾಗುತ್ತದೆ. ಎನಲು, ಬಸವೇಶ್ವರನು ಶರಣರ ಮಹಿಮೆ ಯನ್ನರಿಯದೆ ಅವರನ್ನು ಮನ ಬಂದಂತೆ ಹೀಯಾಳಿಸಬಾರದು, ಆ ಮಹಾತ್ಮನನ್ನು ಸಾಮಾನ್ಯನೆಂದು ತಿಳಿಯಬೇಡ ಎಂದು ದೇವರದಾಸಿಮಯ್ಯನ ಪೂರ್ವ ವೃತ್ತಾಂತವನ್ನು ತಿಳಿಸಿದನು.

ಬಸವೇಶ್ವರನು "ವ್ಯಾಸ ಮಹರ್ಷಿ ಬರೆದ ಸಂಸ್ಕೃತ ಬ್ರಹ್ಮಾಂಡ ಪುರಾಣದ ಸೂರ್ಯ ಸಿದ್ಧಾಂತ ಮತಕಾಂಡದಲ್ಲಿ ಬ್ರಹ್ಮನಾರದ ಸಂವಾದ ರೂಪವಾಗಿ ಸುತ ಪುರಾಣಿಕನು ಶೌನಕಾದಿ ಋಷಿಗಳಿಗೆ ಹೇಳಿದ ವಿಷಯವನ್ನು ಅಲ್ಲಿ ನೆರೆದ ಎಲ್ಲರಿಗೆ ತಿಳಿಸಿದನು. ಇದು ದೇವತೆಗಳಿಗೆ ವಸ್ತ್ರಾಭಾವವನ್ನು ನೀಗಿಸಿದ ಕತೆಯಾಗಿದ್ದು, ಈ ಕಾವ್ಯದಲ್ಲಿ ಪರಮೇಶ್ವರನು ದಾಸಿಮಯ್ಯನನ್ನು ಭೂ ಕೈಲಾಸವೆಂದು ಹೆಸರಾದ ಶ್ರೀ ಶೈಲಕ್ಕೆ ಕಳುಹಿಸುತ್ತಾನೆ. ಅಲ್ಲಿ ಮಲ್ಲಿಕಾರ್ಜುನನ ಕೃಪೆಯನ್ನು ಪಡೆದು, ಪಂಡಿತಾರಾಧ್ಯ ಗುರುಪರಂಪರೆಯವರಿಂದ ದೀಕ್ಷೆ ಪಡೆದು, ಗುರುಕರಂಜಾತನಾದ ವಿರೂಪಾಕ್ಷ ದೇಶಿಕನ ಶಿಷ್ಯನಾದ ಚಂದ್ರಗುಂಡ ದೇಶಿಕನಿಗೆ ವಸ್ತ್ರವನ್ನು ನೇಯ್ದು ಅರ್ಪಿಸಿ ದೇವರದಾಸಿಮಯ್ಯನೆಂಬ ಹೆಸರನ್ನು ಪಡೆದು ವೀರಶೈವಾಚಾರ ಸೇವೆಯಲ್ಲಿ ನಿರತನಾಗು; ಭಕ್ತಿ ಮಾರ್ಗವನ್ನು ಪ್ರಚಾರ ಮಾಡು ಎಂಬ ಶಿವನ ಆಜ್ಞೆಯನ್ನು ಅನುಸರಿಸಿ ಸೇವೆಗೆ ತೊಡಗುತಾನೆ.

ಶ್ರೀಶೈಲದ ಗುರು ದೈವಗಳ ಆಜ್ಞೆಯಂತೆ ವಸ್ತ್ರ ಕಾಯಕವನ್ನು ಕೈಗೊಂಡು ನೆಲೆಸುತ್ತಿರಲು ದೇವದತ್ತೆಯೆಂಬ ಕನ್ನೆಯೊಂದಿಗೆ ವಿವಾಹವಾಗುತ್ತದೆ. ಕೆಲದಿನಗಳಾದ ಮೇಲೆ ದಾಸಿಮಾರ್ಯ ಪತ್ನಿ ಸಹಿತ ಭಕ್ತಿ ಮಾರ್ಗ ಪ್ರಚಾರಕ್ಕಾಗಿ ಹೊರಟನು. ದಾರಿಯಲ್ಲಿ ಅಡವಿ ಸಿಕ್ಕು ಅಲ್ಲಿ ಜಮದಗ್ನಿಯ ಪುತ್ರ ಪರುಶುರಾಮನಿಂದ ಶಾಪಗ್ರಸ್ತನಾದ ಕಾರ್ತವೀರ್ಯಾರ್ಜುನನ ವಂಶಸ್ಥರಾದ ಕ್ರೂರ ಬೇಟೆಗಾರರು ಸಿಗುತ್ತಾರೆ. ತನ್ನ ಬೋಧನೆಯಿಂದ ಅವರ ಮನಸ್ಸನ್ನು ಪರಿವರ್ತನೆ ಮಾಡಿ, ಆ ಗುಂಪಿನ ಎಲ್ಲರಿಗೂ ಲಿಂಗಧಾರಣೆಯನ್ನು ಮಾಡಿ ಉಪದೇಶ ನೀಡುತ್ತಾನೆ. ಅಂದಿನಿಂದ ಆ ಎಲ್ಲರೂ ತಿಲಗಾಣ ಕಾಯಕವನ್ನು ಅನುಸರಿಸಿ ಗುರುಲಿಂಗಜಂಗಮ ಸೇವೆಯಲ್ಲಿ

ನಿರತರಾಗುತ್ತಾರೆ. ಹಾಗೆ ಮುಂದೆ ಪ್ರಯಾಣ ಬೆಳೆಸಲು ಗೌಡಗೇರೆ ಗ್ರಾಮ ದೊರೆಯುತ್ತದೆ. ಅಲ್ಲಿ ಒಕ್ಕಲಿಗ ಮುದ್ದಯ್ಯನೆಂಬ ಊರಿನ ಹಿರಿಯ ದಾಸಿಮಾರ್ಯ ದಂಪತಿಗಳನ್ನು ಸ್ವಾಗತಿಸಿ, ಅವರಿಗೆ ಬಿಡಾರ ಮಾಡಿಸಿ ಉಪಚರಿಸುತ್ತಾನೆ. ದಾಸಿಮಾರ್ಯನಿಂದ ಲಿಂಗಧಾರಣೆಯನ್ನು ಬಯಸಿ ಅನುಗ್ರಹಿಸುವಂತೆ ಕೇಳುತ್ತಾನೆ. ಅನೇಕ ಪರೀಕ್ಷೆಗಳನ್ನು ಎದುರಿಸಿ ಆ ಊರಿನ ಜನ ಲಿಂಗಧಾರಣಾಧಿಕ್ರಿಯೆಗಳನ್ನು ಶಾಸ್ತ್ರಸಮ್ಮತವಾಗಿ ಪಡೆಯುತ್ತಾರೆ. ಮುಂದೆ ದಾಸಿಮಾರ್ಯನು ನಂದಿ ಎಂಬ ಅಗ್ರಹಾರವನ್ನು ಹೊಕ್ಕು ಅಲ್ಲಿ ಬ್ರಾಹ್ಮಣರನ್ನು ವಾದದಲ್ಲಿ ಗೆದ್ದು ಅವರಿಗೂ ಶಿವದೀಕ್ಷೆ ನೀಡುತ್ತಾನೆ. ನಂತರ ಪತ್ನಿ ಸಮೇತ ಭಕ್ತಾದಿಗಳೊಂದಿಗೆ ಹೊಟ್ಟಲಕೆರೆಗೆ ಬಂದು ನೆಲೆಸುತ್ತಾನೆ. ದಾಸಿಮಾರ್ಯನ ವೃತ್ತಾಂತವನ್ನು ಕೇಳಿದ ಬಿಜ್ಜಳ ತನ್ನ ಅಪರಾಧವನ್ನು ಕ್ಷಮಿಸುವಂತೆ ದಾಸಿಮಾರ್ಯನಲ್ಲಿ ಕೇಳುತ್ತಾನೆ.

"ಹರನು ಮುನಿದರೆ ಗುರುವು ಕಾಯ್ವನು
ಗುರುವು ಮುನಿದರೆ ಹರನು ಕಾಯ್ವನೆ?
ಗುರುವಿಗಿಂತಧಿಕಿಲವೆನುತಿದೆ ಶಿವನ ಶಾಸನವು"[೨೧]

ಎಂದು ಹೇಳಿ, ಬಿಜ್ಜಳನು ಅಪರಾಧವನ್ನು ಕ್ಷಮಿಸುವಂತೆ ಬೇಡಿಕೊಂಡಾಗ ದಾಸಿಮಾರ್ಯನು ಕಾರುಣ್ಯದಿಂದ ತಡಮಾಡದೇ ಬಂದು ನೋಡಲು, ದಾಸಿಮಯ್ಯನನ್ನು ಹಿಡಿದು ತರಲು ಬಂದಿದ್ದ ಸೈನ್ಯವು ಅಸುವಡಗಿ ಬಿದ್ದಿತ್ತು. ಇಪ್ಪತ್ತು ಸಾವಿರ ಜೈನರು ಮೂರ್ಛೆ ಬಿದ್ದಿದ್ದರು. ಆತ ಪಂಚಾಕ್ಷರೀ ಮಹಾ ಮಂತ್ರವನ್ನು ಪ್ರೋಕ್ಷಿಸಲು ಮತ್ತೆ ಎಲ್ಲರೂ ಮೂರ್ಛೆ ತಿಳಿದೆದ್ದರು. ನಂತರ ದೇಸಿಂಗರಾಯ ಮೊದಲಾದ ಎಲ್ಲ ಜೈನರಿಗೆ ಶಿವ ದೀಕ್ಷೆಯನ್ನು ನೀಡಿ ಲಿಂಗಧಾರಣೆ ಮಾಡಿದನು. ಆ ಶರಣೋತ್ತಮನ ಅನುಗ್ರಹದಿಂದ ಎಲ್ಲರೂ ಜಂಗಮ ದಾಸೋಹ ನಡೆಸುತ್ತಾ ಭಕ್ತಿಯೋಗದಿಂದ ಸುಖದಿಂದಿದ್ದರು.

**ಕವಿ ಹಾಗೂ ಕೃತಿಯ ಕುರಿತ ಕೆಲವು ಪ್ರಮುಖ ಅಂಶಗಳು**

ಕೃತಿಯ ರಚನಾಕಾರನಾದ ಮಹಾಂತದೇಶಿಕನ ಕಾಲ ೧೯ನೇ ಶತಮಾನ ಎಂದು 'ಕವಿಚರಿತೆ'ಕಾರರು ಗುರುತಿಸಿದ್ದಾರೆ. ಕೃತಿಯು ಯಕ್ಷಗಾನ ಕಾವ್ಯವಾಗಿದ್ದು, ತ್ರಿಪುಡೆ (ತ್ರಿಪದಿ), ಜಂಪೆ, ಭಾಮಿನಿಷಟ್ಪದಿ, ಕಂದ ಪದ್ಯ, ಅಟತಾಳ, ಏಕತಾಳ, ದ್ವಿಪದಿ, ರಾಗ ಎಂಬ ಕಾವ್ಯ ಪ್ರಕಾರಗಳನ್ನು ಒಳಗೊಂಡು ರಚನೆಯಾಗಿದೆ. ಮಧ್ಯ ಮಧ್ಯದಲ್ಲಿ 'ವಚನ' ಭಾಗವನ್ನು ತಂದು ಗದ್ಯದಲ್ಲಿ ನಿರೂಪಿಸಲಾಗಿದೆ. ಇಲ್ಲಿ ಬಳಸಿರುವ ತ್ರಿಪುಡೆ ಎಂಬ ಕಾವ್ಯ ಜಾತಿಯು ತ್ರಿಪದಿಯಾಗಿದ್ದು, ಎರಡು ಸಾಲುಗಳಲ್ಲಿಯೇ ರಚನೆಗೊಂಡಿದೆ. ಅಟತಾಳ, ಜಂಪೆ, ಏಕತಾಳಗಳೂ ತ್ರಿಪದಿಯ ರೂಪಗಳಂತೆಯೇ ಕಂಡು ಬರುತ್ತವೆ.

ಈ ಕಾವ್ಯದಲ್ಲಿ ದೇವರದಾಸಿಮಯ್ಯನ ಪತ್ನಿ 'ದೇವದತ್ತೆ' ಆಕೆಯನ್ನು ಒಲಿದು ವಿವಾಹವಾದುದಾಗಿ ತಿಳಿದು ಬರುತ್ತದೆ.

ದೇವದತ್ತೆಯೆಂಬ ಪೆಸರಿಟ್ಟ ಘನದಿ
ಕೇವಲ ಪ್ರೀತಿಯೊಳಗೊಲಿದನು ಹಿತದಿ[೮೮]

ದಾಸಿಮಾರ್ಯನು ಪತ್ನಿಯ ಜೊತೆಗೆ ಪೊಟ್ಟಲಕೆರೆಗೆ ಬರುತ್ತಾನೆ. ವಿವಾಹದ ನಂತರ ದಾಸಿಮಾರ್ಯ ಲೋಕ ಯಾತ್ರೆಗೆ ಹೊರಡುವುದು. ಇಲ್ಲಿ ಪ್ರಧಾನವಾದ ಅಂಶವೆಂದರೆ ಈತನಿಗೆ ದೇವರದಾಸಿಮಯ್ಯನೆಂಬ ಹೆಸರು ಬಂದಿದ್ದು, ಚಂದ್ರಗುಂಡ ದೇಶಿಕನಿಗೆ ವಸ್ತ್ರವನ್ನು ನೇಯ್ದು ಅರ್ಪಿಸಿದ ಸೇವೆಯಿಂದ ಎಂಬ ಅಂಶ ಈ ಕಾವ್ಯದಲ್ಲಿ ಮಾತ್ರ ಉಲ್ಲೇಖಗೊಂಡಿದೆ.

ದೇಸಿಂಗರಾಯನು ದಾಸಿಮಯ್ಯನನ್ನು ಗುರುವಾಗಿ ಸ್ವೀಕರಿಸಿದ್ದು, ಬಸವೇಶ್ವರನ ಹಿತನುಡಿಗಳಿಂದ. ಅಂದರೆ ದಾಸಿಮಯ್ಯನು ಪೊಟಲಕೆರೆಗೆ ಬರುವುದಕ್ಕಿಂತಲೂ ಮೊದಲಿನ ವೃತ್ತಾಂತವನ್ನು ದೇಸಿಂಗರಾಯನಿಗೆ ತಿಳಿಸುವುದು ಬಸವೇಶ್ವರ ಹೀಗೆ ಗೊಂದಲ ಸೃಷ್ಟಿಯಾಗಿದೆ. ಈ ಕಾವ್ಯದಲ್ಲಿಯೂ ಸಹ ಬಸವೇಶ್ವರ ಹಾಗೂ ದೇವರದಾಸಿಮಯ್ಯ ಸಮಕಾಲೀನರೆಂದು ತಿಳಿಸಲಾಗುತ್ತದೆ. ದಾಸಿಮಯ್ಯನು ಪೊಟ್ಟಲ ಕೆರೆಯಲ್ಲಿ ಜೈನರನ್ನು ಗೆಲ್ಲುವಾಗ ಒಂದೆರಡು ಪ್ರಸಂಗಗಳು ಲಗತ್ತಾಗಿ ಬಂದು ಸೇರಿವೆ. ವಿಷಸರೋವರದ ನೀರನ್ನು ದಾಸಿಮಾರ್ಯನು ಕುಡಿದು ಪವಾಡ ಮೆರೆದುದು ಮತ್ತು ಶಿವನೆಲ್ಲಿದ್ದಾನೆಂಬ ಪ್ರಶ್ನೆಗೆ ಅಲ್ಲಿನ ಬಸದಿಗಳಲ್ಲೆಲ್ಲ ಶಿವಲಿಂಗಗಳು ಉದ್ಭವಿಸಿದುದು. ಈ ಎರಡು ಪ್ರಸಂಗಗಳು ಈ ವರೆಗೆ ದಾಸಿಮಯ್ಯನ ಕುರಿತು ಯಾವುದೇ ಕೃತಿಗಳಲ್ಲಿ ಲಭ್ಯವಿಲ್ಲದೆ, ಮಹಾಂತ ದೇಶಿಕರ ಕೃತಿಯಲ್ಲಿ ಮಾತ್ರ ದೊರೆಯುತ್ತವೆ.

ಬಸವೇಶ್ವರನು ದೇಸಿಂಗರಾಯನಿಗೆ ದಾಸಿಮಯ್ಯನ ಬಗೆ ಹೇಳುವಾಗ "ಈತನು ವಸ್ತ್ರಕಾಯಕದಿಂದ ಗುರುಲಿಂಗ ಜಂಗಮ ದಾಸೋಹ ನಿರವಾದ ಗುರು ಕಾಣಿಕೆಯನಿತ್ತುದ್ದರ ಫಲವಾಗಿ ಈಗಲೂ ವರ್ಷಕ್ಕೊಮ್ಮೆ ಶ್ರೀಶೈಲ ಶಿಖರದ ಮೇಲೆ ಮುನ್ನೂರ ಅರವತ್ತು ಮೊಳ ಉದ್ದ ನೇಯ್ದ ಪಾಗನ್ನು ಭಕ್ತಿಯಿಂದ ಸುತ್ತುತ್ತಾರೆ ಎಂದು ಹೇಳುತ್ತಾನೆ. ಇಲ್ಲಿ ಕವಿ ವಾಸ್ತವಕ್ಕೆ ಬಂದು ಮತ್ತೆ ಕಥೆಗೆ ಹಿಂದಿರುಗುವ ತಂತ್ರಗಾರಿಕೆಯನ್ನು ಬಳಸಿಕೊಳ್ಳುವ ಚಾಣಾಕ್ಷತೆ ತೋರಿದ್ದಾನೆ. ದೇಸಿಂಗರಾಯ ಮತ್ತು ಬಿಜ್ಜಳ ಇಬ್ಬರಿಗೂ ಹೆಚ್ಚು ಭಿನ್ನತೆಯನ್ನು ತೋರಿಸದೆ ಕವಿ ಗೊಂದಲ ತಂದಿದ್ದಾನೆ. ಕಥೆಯನ್ನು ಹೇಳುವಾಗ ದೇಸಿಂಗರಾಯನೆಂದು ಹೇಳಿ ನಂತರ ದಾಸಿಮಯ್ಯನಲ್ಲಿ ಕ್ಷಮೆ ಕೇಳುವುದು ಬಸವೇಶ್ವರ ನೊಂದಿಗೆ ಬಂದ ಬಿಜ್ಜಳ, ದೇಸಿಂಗರಾಯನಲ್ಲ. ವಿಶೇಷವೆಂದರೆ ಈ ಕೃತಿಯಲ್ಲಿ ಬುದ್ದ ಹಾಗೂ ಚಾರ್ವಾಕನಿಗೆ ದಾಸಿಮಯ್ಯನನ್ನು ಹೋಲಿಸಲಾಗಿದ್ದು, ಬುದ್ದ ಅಂಗುಲಿಮಾಲನ ಮನಃಪರಿವರ್ತನೆ ಮಾಡಿದಂತೆ ಕಾಡಿನ ಬೇಟೆಗಾರರ ಮನಃ ಪರಿವರ್ತನೆಯನ್ನು

ದಾಸಿಮಯ್ಯ ಮಾಡಿದಂತೆ ಕತೆ ಹೆಣೆಯಲಾಗಿದೆ. ಹೀಗೆ ಒಂದೊಂದು ಕಾವ್ಯ ಪುರಾಣಗಳು ವಿಶೇಷವಾದ ಕಥೆಗಳನ್ನು ಬಿಚ್ಚಿಡುತ್ತವೆ. ಇಲ್ಲಿ ಹಲವು ಗೊಂದಲಗಳು ಏರ್ಪಡುವುದು ಸಹಜವೇ ಆದರೂ, ಕಥೆಯ ಶೈಲಿ, ಅವು ಹರಡಿಕೊಂಡಿರುವ ದೃಷ್ಟಿಯಿಂದ ವೈಶಿಷ್ಟ್ಯಪೂರ್ಣವೆನಿಸುತ್ತವೆ.

**೫.೫. ದಾಸಿಮಯ್ಯರ ಕುರಿತ ಸಾಹಿತ್ಯ ಕೃತಿಗಳನ್ನಾಧರಿಸಿದ: ತೌಲನಿಕ ವಿವೇಚನೆ.**

ಈವರೆಗೆ ವಿವರಿಸಿದ ಎಲ್ಲ ಸಾಹಿತ್ಯ ಕೃತಿಗಳು ತಮ್ಮದೇ ಆದ ವಿಶೇಷತೆಯನ್ನು ಹೊಂದಿವೆ. "ಸಾಮಾನ್ಯವಾಗಿ ಒಂದು ಕಾವ್ಯ ಎಂದಾಗ ಕವಿಯೊಬ್ಬನು ಕಲಾತ್ಮಕವಾಗಿ ಅಭಿವ್ಯಕ್ತಿಸಿದ ಕಥಾವಸ್ತುವಾಗಿರುತ್ತದೆ. ಕಥಾ ವಸ್ತು ಪ್ರಾಚೀನವೋ, ಸಮಕಾಲೀನವೋ, ನವೀನವೋ ಆಗಿರಬಹುದಾದರೂ ಕವಿಯು ಅದರೊಟ್ಟಿಗೆ ತನ್ನ ಸುತ್ತಲಿನ ಸಾಂಸ್ಕೃತಿಕ ಬದುಕನ್ನು ಪಡಿಮೂಡಿಸಿರುತ್ತಾನೆಂಬುದು ಗಮನಾರ್ಹ. ಅದರಿಂದಾಗಿಯೇ ಕಾವ್ಯಗಳು ಧಾರ್ಮಿಕ-ಸಾಮಾಜಿಕ-ರಾಜಕೀಯ, ಒಟ್ಟು ರೂಪದಲ್ಲಿ ಸಾಂಸ್ಕೃತಿಕ ಅಂಶಗಳನ್ನು ಮೈಗೂಡಿಸಿಕೊಂಡಿರುತ್ತದೆ. ಅದೇ ಕಾವ್ಯಗಳನ್ನು ಕೇವಲ ಶಬ್ದ-ಅಲಂಕಾರಾದಿ ಜಾಲಗಳಾಗಿಸದೆ. ಒಂದು ಸಂಸ್ಕೃತಿಯ ನಿಕ್ಷೇಪವನ್ನಾಗಿ ಮಾಡುತ್ತದೆಯಲ್ಲದೆ ಇಂಥ ಕಾರಣಕ್ಕಾಗಿಯೇ ಒಂದು ಕಾವ್ಯವು ಸಾಂಸ್ಕೃತಿಕ ಅಧ್ಯಯನಕ್ಕೆ ಆತನ ಸಾಮಾಗ್ರಿಯಾಗುತ್ತದೆ."[೨೨] ಅಂತಹ ಸಾಂಸ್ಕೃತಿಕ ಚಿತ್ರಣವನ್ನು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಿದ ಸಾಹಿತ್ಯ ಕೃತಿಗಳು ನೀಡುವುದು ಸಹಜ. ಪ್ರಸ್ತುತ ಕೃತಿಗಳು ಚರಿತ್ರೆಯೊಂದಿಗೆ, ಪುರಾಣ ಅಂಶಗಳನ್ನೂ, ಈ ಎರಡರೊಂದಿಗೆ ಮಹತ್ವದ ಸಾಂಸ್ಕೃತಿಕ ಅಂಶಗಳನ್ನು ತಮ್ಮಲ್ಲಿ ಹುದುಗಿಸಿಕೊಂಡಿವೆ. ಈಗಾಗಲೇ ಹೇಳಿರುವಂತೆ ಈ ಅಧ್ಯಯನವು ದಾಸಿಮಯ್ಯರ ಜೀವನದ ಪ್ರಮುಖ ಘಟನೆಗಳನ್ನು ಸಾಧನೆಗಳನ್ನು ಕುರಿತುದಾಗಿದೆ. ಆದರೆ ಈ ಅಧ್ಯಯನದ ನಾಯಕ ಜೇಡರದಾಸಿಮಯ್ಯ ಹಾಗೂ ಆತನೊಂದಿಗೆ ತಳುಕುಹಾಕಿಕೊಂಡ ದೇವರದಾಸಿಮಯ್ಯ. ಈ ಇಬ್ಬರು ಕನ್ನಡ ನಾಡಿನ ಪ್ರಮುಖ ಶರಣರು. ಇವರುಗಳ ಬಗೆಗಿನ ಕೃತಿಗಳು ಅಷ್ಟೇ ಪ್ರೌಢ ಸ್ಥಾನವನ್ನು ಪಡೆದಿವೆ. ಇಲ್ಲಿ ಈ ಇಬ್ಬರು ವ್ಯಕ್ತಿಗಳ ಬಗೆಗಿನ ಧರ್ಮ, ಇವರ ಸ್ಥಳಗಳು, ಹೀಗೆ ಸಾಂಸ್ಕೃತಿಕ ಅಂಶಗಳನ್ನು ಮಾತ್ರ ಚರ್ಚಿಸಲಾಗುತ್ತದೆ. ಈ ಇಬ್ಬರೂ ಬೇರೆ ಬೇರೆ ಎಂದ ಮೇಲೂ ಇಬ್ಬರಿಗೂ ಸಂಬಂಧಿಸಿದ ಕೆಲವು ಅಂಶಗಳನ್ನು ಇಲ್ಲಿನ ಸಾಹಿತ್ಯ ಕೃತಿಗಳ ಆಧಾರದ ಮೇಲೆ ಅನಾವರಣಗೊಳಿಸಲಾಗುತ್ತದೆ. ಧರ್ಮ, ದೈವ, ಲಿಂಗಾಚಾರಗಳು, ಪವಾಡಗಳು ಮೊದಲಾದ ಅಂಶಗಳೊಂದಿಗೆ, ಈ ಕೃತಿಗಳಲ್ಲಿ ವೈವಿಧ್ಯವಾಗಿ ಬೆಳವಣಿಗೆಯನ್ನು ಪಡೆದ ದಾಸಿಮಯ್ಯನ ಜನನ ಮತ್ತು ಬೆಳವಣಿಗೆ, ಸಾಧನಾ ಮಾರ್ಗ ಮೊದಲಾದವುಗಳನ್ನು ಕಾಣಬಹುದು

### ೫.೫.೧. ಕಾವ್ಯಗಳಲ್ಲಿ ಉಲ್ಲೇಖಗೊಂಡಂತೆ ದಾಸಿಮಯ್ಯನ ಜನನ

ದಾಸಿಮಯ್ಯನ ಹುಟ್ಟು ಪವಾಡ ಸಾದೃಶವಾಗಿ ಈ ಕಾವ್ಯಗಳಲ್ಲಿ ಕಂಡು ಬರುತ್ತದೆ. ವಿರೂಪಾಕ್ಷ ದೇಶೀಕನ 'ದೇವರದಾಸಿಮಯ್ಯನವರ ಪುರಾಣ'ದಲ್ಲಿ ಯಾವುದೇ ಅವತಾರಗಳ(ಜನ್ಮ) ವರ್ಣನೆ ಇಲ್ಲ. ಆದರೆ ಶಿವತತ್ವವನ್ನು ಸಾರಲು ಶಿವನ ಅನುಮತಿಯಂತೆ ದಾಸಿಮಯ್ಯ ಜನಿಸುತ್ತಾನೆ. ಭೂಮಿಯ ಅರಾಜಕತೆಯನ್ನು ತೊಲಗಿಸಲು ದೈವ ಸಂಭೂತನೆಂಬಂತೆ, ಅದೂ ಮುದನೂರಿನಲ್ಲಿ ರಾಮೇಶ್ವರನ ಸನ್ನಿದಾನದಲ್ಲಿ ಪವಾಡ ಸಾದೃಶವೆಂಬಂತೆ ಎಲ್ಲಾ ಜನಗಳು, ಸನ್ಯಾಸಿಗಳು, ಭಕ್ತರು ಎಲ್ಲರೂ ನೋಡು ನೋಡುತ್ತಿರುವಂತೆ ರಾಮಲಿಂಗದ ಮಧ್ಯದಲ್ಲಿ ಭವ್ಯ, ಕಾಂತಿ ಮೂಡಿ ರಾಮೇಶ್ವರನ ಗರ್ಭದಲ್ಲಿ ದೇವಗಣವರನು ಜನಿಸಿದ ಎನ್ನುವ ಕಥೆ ವರ್ಣನೆಗೊಂಡಿದೆ. ಅಯ್ಯಪ್ಪ ಕವಿಯ 'ದೇವಾಂಗ ಪುರಾಣ'ದಲ್ಲಿ ದಾಸಿಮಯ್ಯನು ದೇವಾಂಗನ ಏಳನೇ ಅವತಾತವೆಂಬ ಕಥೆ ನಿರೂಪಿತವಾಗಿದೆ. ವಸ್ತ್ರದಾತನಾದ ದೇವಾಂಗನು ಬಟ್ಟೆ ಇಲ್ಲದೇ ನಗ್ನರಾದ ದೇವತೆಗಳೆಲ್ಲರನ್ನೂ ಮಾನಿಷ್ಟರನ್ನಾಗಿಸಲು ಶಿವನ ಅಂಗದಿಂದ ಜನಿಸಿದ ವಿಭೂತಿ ಪುರುಷ, ಈತನ ವಿದ್ಯಾಧರ, ಪುಷ್ಪದಂತ, ಬೇತಾಲ, ವರರುಚಿ, ದೇವಸಾಲಿ ಎಂಬ ಆರು ಅವತಾರಗಳ ನಂತರ ಜೇಡರದಾಸಿಮಯ್ಯನ ಜನನ ಮುದನೂರಿನಲ್ಲಿ ಆಗುತ್ತದೆ.

ರಾಘವಾಂಕನ 'ದೇವಾಂಗ ದಾಸಿಮಯ್ಯ ಪುರಾಣ'ದಲ್ಲಿ ಕಥೆ ಮತ್ತೊಂದು ರೀತಿಯಲ್ಲಿ ಕಟ್ಟಲ್ಪಟ್ಟಿದೆ. ಮೇಲಿನ ಎರಡೂ ಕಾವ್ಯಗಳನ್ನು ಅನುಸರಿಸುವಂತೆ ಇಲ್ಲಿಯೂ ನಾರದನು ಶಿವನ ತುಂಬಿದ ಸಭೆಗೆ ಬಂದು ವಸ್ತ್ರಕಾರನನ್ನು ಹುಡುಕುತ್ತಾನೆ. ನಿನ್ನೊಡ್ಡೋಲಗ ಬೆತ್ತಲೆಯಿಂದಿದೆ ಅವರ ಮಾನವನ್ನು ರಕ್ಷಿಸು ಎಂದಾಗ; ಶಿವನು ಆತನನ್ನೇ ಯಾರಾದರೂ ಅಭಿಮಾನ ರಕ್ಷಿಸುವ ಜ್ಞಾನಿಗಳಿದ್ದರೆ ಕರೆಯಿಸು ಎನ್ನಲು, ನಾರದನಿಗೆ ಯಾರೂ ದೊರಕುವುದಿಲ್ಲ. ಆಗ ಜಗತ್ತಿನಲ್ಲಿ ವಸ್ತ್ರಕಾರನಿಲ್ಲವೆಂದು ಶಿವ ಉಗ್ರ ತಪಸ್ಸನ್ನು ಮಾಡಿ ತನ್ನ ಪ್ರಾಣಲಿಂಗದಿಂದ ದೇವಾಂಗನನ್ನು ಸೃಷ್ಟಿಸುತ್ತಾನೆ. ಆಗ ದೇವಾಂಗನು ಬೆಳೆದು ನಾಲ್ಕು ಅಂಗಗಳು ಮತ್ತು ಅವತಾರಗಳನ್ನು ಪಡೆದು ಕೊನೆಯಲ್ಲಿ ಅಭಿನವ ಕೈಲಾಸವೆಂದು ಹೆಸರಾದ ಮುದನೂರಿನಲ್ಲಿ ಶಿವನಾಜ್ಞೆಯಂತೆ ಜನಿಸುತ್ತಾನೆ.

ಮಹಾಂತ ದೇಶಿಕನ ಶಿವಶರಣ ವಿಲಾಸದಲ್ಲಿ 'ದೇವರದಾಸಿಮಯ್ಯನ ಕಥೆ' ಎಂದೆ ನಿರೂಪಿತವಾಗಿದ್ದು ಇಲ್ಲಿ ನೇರವಾಗಿ ಸುಗ್ಗಲೆಯ ಕರೆಯಂತೆ ದಾಸಿಮಯ್ಯ ಹೊಟ್ಟಲಕೆರೆಗೆ ಹೋದ ಪ್ರಸಂಗದಿಂದ ಕಥೆ ಪ್ರಾರಂಭವಾಗುತ್ತದೆ. ನಂತರದಲ್ಲಿ ಬಸವೇಶ್ವರನು ಬಿಜ್ಜಳ ಮೊದಲಾದವರಿಗೆ ಸಂಸ್ಕೃತ ಬ್ರಹ್ಮಾಂಡ ಪುರಾಣದದಲ್ಲಿ ಬರುವ ದೇವತೆಗಳಿಗೆ ವಸ್ತ್ರಾಭಾವವನ್ನು ನೀಗಿಸಿದ ಕಥೆಯನ್ನು ಹೇಳುತ್ತಾ ದಾಸಿಮಾರ್ಯನನ್ನು ಪರಶಿವನು ಶ್ರೀಶೈಲಕ್ಕೆ ಕಳುಹಿಸಿದ

ಕಥೆಯನ್ನು ಹೆಣೆಯಲಾಗಿದೆ. ಹೀಗೆ ದಾಸಿಮಯ್ಯನ ಹುಟ್ಟನ್ನು ಹಲವು ಬಗೆಯಾಗಿ ಪುರಾಣ ಕಾವ್ಯಗಳು, ಕೃತಿಗಳು ವರ್ಣಿಸುತ್ತವೆ. ಒಂದರಲ್ಲಿ ದೇವಗಣನಾದ ದಾಸಿಮಯ್ಯ ಮತ್ತೊಂದರಲ್ಲಿ ಶಿವನ ಒಂದಂಗ, ಇನ್ನೊಂದರಲ್ಲಿ ಶಿವನ ಪ್ರಾಣಲಿಂಗದಿಂದ ಉದಿಸಿ ಹಲವು ಜನ್ಮಗಳನ್ನು ಪಡೆದು ದಾಸಿಮಯ್ಯ ಜನ್ಮವನ್ನು ಪಡೆದವನು.

**೫.೫.೨. ವಿವಾಹ ಪ್ರಸಂಗ**

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಇದೊಂದು ವಿಶಿಷ್ಟವಾದ ವಿವಾಹ ಪ್ರಸಂಗವೆನ್ನಬಹುದು. ವಿರೂಪಾಕ್ಷ ದೇಶಿಕ, ಭೀಮಕವಿ ಮೊದಲಾದವರು ಹೇಳುವಂತೆಯೇ ದುಗ್ಗಳೆಯು ಮಳಲಕ್ಕಿ ಪಾಯಸ ಮಾಡಿದ ಜಾಣ್ಮೆಯನ್ನು ಮೆಚ್ಚಿ ದಾಸಿಮಯ್ಯ ವಿವಾಹವಾಗುತ್ತಾನೆ. ಆದರೆ ದುಗ್ಗಳೆಯ ಊರು ಇಲ್ಲಿ ಮುದನೂರು. ಹೆಣ್ಣಿಗಾಗಿ ಎಲ್ಲವನ್ನೂ ತಿರುಗಿಬಂದ ದಾಸಿಮಯ್ಯನಿಗೆ ಮುದನೂರಿನಲ್ಲಿಯೇ ದುಗ್ಗಳೆಯು ದೊರೆಯುತ್ತಾಳೆ. ದುಗ್ಗಳೆಯ ತಂದೆ-ತಾಯಿಯರು ಸಂಕಣ್ಣ, ಶಿವದೇವಿಯವರು. ಅಯ್ಯಪ್ಪ ಕವಿಯಲ್ಲಿ ತಂದೆ-ತಾಯಿಯರ ಬಗ್ಗೆ ಸ್ಪಷ್ಟವಾದ ಉಲ್ಲೇಖಗಳು ದೊರೆಯುವುದಿಲ್ಲ. ಅದೇ ರಾಘವಾಂಕನ ದೇವಾಂಗ ದಾಸಿಮಯ್ಯ ಪುರಾಣದಲ್ಲಿ ದುಗ್ಗಳೆಯ ಊರು ಗೊಬ್ಬೂರು. ಈಕೆಯ ತಂದೆ ತಾಯಿಗಳು ಮಲ್ಲಯ್ಯ, ಮಹದೇವಿಯರು. ಕವಿ ಅವರ ವಾಸಸ್ಥಳವನ್ನು ಶಿವಪುರವೆಂದು ಹೇಳುತ್ತಾನೆ(ದಾಸಿಮಯ್ಯನು ವಸ್ತ್ರವನ್ನು ಮಾರಲು ಹೋದದ್ದು ಶಿವಪುರ ಸಂತೆಗೇ). ಇನ್ನೊಂದು ವಿಶೇಷವೆಂದರೆ ಇಲ್ಲಿ ದಾಸಿಮಯ್ಯ ಪಾಯಸ, ಅಥವಾ ಷಡುರಸಾನ್ನ[೨೨]ವನ್ನು ಮಾಡಲು ಕೊಟ್ಟದ್ದು ಕಬ್ಬು, ಮರಳು ಮಿಶ್ರಿತ ಅಕ್ಕಿಯನ್ನಲ್ಲ. ಗೋರೆಕಲ್ಲುಗಳ ನುಚ್ಚಿನ ತುಂಡುಲಗಳನ್ನು. ಈ ಕಲ್ಲಿನ ಚೂರುಗಳನ್ನು ಪಾದೋದಕದಿಂದ ಬೇಯಿಸಿ ಅಡುಗೆ ಮಾಡಿ, ಷಡುರಸಾನ್ನವನ್ನು ತಯಾರಿಸಿ ಸೈ ಎನಿಸಿಕೊಂಡಳು ಎಂಬ ಉಲ್ಲೇಖವಿದೆ. ಕನ್ನಡ ವಚನ ದೇವಾಂಗ ಪುರಾಣದಲ್ಲಿ ದಾಸಿಮಯ್ಯನ ಪತ್ನಿ ದೇವದತ್ತೆ. ಈವರೆಗಿನ ಎಲ್ಲ ಕೃತಿಗಳಿಗಿಂತಲೂ ವಿಭಿನ್ನ ಕಥೆಯನ್ನು ಈ ಪುರಾಣ ಹೊಂದಿದೆ.

ಇಲ್ಲಿಯೂ ಪಾರ್ವತಿ ಪರಮೇಶ್ವರರ ಆಜ್ಞೆಯಂತೆ ತನ್ನ ಆರು ಅವತಾರಗಳನ್ನು ಪೂರ್ಣಗೊಳಿಸಿ ಆಮೋದಪುರವೆಂಬ ಪಟ್ಟಣದಲ್ಲಿ ರಾಜ ಗಂಗಾಧರನ ಮಗನಾದ ವೀರರುದ್ರನಿಗೆ ಮಗ ದೇವದಾಸನಾಗಿ ಹುಟ್ಟುತ್ತಾನೆ. ದೇವಾಂಗನ ಪತ್ನಿ ದೇವದತ್ತೆಯೂ ಬಂಗಾಳದ ರಾಜ ಹಾಗೂ ಆತನ ಪತ್ನಿ ಸುಕ್ಷಣೆಗೆ ಮಗಳಾಗಿ ಹುಟ್ಟಿ ದೇವದತ್ತೆ ಎಂಬ ಹೆಸರನ್ನು ಪಡೆಯುತ್ತಾಳೆ. ವಿವಾಹ ವಯಸ್ಕರಾಗಲು, ಅಶರೀರವಾಣಿಯ ಸೂಚನೆಯಂತೆ ಅವರಿಬ್ಬರಿಗೂ ವಿವಾಹಮಾಡಿ ಪೂರೈಸಲಾಗುತ್ತದೆ.

### ೫.೫.೩. ಪುತ್ರ ಸಂತಾನ

ಜೇಡರ ದಾಸಿಮಯ್ಯನಿಗೆ ಒಬ್ಬ ಮಗನಿದ್ದ, ಅವನಿಗೂ ಶಿಷ್ಯ ಪರಂಪರೆ ಇತ್ತು ಎಂದು ಹಲವು ಶಾಸನಗಳು ಹಾಗೂ ಕಾವ್ಯಗಳಿಂದ ತಿಳಿಯುತ್ತದೆ. ಈ ಬಗ್ಗೆ ಹಲವು ಚರ್ಚೆಗಳೂ ಸಾಹಿತ್ಯ ವಲಯದಲ್ಲಿ ನಡೆದಿವೆ. ಎಂ.ಎಂ.ಕಲಬುರ್ಗಿಯವರನ್ನೊಳಗೊಂಡು ಹಲವು ವಿದ್ವಾಂಸರು ಈ ಕುರಿತು ಚರ್ಚಿಸಿದ್ದಾರೆ ದಾಸಿಮಯ್ಯ ದಂಪತಿಗಳು ವಿವಾಹದ ನಂತರ ಬಹಳದಿನಗಳ ಕಾಲ ಕೊರಗಿ ನಂತರ ಶಿವನ ಪ್ರಾರ್ಥನೆಯಿಂದ 'ರಾಮಲಿಂಗ' ಎಂಬ ಮಗುವನ್ನು ಪಡೆದರು. ಸ್ವತಃ ರಾಮಲಿಂಗ ದೇವನೇ ಜಂಗಮವಾಗಿ ಬಂದು ಲಿಂಗಧಾರಣೆ ಮಾಡಿದನು ಎಂಬುದು ವಿರೂಪಾಕ್ಷ ದೇಶಿಕನ ಪುರಾಣದಲ್ಲಿ ವ್ಯಕ್ತವಾಗಿದೆ. ಅಪ್ಪಯ್ಯ ಕವಿಯೂ ಇದನ್ನೇ ಹೇಳುತ್ತಾನೆ. ಜೇಡರದಾಸಿಮಯ್ಯ ದಂಪತಿಗಳು 'ರಾಮಯ್ಯ' ಎಂಬ ಮಗುವನ್ನು ಪಡೆದರು ಎಂದು ರಾಘವಾಂಕನದೆನ್ನಲಾದ ಕೃತಿಯಲ್ಲಿ ದಾಸಿಮಯ್ಯ ದುಗ್ಗಳೆಯರೊಟ್ಟಿಗೆ ರಾಮಯ್ಯನು ಚಿಕ್ಕನೂರು ಪಟ್ಟಣಕ್ಕೆ ಹೋಗಿ ನೆಲೆಸಿದರು ಎಂಬ ಉಲ್ಲೇಖವಿದೆ. ಈ ರಾಮಯ್ಯ ಮಗನೋ, ದೈವವೋ ತಿಳಿಯುವುದಿಲ್ಲ. ಇನ್ನೂ ವಿಶೇಷವೆಂದರೆ ಕನ್ನಡ ವಚನ ದೇವಾಂಗ ಪುರಾಣದಲ್ಲಿ ದಾಸಿಮಯ್ಯ ದಂಪತಿಗಳ ಮಗ 'ಏಕೋರಾಮ'ನೆಂದು ದಾಖಲಿಸಲಾಗಿದೆ.[೨೪] ಏಕೋರಾಮ ತಂದೆಯ ಮಾತಿನಂತೆ ಹುತ್ತದಲ್ಲಿ ಕೈಇಟ್ಟು ಕಂಕಣವನ್ನು ತರುತ್ತಾನೆ. ಅಷ್ಟೇ ಅಲ್ಲ ಆಮೋದಪುರದೊಡೆ ಯನಾದ ತಂದೆಗೆ ಬೆಂಬಲವಾಗಿ ನಿಲ್ಲುತ್ತಾನೆ. ಶಿವನಾಜ್ಞೆಯಂತೆ ಏಕೋರಾಮನಿಗೆ ವಿವಾಹವಾಗಿ, ಆತನ ಮಗ ರುದ್ರನೂ, ಆತನ ಮಗ ಕಾಲಸೇನನೂ ಹೀಗೆ ಪರಂಪರೆ ಬೆಳೆಯುತ್ತದೆ. ಈ ಮೂವರ ಪ್ರಾಬಲ್ಯವನ್ನೂ ಇಲ್ಲಿ ವರ್ಣಿಸಲಾಗಿದೆ.

### ೫.೫.೪. ಪವಾಡಗಳು

ಯುಗಧರ್ಮಕ್ಕೆ ಹೊಂದಿಕೊಂಡಂತೆ ಹಲವು ಕವಿಗಳು ತಮ್ಮ ತಮ್ಮ ಕೃತಿಗಳಲ್ಲಿ ಪವಾಡ ಕಥೆಗಳನ್ನು ಅಳವಡಿಸಿಕೊಂಡು, ವರ್ಣಿಸಿಕೊಂಡು ಬಂದಿದ್ದಾರೆ. ಅಂತಹವರಲ್ಲಿ ವೀರಶೈವ ಕವಿಗಳೂ ಹೊರತಾಗಿಲ್ಲ. ಇಲ್ಲಿ ಪವಾಡ ಕಥೆಗಳನ್ನು ಏಕೆ ವರ್ಣಿಸಿದ್ದೇವೆಂಬುದಕ್ಕೆ ಸೂಚ್ಯವಾಗಿ ಕಾರಣಗಳನ್ನೂ ತಿಳಿಸಿದ್ದಾರೆ. ಶಿವಶರಣ ಆಂದೋಲನದ ಹಲವು ಮಹೋನ್ನತ ಹಾಗೂ ಕ್ರಾಂತಿಕಾರೀ ವಿಚಾರಗಳಿಂದ ಪ್ರೇರಿತವಾದ ಕವಿಗಳು, ವೀರಶೈವ ತತ್ವಗಳನ್ನು ಸಾರ್ವತ್ರಿಕವಾಗಿ ಪ್ರಸಾರಗೊಳಿಸುವ ಕಾರ್ಯ ಕೈಗೊಂಡರು. ಇಂತಹ ಮಹಾತ್ಕಾರ್ಯವನ್ನು ಅವರ ಮಹಿಮಾ ಪೂರ್ಣ ಜೀವನ ಚರಿತ್ರೆಯನ್ನು ಬರೆಯುವುದರ ಮೂಲಕ ನಿರ್ವಹಿಸಿದರು ಎಂದರೂ ತಪ್ಪಾಗಲಾರದು. ಮತಧರ್ಮಗಳ ಚರಿತ್ರೆಯನ್ನು ಅವಲೋಕನ ಮಾಡಿದಾಗ ಅಲ್ಲಿ ಸಮಾಜದ ಎರಡು ಸ್ಥರಗಳು ದೊರೆಯುತ್ತವೆ. ಒಂದು ಶಿಕ್ಷಿತ ಸಮಾಜ, ಮತ್ತೊಂದು ಅಶಿಕ್ಷಿತ ಸಮಾಜ.

ಶಿಕ್ಷಿತರು ಧಾರ್ಮಿಕ ವಿಧಿ ವಿಧಾನಗಳು, ತತ್ವಾಚಾರಗಳು, ತರ್ಕಗಳನ್ನು ಗ್ರಹಿಸಿ; ಒಂದು ಧರ್ಮ ಉನ್ನತಿ, ಅವನತಿಗಳನ್ನು ತಿಳಿಯಬಲ್ಲವರಾಗಿದ್ದರು. ಸಾಮಾನ್ಯ ಜನರಿಗೆ ಇಂತಹ ತರ್ಕವಿಚಾರಗಳನ್ನು ಗ್ರಹಿಸುವುದು ಸುಲಭ ಸಾಧ್ಯವಾಗಿರಲಿಲ್ಲ. ಇಂತಹ ಸಂದರ್ಭದಲ್ಲಿ ಜನ ಸಾಮಾನ್ಯರಿಗೂ ಧಾರ್ಮಿಕ ತತ್ವಗಳನ್ನು, ಆಚರಣೆಗಳನ್ನು ತಿಳಿಸುವ ಜವಾಬ್ದಾರಿ ಅಂದಿನ ವೀರಶೈವ ಶರಣರ ಮತ್ತು ಕವಿಗಳ ಮೇಲಿತ್ತು. ಆದುದರಿಂದ ಅವರು ಧಾರ್ಮಿಕ ತತ್ವಗಳು ಸುಲಭವಾಗಿ ತಿಳಿಸಲು ಅಮೂರ್ತವಾದ ನಿರೂಪಣೆಯನ್ನು, ಅಮೂರ್ತ ತಾರ್ಕಿಕ ಸಂದರ್ಭಗಳನ್ನು ಹೊರತು ಪಡಿಸಿ, ಸ್ಥೂಲವಾದ ವಸ್ತು-ವ್ಯಕ್ತಿ-ಘಟನೆಗಳ ಮೂಲಕ ನಿರೂಪಿಸಲು ಮುಂದಾದರು. ಹಾಗಾಗಿ ಕೃತಿಗಳಲ್ಲಿ ಪಾಂಡಿತ್ಯ ಪೂರ್ಣವಾದ ತಾತ್ವಿಕತೆ ಒಂದೆಡೆ ಇದ್ದರೆ, ಜನ ಸಾಮಾನ್ಯರಿಗೂ ಉಪದೇಶಿತವಾಗುವಂತಹ ಮೂರ್ತರೂಪ ಇನ್ನೊಂದೆಡೆ ಇರುತ್ತದೆ. ಇಂತಹ ಮೂರ್ತ ರೂಪದ ಭಾಗಗಳಲ್ಲಿ ಶರಣರ ಚರಿತ್ರೆ, ಜೀವನ, ಅವರ ಪವಾಡ ಸಾದೃಶ್ಯತೆ ಮೊದಲಾದವು ಕಂಡು ಬರುತ್ತದೆ.

ಹೀಗೆ ಉದ್ದೇಶಗೊಂಡು ಬರೆಯಲ್ಪಟ್ಟ ಧಾರ್ಮಿಕ ಮಹಾ ಪುರುಷರ ಜೀವನದಲ್ಲಿ ಪವಾಡ ಕಥೆಗಳು ಸ್ಥಾನ ಪಡೆದಿವೆ. ಪವಾಡ ಕಥೆಗಳಿಗೆ ಇಂತಹ ಧಾರ್ಮಿಕ ಪುರುಷರ ವಿಶೇಷ ಜೀವನ ಶೈಲಿ, ವಿಲಕ್ಷಣ ವ್ಯಕ್ತಿತ್ವ, ಅವರು ಸಾಧಿಸಿದ, ಮಹಾತ್ಕಾರ್ಯಗಳು, ಭಕ್ತ ಜನರೊಂದಿಗೆ ಅವರ ಸಂಬಂಧ, ಅವರು ವಾಸಿಸಿದ ಸ್ಥಳ ಅಥವಾ ಬೇರೆಲ್ಲಿಂದಲೋ ಬಂದ ಸ್ಥಳ, ಅಲ್ಲಿನ ವೈಶಿಷ್ಟ್ಯ ಪೂರ್ಣ ಜೀವನದ ನಡಿಗೆ ಇವೆಲ್ಲವೂ ಪ್ರೇರಣೆಯನ್ನೊದಗಿಸುತ್ತವೆ. ಯೇಸು, ಬುದ್ಧ ಮೊದಲಾದವರ ಮರಣದ ನಂತರ ಅವರ ಜನನ, ಸಾಧನೆ, ತತ್ವ ಭೋಧನೆ, ಮೊದಲಾದ ವಿಚಾರಗಳು ಜನರ ಬಾಯಿಯಲ್ಲಿ ಕಥೆಗಳಾಗಿದ್ದು ಕಂಡುಬರುತ್ತದೆ. ಅಂತೆಯೇ ಶರಣರ ಚರಿತ್ರೆಯು ಅವರ ಮರಣದ ನಂತರವೇ ಮಹತ್ವವನ್ನು ಪಡೆದು ಹಲವು ಜನರ ಬಾಯಿಯಲ್ಲಿ ಉತ್ಪ್ರೇಕ್ಷೆಯಿಂದ ನುಡಿಯಲ್ಪಟ್ಟುದ್ದಾಗಿ ತಿಳಿಯುತ್ತದೆ. ಇವೇ ಪವಾಡ ಕಥೆಗಳಾಗಿ ರಚಿಸಲ್ಪಟ್ಟಿರುವುದು ಚರಿತ್ರೆಯಾಗಿದೆ. ವೀರಶೈವ ಪವಾಡ ಕಥೆಗಳಲ್ಲಿ ಸಾಮಾನ್ಯವಾಗಿ ಐಂದ್ರಿಕಗಳಾದ ದರ್ಶನ-ಸ್ಪರ್ಶ-ವಾಕ್‌ಗಳಿಗೆ ಸಂಬಂಧಿಸಿದವುಗಳು ಮತ್ತು ತತ್ವಗಳು-ಅಷ್ಟಾವರಣಗಳು-ಪಂಚಾಚಾರಗಳಿಗೆ ಸಂಬಂಧಿಸಿದವುಗಳಾಗಿವೆ. ಅಷ್ಟೆ ಅಲ್ಲದೇ ಅನ್ಯೆಸರ್ಗಿಕ ಕ್ರಿಯೆಯ ಕುರಿತ ಪವಾಡ ಕಥೆಗಳು ಕಂಡು ಬರುತ್ತವೆ. ಅವುಗಳಲ್ಲಿಯೂ ದಿವ್ಯಗಳು, ದಿವ್ಯವಾಣಿ, ಅಸಾಧಾರಣ ಶಕ್ತಿಯ ಪ್ರದರ್ಶನ, ಅಚೇತನರಲ್ಲಿ ಚೇತನವನ್ನು ಪರಿಭವಿಸುವುದು, ಪ್ರಾಣದಾನ ಮೊದಲಾದವುಗಳ ಬಗೆಗಿನ ಕಥೆಗಳು ವಾಡಿಕೆಯಂತೆ ಬೆಳೆದುಬಂದಿವೆ. ಇಂತಹದ್ದೆ ಕಥೆಗಳು ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯರ ಕುರಿತಾಗಿ ರಚನೆಗೊಂಡ ಸಾಹಿತ್ಯದಲ್ಲಿಯೂ ಮೂಡಿಬಂದಿವೆ. ಅವುಗಳನ್ನು ಕೆಳಗಿನಂತೆ ಚರ್ಚಿಸಲಾಗಿದೆ. ಈ ಮೊದಲು ಈ ಕಥೆಗಳನ್ನು ವಿವರಿಸಿದ್ದರೂ,

ಇಲ್ಲಿ ಪ್ರಸ್ತಾಪಿಸಲೇಬೇಕಾದ ಪ್ರಸಂಗವಿರುವುದರಿಂದ ಸಂಪೂರ್ಣವಾಗಿ ವಿವರಿಸದೇ ಪ್ರಾತಿನಿಧಿಕವಾಗಿ ಚರ್ಚಿಸಲಾಗಿದೆ.

**ಮುದನೂರಿನಲ್ಲಿ ನಡೆದ ಪವಾಡಗಳು**

ದಾಸಿಮಯ್ಯರಿಗೆ ಸಂಬಂಧಿಸಿದ ಪವಾಡಗಳು ಹಲವಾರು ಅವುಗಳನ್ನು ಮುದನೂರಿನಲ್ಲಿ ನಡೆದಂತಹವು, ಪೊಟ್ಟಲಕೆರೆಯಲ್ಲಿ ನಡೆದಂತಹವು ಎಂದು ವಿಂಗಡಿಸಲಾಗಿದೆ. ಮುದನೂರಿನಲ್ಲಿ ನಡೆದಂತಹವು ಜೇಡರದಾಸಿಮಯ್ಯನಿಗೆ ಸಂಬಂಧಿಸಿದವುಗಳಾಗಿದ್ದು, ಪೊಟ್ಟಲಕೆರೆಯಲ್ಲಿ ನಡೆದಂತಹವು ದೇವರದಾಸಿಮಯ್ಯನಿಗೆ ಸಂಬಂಧಿಸಿದವುಗಳಾಗಿವೆ. ಕವಿಗಳು ದಾಸಿಮಯ್ಯನ ಹುಟ್ಟಿನಿಂದ ಮುಕ್ತಿಯವರೆಗೂ ಪವಾಡ ಸಾದೃಶ್ಯ ಜೀವನ ಚಿತ್ರಣವನ್ನು ಕಟ್ಟಿ ಆತನನ್ನೂ ಪವಾಡ ಪುರುಷನನ್ನಾಗಿಸಿದ್ದಾರೆ. ರಾಘವಾಂಕನ 'ದೇವಾಂಗ ದಾಸಿಮಯ್ಯ ಪುರಾಣ'ದಲ್ಲಿ ದಾಸಿಮಯ್ಯ ಜನನ ವೈಶಿಷ್ಟ್ಯ ಪೂರ್ಣವಾದದು. ದೈವಾಂಶ ಹೊಂದಿದ ಶಿಶುವಿನ ಜನನದ ವಾರ್ತೆ ಕೇಳಿ ಎಲ್ಲ ಶರಣರು ಆತನನ್ನು ಹರಸಲು ಬರುತ್ತಾರೆ. ಬೆತ್ಲಹೇಮ್‌ನಲ್ಲಿ ಯೇಸುವಿನ ಜನನದ ವಾರ್ತೆ ಕೇಳಿದ ಎಲ್ಲ ಸಂತರು ಶಿಶುವಾದ ಯೇಸುವನ್ನು ನೋಡಿ ಹಾರೈಸಲು ಬಂದುದು ಇಲ್ಲಿ ನೆನಪಿಗೆ ಬರುತ್ತದೆ. ದಾಸಿಮಯ್ಯನ ಜನನದ ಹೊತ್ತಿಗೆ ಅಲ್ಲಮ, ಸಿದ್ದರಾಮ, ಬಸವಣ್ಣ, ಮೊದಲಾದವರ ಜನನವಾಗಿರುತ್ತದೆ. ಆ ಎಲ್ಲರೂ ದಾಸಿಮಯ್ಯನ ಜನನವನ್ನು ಆದರದಿಂದ ಸ್ವಾಗತಿಸುತ್ತಾರೆ. ಹೀಗೆ ಹಲವು ಶರಣರ ಜನನವು ಅತ್ಯಂತ ಸ್ವಾರಸ್ಯಕರವಾಗಿ ಸಂಭವಿಸಿದ್ದನ್ನು ಕಾವ್ಯಗಳು ವರ್ಣಿಸಿವೆ. "ರೇವಣಸಿದ್ಧನ ಜನನವು ದೇವಾಲಯದ ಮಹಾಲಿಂಗ ದಿಂದಾಯಿತು ಎನ್ನುವಂತೆ ವಿರೂಪಾಕ್ಷ ದೇಶಿಕನಲ್ಲಿ ದಾಸಿಮಯ್ಯನ ಜನನ ರಾಮಲಿಂಗ ದಿಂದಾದುದು ಎಂದು ವರ್ಣಿತವಾಗಿದೆ.

**ವಸ್ತ್ರದಾಸನದಿಂದ ತವನಿಧಿ ಪಡೆದುದು:** ಇಲ್ಲಿ ತವನಿಧಿ ಎಂದರೆ 'ಅಕ್ಷಯ ಪಾತ್ರೆ' ಅಥವಾ 'ಅಕ್ಷಯವಾದ ಸಂಪತ್ತು' ಎಂದು ಗ್ರಹಿಸಿದರೆ ವೀರಶೈವ ಪುರಾಣ ಸಾಹಿತ್ಯದಲ್ಲಿ ಹಲವೆಡೆ ಬಂದು ಹೋಗುವ ಪವಾಡವಿದು. ಗಂಗಾಂಬಿಕೆಯ ಸೀರೆ ಅಕ್ಷಯವಾದ ಪವಾಡ. ಹೀಗೆ ಬೇರೆ ಬೇರೆ ಕಾವ್ಯಗಳಲ್ಲಿ ಶರಣರಿಗೆ ಭಿನ್ನ ಭಿನ್ನ ರೂಪದ ತವನಿಧಿ ಇದ್ದುದರ ಪ್ರಸ್ತಾಪವಿದೆ. ಶಿವಭಕ್ತ ಭೈರವಾಂಕನು ಶಿವನಿಗೆ ಅಂಗಿಯೊಂದನ್ನು ಹೊಲಿದುಕೊಟ್ಟು ತವನಿಧಿ ಪಡೆದನೆಂದು ಶಾಂತಲಿಂಗ ದೇಶಿಕನು ಹೇಳುತ್ತಾನೆ. ಕೋಟಿ ಶಿವದೇವನು ಶಿವನಿಂದ ಹದಿನೆಂಟು ಧಾನ್ಯದ ತವನಿಧಿ, ಚಿರಪುಲಿಯರು ರತ್ನದ ತವನಿಧಿ, ಸೌಂದರನಂಬಿ, ಚೋಳರಾಜ ಮತ್ತು ನರುವಪಲ್ಲಿ ಕಾಮಯ್ಯಗಳು ಹೊನ್ನಿನ ತವನಿಧಿ, ಉಪಮನ್ಯವು ಹಾಲಿನ ತವನಿಧಿ, ವಾಗೀಶ್ವರನು ಕಾಸು ತವನಿಧಿ ಪಡೆದರೆಂದೂ ಹಾಗೆಯೇ ಭಕ್ತ ರೇವಣಸಿದ್ಧನು ಮಂಗಳವಾಡದ ಗಾಣಿಗನಿಗೆ

ತವನಿಧಿಯಂತು ಕರುಣಿಸಿದ. ಭಕ್ತ ಸಿರಿಯಾಳನೂ ಅಕ್ಷಯವಾಗುವ ನಿಧಿಯೊಂದನ್ನು ಪಡೆದಿದ್ದ ಎಂಬೆಲ್ಲ ವಿವರಗಳು ಸಾಹಿತ್ಯದಲ್ಲಿ ದೊರೆಯುತ್ತವೆ.

ಶಂಕರದಾಸಿಮಯ್ಯ ಪುರಾಣದಲ್ಲಿ ಜೇಡರದಾಸಿಮಯ್ಯನ ತವನಿಧಿಯನ್ನು ಕಾಣಲು ಜನರು ತಂಡ ತಂಡವಾಗಿ ಬರುತ್ತಿದ್ದರು. ಬಂಡಿಗಳನ್ನು ಕಟ್ಟಿಕೊಂಡು, ಹೆಸರ ಕುದುರೆ, ಎತ್ತುಗಳ ಬೆನ್ನ ಮೇಲೆ ಧಾನ್ಯ, ನೆಲ್ಲುಗಳ ಹೊರೆ, ಚೀಲಗಳನ್ನು ತುಂಬಿಕೊಂಡು ಹೋಗುತ್ತಿದ್ದದ್ದು ಮುದನೂರಿನ ದಾರಿಯಲ್ಲೆಲ್ಲ ಕಂಡು ಬರುತ್ತಿದ್ದರು. ಈ ತವನಿಧಿಯಿಂದ ರಾಜ್ಯದಲ್ಲೆಲ್ಲ ಧಾನ್ಯದ ಸುಗ್ಗಿಯೇ ನಡೆಯುತ್ತಿತ್ತು ಎನ್ನಲಾಗಿದೆ. ಈ ತವನಿಧಿಯ ವರ್ಣನೆ ಎಲ್ಲ ಪುರಾತನರ ಪುರಾಣ, ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ಕತ್ನಕರ, ಬಸವ ಪುರಾಣವನ್ನೊಳಗೊಂಡು ಅನೇಕ ಸಾಹಿತ್ಯ ಕೃತಿಗಳಲ್ಲಿ ಬಂದಿದೆ. ದಾಸಿಮಯ್ಯನ ಹಿರಿಮೆ ಶಿವನಿಂದ ಪಡೆದ ತವನಿಧಿಯ ಸಾಧನೆಯಿಂದ ಹೆಚ್ಚಾಯಿತು ಎನ್ನುವುದು ಇಲ್ಲಿ ಸ್ಪಷ್ಟಗೊಳ್ಳುತ್ತದೆ.

**ರಾಮಲಿಂಗ ದೇವಾಲಯ ಬಾಗಿಲು ಹಾಕಿಕೊಳ್ಳುವ ಪ್ರಸಂಗ:** ಮುದನೂರಿನ ವಿಪ್ರರು ದಾಸಿಮಯ್ಯನ ಭಕ್ತಿಗೆ ಕರುಬಿ ಆತನನ್ನು ದೇವಾಲಯದಿಂದ ದೂರವಿರಿಸಲು ಪ್ರಯತ್ನಿಸುತ್ತಾರೆ. ಮನನೊಂದು ದಾಸಿಮಯ್ಯ ದೇವಸ್ಥಾನಕ್ಕೆ ಹೋಗದಿರಲು ದೇವಾಲಯದ ಬಾಗಿಲು ಹಾಕಿಕೊಳ್ಳತ್ತದೆ. ಕೊಡಗೂಸಿನ ಕತೆಯಲ್ಲಿಯೂ ಶಿವನು ಹಾಲು ಕುಡಿದುದಾಗಿ ಹೇಳಿ, ತನ್ನ ಪ್ರಾಣಕ್ಕೆ ಕುತ್ತು ತಂದುಕೊಂಡ ಕೊಡಗೂಸಿಗೆ ಶಿವ ಸಾಕ್ಷಾತ್ಕಾರವಾಗುವಂತೆ ದಾಸಿಮಯ್ಯನ ಕತೆಯಲ್ಲಿ ದಾಸಿಮಯ್ಯ ಮರಳಿ ಬರುವರೆಗೂ ರಾಮೇಶ್ವರ ದೇವಾಲಯ ಬಾಗಿಲು ತೆರೆಯುವುದಿಲ್ಲ. ವಿಪ್ರರೇ ತಮ್ಮ ತಪ್ಪನ್ನು ಸರಿಪಡಿಸಿಕೊಂಡು ದಾಸಿಮಯ್ಯನನ್ನು ಕ್ಷಮೆ ಕೇಳಿ ವಾಪಾಸು ಕರೆಸಿಕೊಳ್ಳುತ್ತಾರೆ. ಕೆಂಬಾವಿ ಭೋಗಯ್ಯನು ಊರು ಬಿಟ್ಟು ಹೋದಾಗ ಅಲ್ಲಿನ ನೂರಾರು ಲಿಂಗಗಳು ಎದ್ದು ಆತನ ಹಿಂದೆ ಹೋಗುತ್ತವೆ. ನಂತರ ಆತನು ವಾಪಾಸು ಬರಲು ಲಿಂಗಗಳೆಲ್ಲ ತಮ್ಮ ಸ್ಥಾನವನ್ನು ಅಲಂಕರಿಸಿದವು ಎಂಬ ಕತೆ ದಾಸಿಮಯ್ಯನ ಕತೆಗೆ ಸಮೀಪವೆನಿಸುತ್ತದೆ.

ದಾಸಿಮಯ್ಯ ಹಾಗೂ ಭೊಗಣ್ಣ ಇಬ್ಬರು ಒಂದೇ ಪ್ರದೇಶದ, ಪರಿಸರದ ಶರಣರು. ಈ ಇಬ್ಬರ ಬಗೆಗೂ ಹುಟ್ಟಿದ ಕತೆಗಳು ಸಮೀಕರಣದ ದೃಷ್ಟಿಯಿಂದ ಒಂದೇ ಆಗಿವೆ. ಹಾಗೆ ನೋಡಿದಲ್ಲಿ ಈ ಕತೆಗಳು ತಮ್ಮ ಅಸ್ತಿತ್ವ ಪಡೆದದ್ದು ಒಂದೇ ಪರಿಸರದಲ್ಲಿ ಎನ್ನುವುದು ವಿಶೇಷ. ಮತ್ತೊಂದು ಅಂಶವೆಂದರೆ ಹೀಗೆ ದಾಸಿಮಯ್ಯ ದಂಪತಿಗಳು ಊರು ಬಿಟ್ಟು ಹೋಗುವಾಗ ರಾಮಯ್ಯನು ಇವರೊಟ್ಟಿಗೆ ನಡೆದನು. ಅವರು ಹೊರಟ ಬಂಡಿಯ ಚಕ್ರದ ಕೀಲು ಕಳಚಲು ಸ್ವಲ್ಪವೂ ಹಿಂದು ಮುಂದು ನೋಡದೇ ದುಗ್ಗಳೆ ಬೆರಳನಿಟ್ಟು ಬಂಡಿಯನ್ನು ನಡೆಸುವಳು ಎಂದು ಕಥೆ ಅನಾವರಣಗೊಳ್ಳುತ್ತದೆ.

**ಪೊಟ್ಟಲಕೆರೆಯಲ್ಲಿ ನಡೆದ ಪವಾಡಗಳು**

**ಘಟಸರ್ಪ ಪವಾಡ:** ಬಸವ ಪುರಾಣದಿಂದಲೂ ದೇವರದಾಸಿಮಯ್ಯನ ಬಗ್ಗೆ ಇರುವ ಪ್ರಸಿದ್ಧ ಪವಾಡ ಕಥೆ ಇದು. ಪೊಟ್ಟಲಕೆರೆಯಲ್ಲಿ ಜೈನರೊಂದಿಗೆ ವಾದ ಏರ್ಪಟ್ಟಾಗ ದಾಸಿಮಯ್ಯನನ್ನು ಪರೀಕ್ಷಿಸಲು ಘಟದಲ್ಲಿ ಸರ್ಪವನ್ನು ಹಾಕಿ, ದೇವರು ಸರ್ವವ್ಯಾಪಿ ಎಂದಿರುವೆ ಹಾಗಾದರೆ ಈ ಘಟದಲ್ಲಿರುವನೋ ತೋರಿಸೆನಲು ದಾಸಿಮಯ್ಯನು ಆ ಕೊಡದಲ್ಲಿ ಕೈ ಹಾಕಿದಾಗ ಆ ಸರ್ಪವು ಸ್ಫಟಿಕಲಿಂಗವಾಯಿತು. ಅದನ್ನೇ ಉತ್ತರೇಶ್ವರ ಲಿಂಗವಾಗಿ ಪ್ರತಿಷ್ಠಾಪಿಸಲಾಯಿತು. ಇದೇ ಬಸವ ಪುರಾಣದ ೫೦ನೇ ಸಂಧಿಯಲ್ಲಿ ಕುಮಾರಿಲಭಟ್ಟನ ಕತೆ ಬರುತ್ತದೆ. ಇಲ್ಲಿ ದಾಸಿಮಯ್ಯ ಜೈನರನ್ನು ವಾದದಲ್ಲಿ ಗೆದ್ದರೆ, ಅಲ್ಲಿ ಕುಮಾರಿಲಭಟ್ಟ ಬೌದ್ಧರನ್ನು ವಾದದಲ್ಲಿ ಗೆಲ್ಲುತ್ತಾನೆ. ಆತನ ಗೆಲುವನ್ನು ಸಹಿಸದ ಅವರು ಅಪವಾದವನ್ನು ಹೋರಿಸಿ ಸುಧನ್ವರಾಜನೆದುರು ಪರೀಕ್ಷಿಸಲು ಗಡಿಗೆಯಲ್ಲಿ ಹಾವನ್ನು ತಂದು ಪರೀಕ್ಷೆಗೆ ಒಡ್ಡುತ್ತಾರೆ. ಆಗ ಬೌದ್ಧರು ಇದರ ರಹಸ್ಯ ತಿಳಿದು ಗಡಿಗೆಯಲ್ಲಿ ಹಾವಿದೆ ಎಂದು ಹೇಳಿ ವಾದದಲ್ಲಿ ಗೆಲ್ಲಲು ಹವಣಿಸುತ್ತಾರೆ. ಆದರೆ ಕುಮಾರಿಲಭಟ್ಟನು ಅದರಲ್ಲಿ ನಾರಾಯಣನಿದ್ದಾನೆ ಎಂದು ಹೇಳುತ್ತಾನೆ. ಹಾಗೆ ಆ ಗಡಿಗೆಯಲ್ಲಿ ಕೈಹಾಕಲು ನಾರಾಯಣ ವಿಗ್ರಹವಿರುತ್ತದೆ.[೨೫]

'Encyclopaedia of Religion and Ethicsನ Vol ೭'ರಲ್ಲಿ[೨೬] ಇದೇ ಕಥೆ "ಜೈನರು ಕುಯುಕ್ತಿಯಿಂದ ಕಾಳ ಸರ್ಪವನ್ನು ಹರವಿಯಲ್ಲಿ ಮುಚ್ಚಿ ತಂದು ಶಿವನ ವ್ಯಾಪಕತ್ವವನ್ನು ತೋರು ಎನಲು ದಾಸಿಮಯ್ಯನು ಹರವಿಯಲ್ಲಿ ಕೈಹಾಕುತ್ತಾನೆ. ಆಗ ಹರವಿಯಲ್ಲಿನ ಹಾವನ್ನು ಹೊರ ತೆಗೆಯುತ್ತಾನೆ. ಅದು ಆತನ ಕೈಯಲ್ಲಿ ಅಡಗಿ ಹೋಗುತ್ತದೆ. ಆಗ ಜೈನರು ತಮ್ಮ ಸೋಲನ್ನೊಪ್ಪಿಕೊಂಡು ವೀರಶೈವ ಮತಾವಲಂಬಿಗಳಾಗುತ್ತಾರೆ ಎಂಬ ಕಥೆ ದಾಖಲಾಗಿದೆ. ಒಂದೇ ಕಥೆ ಹಲವು ಕಾವ್ಯಗಳಲ್ಲಿ ಹಲವು ರೀತಿಯಾಗಿ ಹರಡಿರುವುದು ವಿಶೇಷ.

**ಮಗುವನ್ನು ಬದುಕಿಸುವ ಪ್ರಸಂಗ:** ಈ ಪ್ರಸಂಗವು ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರದಲ್ಲಿ ಚಿತ್ರಿತವಾಗಿದೆ.[೨೭] ಜೈನರಿಗೆ ದಾಸಿಮಯ್ಯನನ್ನು ವಾದದಲ್ಲಿ ಸೋಲಿಸಲಾಗದಾಗ, ಅವರು ಜಿನೇಶ್ವರನು ಅರಳಿ ಮರದಲ್ಲಿದ್ದು ಆತನನ್ನೇ ಮಾತನಾಡಿಸುವ ಮೂಲಕ ಜಿನೇಶ್ವರನ ಅಸ್ತಿತ್ವವನ್ನು ತೋರುವುದಾಗಿ ಸವಾಲು ಹಾಕಿದರು. ಆ ಅರಳಿ ಮರದ ಪೊಟರೆಯಲ್ಲಿ ಒಬ್ಬ ಹುಡುಗನನ್ನು ನಿಲ್ಲಿಸಿ ಬಚ್ಚಿಡುತ್ತಾರೆ. ಜೈನರು ಕರೆದಾಗ ಆ ಹುಡುಗ ಮಾತನಾಡದೆ ಅಸುನೀಗಿರುತ್ತಾನೆ. ಆಗ ಜೈನರು ಮುಖಭಂಗಗೊಳ್ಳುತ್ತಾರೆ. ಆದರೆ ಹುಡುಗನ ತಾಯಿ ತನ್ನ ಮಗನ ಸಾವನ್ನು ಕಂಡು ಗೋಳಿಡುತ್ತಾ ಎಲ್ಲರನ್ನೂ ಬೇಡಲು, ತನ್ನ ಮಹಿಮೆಯಿಂದ ಆ

ಹುಡುಗನನ್ನು ದಾಸಿಮಯ್ಯನು ಬದುಕಿಸುತ್ತಾನೆ. ಭೈರವೇಶ್ವರ ಕಾವ್ಯದ ವಿಶೇಷತೆ ಇರುವುದೇ ಇಲ್ಲಿ. ದಾಸಿಮಯ್ಯನನ್ನು ಮತ್ತಷ್ಟು ಪ್ರಭಾವಶಾಲಿಯಾಗಿಸಿದ ಕಾವ್ಯವಿದು.

**ವಿಷ ಕುಡಿದ ಪ್ರಸಂಗ:** ಜ.ಚ.ನಿಯವರ ಸಂಗ್ರಹದಲ್ಲಿ ಈ ಕಥೆ ವ್ಯಕ್ತಗೊಂಡಿದೆ. ದಾಸಿಮಯ್ಯನನ್ನು ಹೇಗಾದರು ಮಾಡಿ ಸೋಲಿಸಬೇಕೆಂಬ ಹುನ್ನಾರದಲ್ಲಿ ಜೈನರು ಒಂದು ದಿನ ವಿಷ ಹಾಕಿದ ನೀರನ್ನು ತಂದು ದಾಸಿಮಯ್ಯನಿಗೆ ಕುಡಿಯಲು ಕೊಡುವರು ಇದನ್ನರಿತ ದಾಸಿಮಯ್ಯ ಆ ಜಲವನ್ನು ಲಿಂಗಕ್ಕೆ ತೋರಿಸಿ ಪರಶಿವನನ್ನು ನೆನೆದು ಕುಡಿಯುತ್ತಾನೆ. ಆ ವಿಷವು ಆತನಿಗೆ ಯಾವುದೇ ಪ್ರಾಣ ಬಾಧೆಯನ್ನು ನೀಡುವುದಿಲ್ಲ. ಶಿವನು ವಿಷಕಂಠನಾದ ಪ್ರಸಂಗವನ್ನು ಈ ಕಥೆ ನೆನಪಿಸುತ್ತದೆ. ಮಹಾಂತ ದೇಶಿಕನ 'ಶಿವಶರಣ ವಿಲಾಸ'ದಲ್ಲಿ ಈ ಕಥೆ ವೈಶಿಷ್ಠ ಪೂರ್ಣವಾಗಿ ಮೂಡಿ ಬಂದಿದೆ ಪಕ್ಷಿ ಮೃಗಾದಿಗಳು ಕುಡಿಯದಿರುವ ವಿಷ ಸರೋವರಕ್ಕೆ ದಾಸಿಮಯ್ಯನನ್ನು ಅಲ್ಲಿನ ಪರವಾದಿಗಳು ಕರೆದು ಕೊಂಡು ಹೋಗಿ ಅಲ್ಲಿಯ ಜಲದಲ್ಲೂ ಶಿವನಿರುವನೇ ಎಂದು ಕೇಳಲು, ದಾಸಿಮಯ್ಯ ಆ ಜಲದಲ್ಲಿ ಕೈ ಇಟ್ಟು ಅದನ್ನು ಶುದ್ಧಿಗೊಳಿಸುತ್ತಾನೆ. ಈ ಪವಾಡಗಳೊಟ್ಟಿಗೆ ದಾಸಿಮಯ್ಯನವೇ ಎನಿಸಿದ ಮತ್ತೆರಡು ಪವಾಡ ಕಥೆಗಳು ದೊರೆಯುತ್ತವೆ. ಇವು ದೇವರದಾಸಿಮಯ್ಯನಿಗೆ ಸಂಬಂಧಿಸಿದವೋ, ಜೇಡರದಾಸಿಮಯ್ಯನಿಗೆ ಸಂಬಂಧಸಿದವೋ ತಿಳಿಯುವುದಿಲ್ಲ. ಏಕೆಂದರೆ ಇವು ದಾಖಲಾಗಿರುವುದು ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರದಲ್ಲಿ ಈ ಹೊತ್ತಿಗಾಗಲೇ ಈ ಇಬ್ಬರು ಶರಣರನ್ನು ಒಬ್ಬರಲ್ಲಿ ಒಬ್ಬರನ್ನು ಸಮೀಕರಿಸಿದ ಬರಹ ಪರಂಪರೆ ಶುರುವಾಗಿತ್ತು.

**ಪಿಪೀಲಿಕ (ಇರುವೆ) ಮಾತನಾಡಿದ ಕಥೆ:** ಬಂಡಾರು ತಮ್ಮಯ್ಯನವರು ಸಂಪಾದಿಸಿದ ಬಸವಪುರಾಣ ದಲ್ಲಿ ಒಂದು ಉಕ್ತಿ ಇದೆ.

"ವೆಲಯ(ಗ ದಾಸಮಯ್ಯಲ) ವಾದಲೋನ
ನಿಲ (ಬಿಪೀಲಿಕೆಯಂದು) ಬಲಿಕಿನ ಶಿವುಡ.[೨೮]

'ಕಿನ್ನರ ಬ್ರಹ್ಮನೂ ಶಿವನನ್ನು ಮಾತನಾಡಿಸಲೋಸುಗ ಅವನನ್ನು ಸೋತ್ರ ಮಾಡುವ ಸಂದರ್ಭದಲ್ಲಿ, ದಾಸಿಮಯ್ಯನು ವಾದದಲ್ಲಿ ಪಿಪೀಲಿಕೆಯಲ್ಲಿ ಮಾತನಾಡಿದ್ದು ಶಿವನೇ' ಎಂದು ದಾಖಲಿಸಿರುವರು. ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರದ ಭಾಗ–೨[೯]ರಲ್ಲಿ 'ಪಿಪ್ಪಲೀಕ' ಎಂದಿದೆ. "ಪಿಪ್ಪಲೀಕ" ಎಂದರೆ ಅರಳಿ ಮರವನ್ನು ಮಾತಾಡಿಸುವುದು ಎಂದರ್ಥ ಹಾಗಾದ ಪಕ್ಷದಲ್ಲಿ ಇಲ್ಲಿ 'ಇರುವೆಯನ್ನು ಮಾತನಾಡಿಸಿದನೆಂತಲೋ ಅಥವಾ ಮರವನ್ನು ಮಾತಾಡಿಸಿದನೆಂತಲೋ ತಿಳಿಯದು. ಮುದನೂರಿನಲ್ಲಿ ಈ ಘಟನೆ ನಡೆದಿರುವುದರಿಂದ ಮುದನೂರು ಜೇಡರದಾಸಿಮಯ್ಯನು ಅಲ್ಲಿನ ಬೌದ್ಧರೊಂದಿಗಿನ ವಾದಕ್ಕೆ ಸಂಬಂಧಿಸಿದ್ದೆನ್ನಬಹುದು.

ಜ.ಚ.ನಿ ಯವರ ಸಂಗ್ರಹದಲ್ಲಿ[೩೦] ಹೀಗಿದೆ. ಪೊಟ್ಟಲಕೆರೆಯಿಂದ ತನ್ನ ಊರಾದ ಮುದನೂರಿಗೆ ವಾಪಾಸಾದ ದಾಸಿಮಯ್ಯ ಶಿವಭಕ್ತಿ, ಧ್ಯಾನದಲ್ಲಿ ಮುಳುಗಿದ್ದು. ಬೌದ್ಧರು ಇದನ್ನು ಸಹಿಸದೆ ಶಿವನೇ ಶ್ರೇಷ್ಠನೆನ್ನುವೆ. ಎಲ್ಲೆಲ್ಲಿಯೂ ಶಿವನಿದ್ದಾನೆ ಎನ್ನುವೆ ಹಾಗಾದರೆ ಈ ಇರುವೆಯಲ್ಲಿ ಶಿವನನ್ನು ತೋರಿಸು ಎನ್ನಲು ಇರುವೆಯನ್ನು ತದೇಕ ಚಿತ್ತನಾಗಿ ನೋಡಲು ಆ ಇರುವೆಯು ಲಿಂಗವಾಗಿ ಕಾಣುವುದು. ಇನ್ನೂ ಮುಂದಕ್ಕೆ ಹೋಗಿ ಲಿಂಗವನ್ನು ಮಾತಾಡಿಸು ಎನಲು, ದಾಸಿಮಯ್ಯನ ಧ್ಯಾನದಿಂದ ರಾಮೇಶ್ವರನು ತನ್ನ ಅಶರೀರ ವಾಣಿಯಿಂದ ತಾನೇ ಸರ್ವವ್ಯಾಪಿ ಎಂಬುದನ್ನು ತಿಳಿಸಲು ಬೌದ್ಧರು ಶೈವರಾಗಿ ದೀಕ್ಷೆಪಡೆಯುವರು. ಇದೇ ಕಥೆ 'ಕನ್ನಡ ವಚನ ದೇವಾಂಗ ಪುರಾಣ'[೩೧]ದಲ್ಲಿಯೂ ವರ್ಣಿಸಲ್ಪಟ್ಟಿದೆ.

**ಗೌತಮಿ ನದಿ ದಾರಿ ಬಿಟ್ಟ ಕಥೆ:** : 'ಭೈರವೇಶ್ವರ ಕಾವ್ಯದ ಕಥಾ ಮಣಿ ಸೂತ್ರ ರತ್ನಾಕರ'[೩೨] ಹಾಗೂ ಅಮುಗಿದೇವಯ್ಯಗಳ ಸಾಂಗತ್ಯದಲ್ಲಿ ಇದರ ಬಗ್ಗೆ ಉಲ್ಲೇಖವಿದೆ. ಒಮ್ಮೆ ದಾಸಿಮಯ್ಯನು ತನ್ನ ಶಿಷ್ಯರೊಡಗೂಡಿ ಮದುವೆ ಕಾರ್ಯಕ್ಕೆ ಹೋಗುತ್ತಿರುವಾಗ ಗೌತಮಿ ನದಿ ಕರೆಗಟ್ಟಿ ಹರಿಯುತ್ತಿದ್ದು, ದಾಸಿಮಯ್ಯನು ಅಲ್ಲಿಗೆ ಬರುತ್ತಲೇ ಆ ನದಿ ಇಬ್ಭಾಗವಾಗಿ ದಾರಿಬಿಟ್ಟಿತು. ಹೀಗೆ ದಾಸಿಮಯ್ಯರ ಬಗೆಗೆ ಹಲವು ಪವಾಡ ಕಥೆಗಳು ಪ್ರಚಲಿತದಲ್ಲಿವೆ. ಹರಿಹರನ ಶಂಕರ ದಾಸಿಮಯ್ಯನ ರಗಳೆಯಲ್ಲಿ ಬಂದ ಜೇಡರದಾಸಿಮಯ್ಯನ ಕಥೆಗಳೂ ಹಾಗೂ ಬಸವಪುರಾಣದ ದೇವರದಾಸಿಮಯ್ಯನ ಕಥೆಗಳೂ ಕಾಲಾನಂತರದಲ್ಲಿ ತಮ್ಮ ಪಾತ್ರವನ್ನು ವಿಸ್ತಾರಗೊಳಿಸಿಕೊಳ್ಳುತ್ತಾ ಸಾಗಿರುವುದನ್ನು ಸಾಹಿತ್ಯದ ಚರಿತ್ರೆಯಲ್ಲಿ ಕಾಣಬಹುದು. ಪ್ರಾರಂಭದಲ್ಲಿ ತವನಿಧಿಯ ಪವಾಡವನ್ನು ಮಾತ್ರ ಉಲ್ಲೇಖಿಸಿದ ಕಾವ್ಯಗಳು ಭೈರವೇಶ್ವರ ಕಾವ್ಯದ ಹೊತ್ತಿಗೆ ಹಲವು ಕಥೆಗಳನ್ನು ಹೆಣೆದು ಅವರ ಜೀವನದ ವೈಶಿಷ್ಟ್ಯವನ್ನು ವಿಸ್ತಾರ ಗೊಳಿಸಿದ್ದನ್ನು ಕಾಣತ್ತೇವೆ.

ಈ ಎಲ್ಲವುಗಳಿಗೂ ವಿಭಿನ್ನವೆಂಬಂತೆ ರಚನೆಯಾದ ಕಾವ್ಯಗಳು ಮಹಾಂತ ದೇಶಿಕನ 'ಶಿವಶರಣ ವಿಲಾಸ' ಮತ್ತು ರಾಘವಾಂಕನದೆನ್ನಲಾದ 'ದೇವಾಂಗ ದಾಸಿಮಯ್ಯ ಪುರಾಣ'. ಶಿವಶರಣ ವಿಲಾಸದಲ್ಲಿ ದೇಸಿಂಗ ರಾಯನ ಪತ್ನಿ ಸುಗ್ಗಲೆಯು ಶೈವಾಚಾರಾಸಕ್ತಳಾಗಿದ್ದಳು. ಇದನ್ನು ಸಹಿಸದ ರಾಜ ಆಕೆಯನ್ನು ನಿಂದಿಸಲು, ಆಕೆ ಬೇಕಾದಲ್ಲಿ ವಾದಗೋಷ್ಠಿ ಏರ್ಪಡಿಸಿ ತನ್ನ ಗುರು ದಾಸಿಮಯ್ಯನನ್ನು ಪರೀಕ್ಷಿಸ ಬಹುದೆಂದಳು. ಅಲ್ಲಿಂದ ಜೈನ ಸಿದ್ಧಾಂತವಾದಿಗಳು ಪರೀಕ್ಷೆಯನ್ನೊಡಲು ಸರ್ಪಪವಾಡ, ವಿಷ ಸರೋವರವನ್ನು ಶುದ್ಧಗೊಳಿಸಿದ ಪವಾಡ ಮೊದಲಾದವನ್ನು ತೋರಿ ಜಯಿಸಲು, ಮುಖಗೊಂಡ ಪರವಾದಿಗಳು ಬಿಜ್ಜಳನಲ್ಲಿ ದೂರು ನೀಡುತ್ತಾರೆ. ಆಗ ಬಿಜ್ಜಳ ಕೋಪಗೊಂಡು ದಾಸಿಮಾರ್ಯನನ್ನು ಶಿಕ್ಷಿಸಲು ನಿಶ್ಚಯಿಸಿದಾಗ

ಬಸವಣ್ಣ ಆತನ ಹುಟ್ಟು ಮತ್ತು ಆತನ ದಿವ್ಯ ಜ್ಞಾನ, ಪವಾಡದಿಂದ ಮಾಡಿದ ಒಳಿತು ಮೊದಲಾದವುಗಳನ್ನು ಅಲ್ಲಿನ ಜನಗಳಿಗೆ ಹೇಳಲು; ಬಿಜ್ಜಳ ದಾಸಿಮಯ್ಯನಿಗೆ ಕ್ಷಮೆ ಕೇಳುತ್ತಾನೆ. ದೇಸಿಂಗ ರಾಯನನ್ನು ಬಿಜ್ಜಳ ಎಂದು ಕರೆದೋ ಅಥವಾ ಈ ಇಬ್ಬರೂ ಬೇರೆ ಬೇರೆಯೋ ತಿಳಿಯದಂತೆ ಈ ಕಾವ್ಯದಲ್ಲಿ ಗೊಂದಲವುಂಟಾಗಿದೆ.

ಇದಷ್ಟೇ ಅಲ್ಲದೇ ದಾಸಿಮಯ್ಯನ ಕುರಿತ ಈ ಎಲ್ಲಾ ಕಾವ್ಯಗಳನ್ನು ಅನುಲಕ್ಷಿಸಿದಾಗ ದಾಸಿಮಯ್ಯನ ಬಗೆಗಿನ ಮತ್ತು ಆತನ ಜೀವನ ಗತಿಗಳಲ್ಲಿ ಅನೇಕ ಸಾಂಸ್ಕೃತಿಕ ಅಂಶಗಳು ಹಾಸು ಹೊಕ್ಕಾಗಿ ಸೇರಿಹೋಗಿವೆ. ದಾಸಿಮಯ್ಯನು ಸ್ವೀಕರಿಸುತ್ತಿದ್ಧ ಆಹಾರ, ಶಿವಾಚಾರ, ಅಷ್ಟಾವರಣಗಳು, ಧರ್ಮ ವಿಚಾರಗಳು, ಕುಲ ವಿಚಾರ, ಆತ ನೆಲೆನಿಂತ ಸ್ಥಳಗಳು, ಶೈವಮತಗಳ ಬಗೆಗಿನ ಸಂಬಂಧ ಮೊದಲಾದವುಗಳ ಬಗ್ಗೆ ಕಾವ್ಯಗಳು ಅನಾವರಣಗೊಳಿಸುತ್ತವೆ.

**೫.೫.೫. ಆಹಾರ ಪದ್ಧತಿ**

ದಾಸಿಮಯ್ಯನು ಸಾಮಾನ್ಯವಾದ ಜನಸಾಮಾನ್ಯರ ಆಹಾರವನ್ನೇ ಸ್ವೀಕರಿಸುತ್ತಿದ್ದುದಾಗಿ ತಿಳಿದು ಬರುತ್ತದೆ. ಕಾವ್ಯಗಳಲ್ಲಿ ದಾಖಲಾಗಿರುವಂತೆ ಧಾನ್ಯಗಳನ್ನು, ಬಹುಶಃ ಅಕ್ಕಿಯಿಂದ ಮಾಡಿದ ಅಂಬಲಿ, ಅಕ್ಕಿ ಪಾಯಸ(ಮಳಲಕ್ಕಿ) ಷಡುರಸಾನ್ನ ಮೊದಲಾದವುಗಳನ್ನು ಆಹಾರವಾಗಿ ಬಳಸುತ್ತಿದ್ದುದು ತಿಳಿದು ಬರುತ್ತದೆ.

'ಷಡುರಸಾನ್ನ' ಕಲ್ಲಿನ ತುಂಡುಗಳಿಂದ ದುಗ್ಗಳೆಯು ಷಡುರಸನ್ನಾ ಮಾಡಿ ಬಡಿಸಿದಳು ಎಂಬ ಉಲ್ಲೇಖ ರಾಘವಾಂಕನದೆನ್ನಲಾದ ಕಾವ್ಯದಲ್ಲಿ ಉಲ್ಲೇಖವಿದೆ. ಷಡ್ರಸ ಎಂದರೆ ಉಪ್ಪು, ಕಾರ, ಹುಳಿ, ಕಹಿ, ಮತ್ತು ಒಗರು ಈ ಆರು ಬಗೆಯ ರುಚಿಗಳನ್ನು ಹೊಂದಿದ ಆಹಾರ ಪದಾರ್ಥ. ಇನ್ನು 'ಅಂಬಲಿ', 'ಅಂಬಲಿಕ' ಎಂಬ ಪದಗಳು ಕಾವ್ಯಗಳಲ್ಲಿ ಬಂದುಹೋಗಿವೆ. ಇದು 'ಗಂಜಿ' ಎಂಬ ಅರ್ಥವನ್ನು ನೀಡುತ್ತವೆ, ಆದರೂ ಶಬ್ದಕೋಶದ ಪ್ರಕಾರ 'ಇದು ಒಂದು ದೇಶ್ಯ ಶಬ್ದ. ಇದು ದ್ರಾವಿಡ ಭಾಷೆಗಳಲ್ಲಿ ಕಾಣುವ ಜ್ಞಾತಿ ಶಬ್ದಗಳಿಂದ ಸ್ಪಷ್ಟ. ಅಂಬಲಿ ಶಬ್ದಕ್ಕೆ ಅಂಬಲ, ಅಂಬಲಿ, ಅಂಬಿಲೆ ಎಂಬ ಪರ್ಯಾಯ ರೂಪಗಳಿವೆ. ಇದು ಒಂದು ಬಗೆಯ ಅಡಿಗೆಯ ಪದಾರ್ಥ. ರಾಗಿಯ ಹಿಟ್ಟು, ಗೋಧಿಯ ಹಿಟ್ಟು, ಜೋಳದ ಹಿಟ್ಟು, ಅಕ್ಕಿ ಮೊದಲಾದವುಗಳಿಂದ ತಯಾರು ಮಾಡಿದ ಗಂಜಿ. ಅನ್ನವನ್ನೇ ಬೇಯಿಸಿದಾಗ ಬಸಿದು ಬಂದ ಗಂಜಿ' ಎಂದು ಜಿ.ವೆಂಕಟಸುಬ್ಬಯ್ಯ ಅವರು ಇಗೋ ಕನ್ನಡದಲ್ಲಿ ವ್ಯಾಖ್ಯಾನಿಸುತ್ತಾರೆ. ಬಡವರ ಪಾಲಿನ 'ರಸಾಯನ' ವೆಂದೇ ಕರೆಯಲಾಗುತ್ತದೆ. ಇದರೊಂದಿಗೆ ಮೆಣಸು, ಸಾಂಬಾರು ಪದಾರ್ಥಗಳ ಹೊರತಾಗಿ ಜೇಡರದಾಸಿಮಯ್ಯನ ಆಹಾರದ ಬಗ್ಗೆ ವಿವರಗಳು ದೊರೆಯುವುದಿಲ್ಲ.

### ೫.೫.೬. ಶೈವ ಪ್ರತಿನಿಧಿಯಾಗಿ, ಆಂದೋಲನಾಕಾರನಾಗಿ ದಾಸಿಮಯ್ಯ

ಹೊಸ ಸಮಾಜದ ನಿರ್ಮಾಣದ ಹೊಣೆ ಹೊತ್ತ ವಚನಕಾರರು ಮೇಲ್ವರ್ಗದವರು, ಶ್ರೀಮಂತರು, ರಾಜರುಗಳನ್ನು ನಿರ್ಲಕ್ಷಿಸಿ ನೇರವಾಗಿ ಜನ ಸಾಮಾನ್ಯರನ್ನು ಗಣನೆಗೆ ತೆಗೆದುಕೊಂಡರು. ಅವರ ಮೌಢ್ಯತೆಗಳನ್ನು ತೊಡೆದು ಹಾಕಿ ಆರೋಗ್ಯಕರ ಆಚರಣೆಗಳನ್ನು, ಚಿಂತನೆಗಳನ್ನು ಸಮಾಜದಲ್ಲಿ ಬಿತ್ತಿದರು. ಇಂತಹ ಒಂದು ಆಂದೋಲನ ಕಾರ್ಯ ಅನಿವಾರ್ಯವೂ, ಅವಶ್ಯಕವೂ ಆಗಿತ್ತು. "ಬಸವ ಪೂರ್ವ ಯುಗದಲ್ಲಿ ಕಂಡುಬರುವ ಪ್ರತಿಭಟನೆ ಮುಖ್ಯವಾಗಿ ಧರ್ಮ ಸಂಬಂಧಿಯಾದುದು. ಶಿವ ಅಥವಾ ಶಿವಭಕ್ತಿಗೆ ಅನ್ಯಾಯವಾದುದು ಕಂಡು ಬಂದಾಗ ಅದಕ್ಕಾಗಿ ತೋರಿದ ಪ್ರತಿಭಟನೆಯನ್ನೇ ನಾವು ನೋಡುವುದು. ರಾಜನಿಗೆ ನಮಸ್ಕರಿಸುವುದಿಲ್ಲ: ಶಿವನಿಗೆ ನಮಸ್ಕರಿಸುತ್ತೇನೆ. ಶಿವಭಕ್ತನಾಗಿರುವ ಹೊಲೆಯ ಹೊಲೆಯ ಅಲ್ಲ. ತನ್ನಂತಯೇ ಶಿವಭಕ್ತ–ಅವನ ಸಮಾನತೆಯನ್ನು ತಾನು ಒಪ್ಪಿಕೊಂಡಿರುವುದನ್ನು ರಾಜ ಪ್ರಶ್ನಿಸುವುದಾದರೆ ತಾನು ಊರನ್ನೇ ಬಿಡಲು ಸಿದ್ಧ. ಈ ರೀತಿಯ ಪ್ರತಿಭಟನೆಯನ್ನು ಸಾಮಾಜಿಕ ಆಂದೋಲನವೆಂದು ಕರೆಯಲಾಗದಿದ್ದರೂ ವ್ಯಕ್ತಿ ತಾನು ನಂಬಿದ ಯಾವುದೋ ನಂಬಿಕೆಗಾಗಿ ಆದರ್ಶಕ್ಕಾಗಿ ಎದೆಸೆಟೆದು ನಿಲ್ಲುವ ಮತ್ತು ತನ್ನ ಸುಖದ ತ್ಯಾಗಕ್ಕೂ ಸಿದ್ಧವಾಗುವ ಛಲಗಾರಿಕೆ ಇಲ್ಲಿ ಕಾಣುತ್ತದೆ. ಹೀಗೆ ಎದೆ ಸೆಡೆದು ನಿಂತವರೆಲ್ಲ ನಮಗೆ ತಿಳಿದಮಟ್ಟಿಗೆ ಬ್ರಾಹ್ಮಣೇತರರು. ಕರ್ನಾಟಕ ಈ ಆದ್ಯ ಆಂದೋಲನಕಾರರಿಗೆ ಯಾರು ಪ್ರಚೋದಕರೋ ನಮಗೆ ತಿಳಿಯದು; ಆದರೆ ಇವರು ಬಸವ ಮೊದಲಾದವರಿಗೆ ಸ್ಫೂರ್ತಿಯಾದರು ಎಂಬುದರಲ್ಲಿ ಅನುಮಾನವಿಲ್ಲ. ಇವರು ವ್ಯಕ್ತಿಯ ಮಟ್ಟದಲ್ಲಿ ಆರಂಭಿಸಿದ ಕಾರ್ಯವನ್ನು ಮುಂದುವರಿಸಿ, ಒಂದು ಮಹಾ ಸಾಮಾಜಿಕ ಆಂದೋಲನವನ್ನು ಯಶಸ್ವಿಗೊಳಿಸಿದವರು ವಚನಕಾರರು."[೨೨] ಹೀಗೆ ಬಸವಪೂರ್ವದ ಆದ್ಯ ಆಂದೋಲನಕಾರರ ಸಾಲಿಗೆ ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯರು ಸೇರಿರುವುದನ್ನ ಕಾಣುತ್ತೇವೆ. ಆ ಕಾಲದಲ್ಲಿ ನಡೆದ ಆಂದೋಲನ ಧರ್ಮದ್ದು, ಸಾಮಾಜಿಕ ನ್ಯಾಯದ್ದು, ಒಂದು ಸಾಂಸ್ಕೃತಿಕ ಕುರುಹು ಆಗಿತ್ತೆನ್ನಬಹುದು.

ದಾಸಿಮಯ್ಯನು ಶಿವಶರಣವಿಲಾದಲ್ಲಿ ತಿಳಿಸುವಂತೆ ಧರ್ಮ ಪ್ರಸಾರವನ್ನು ಮಾಡುತ್ತಾ ಒಂದು ರೀತಿಯ ಆಂದೋಲನವೇ ಏರ್ಪಡುತ್ತದೆ. ದುಗ್ಗಳೆ–ದಾಸಿಮಯ್ಯರು ಮುದನೂರನ್ನು ಬಿಟ್ಟು ಹೊರಡುವಾಗ ಮಾರ್ಗ–ಮಧ್ಯದಲ್ಲಿ ಕ್ರೂರಿಗಳಾದ ಬೇಟೆಗಾರರು ಸಿಗುತ್ತಾರೆ. ಅವರನ್ನು ಉಪದೇಶದ ಮೂಲಕ ದಾಸಿಮಯ್ಯ ಮನ ಪರಿವರ್ತನೆ ಮಾಡಿ ಅವರಿಗೆ ಲಿಂಗಧಾರಣೆ ಮಾಡುತ್ತಾನೆ. ಅವರು 'ತಿಲಗಾಣ' ಕಾಯಕವನ್ನು ಕೈಗೊಂಡು ಗುರು ಜಂಗಮ ಸೇವೆಯಲ್ಲಿ ನಿರತರಾಗುತ್ತಾರೆ. ಹೀಗೆ ಮುಂದೆ ಹೊರಡಲು ಗೌಡಗೆರೆ ಗ್ರಾಮಯ ಒಕ್ಕಲಿಗ ಮುದ್ದಯ್ಯ

ಸಿಗುತ್ತಾನೆ. ಈ ದಂಪತಿಗಳನ್ನು ಆದರಿಂದ ಬರಮಾಡಿಕೊಂಡು ಲಿಂಗಧಾರಣೆ ಅನುಗ್ರಹಿಸು ಎಂದು ಕೇಳಿಕೊಳ್ಳುತ್ತಾನೆ. ಆಗ ದಾಸಿಮಯ್ಯನು ಆತನ ತಾಳ್ಮೆ, ಭಕ್ತಿಗೆ ಮೆಚ್ಚಿ ಆತನೊಂದಿಗೆ ಮುದ್ದಯ್ಯನ ೧೨ ಸಾವಿರ ಬಂಧುಗಳಿಗೂ ಲಿಂಗಧಾರಣೆ ಮಾಡಿ ದೀಕ್ಷೋಪದೇಶ ನೀಡುತ್ತಾನೆ. ನಂತರ ಬ್ರಾಹ್ಮಣರ ರಾಮದೇವರ ಗುಡಿಯನ್ನು ಶಿವಲಿಂಗವಾಗಿಸಿ ಅಲ್ಲಿನ ಬ್ರಾಹ್ಮಣಿರಿಗೆಲ್ಲರಿಗೂ ಲಿಂಗಧಾರಣೆ ಮಾಡಿ ಉಪದೇಶವನ್ನು ನೀಡುತ್ತಾನೆ. ದಾಸಿಮಯ್ಯನ ಚರಿತ್ರೆಯ ನಿರ್ಮಾಣದಲ್ಲಿ ದಾಸಿಮಯ್ಯನು ಅನ್ಯ ಮತದವರ ಅಂಧ ಶ್ರದ್ಧೆಯನ್ನು ನೀಗಿಸಿದ ಅಥವಾ ಅವರನ್ನು ಮತಾಂತರಗೊಳಿಸಿ ಆಂದೋಲನವನ್ನೇ ಮಾಡಿದಂತೆ ಕಥೆಗಳಲ್ಲಿ ನಿರೂಪಿತವಾಗಿದೆ. ಪೊಟ್ಟಲಕೆರೆಯ ಜೈನರೊಂದಿಗೆ ಇತರ ಮತದವರು, ದೇವಾಂಗರನ್ನೂ ಒಳಗೊಂಡು, ಮುದನೂರಿನ ಬೌದ್ಧರು, ವೈಷ್ಣವರು ಮೊದಲಾದವರನ್ನು ಮತಾಂತರಗೊಳಿಸಿ ಧರ್ಮ ಪ್ರಸಾರದ ಆಂದೋಲನವನ್ನೇ ನಿರ್ಮಿಸಿದುದಾಗಿ ತಿಳಿಯುತ್ತದೆ.

### ೫.೫.೭. ವೃತ್ತಿಗಳು

ಇಲ್ಲಿ ಹಲವು ವೃತ್ತಿಗಳ ಪ್ರಸ್ತಾಪವೂ ಇದೆ. ಜೇಡರದಾಸಿಮಯ್ಯನು ನೇಕಾರಿಕೆಯನ್ನಷ್ಟೆ ತನ್ನ ವೃತ್ತಿಯನ್ನಾಗಿಸಿಕೊಂಡಿರಲಿಲ್ಲ. ಜೊತೆಗೆ ಕೃಷಿ ಕಾಯಕವನ್ನೂ ಮಾಡುತ್ತಿದ್ದ ಎನ್ನುವುದು ತಿಳಿಯುತ್ತದೆ. ಈ ಬಗ್ಗೆ ವಿರೂಪಾಕ್ಷದೇಶಿಕನ ಕಾವ್ಯದ ಮೊದಲ ಸಂಧಿಯಲ್ಲಿ ವಿಸ್ತಾರವಾಗಿ ದಾಖಲಿಸಲಾಗಿದೆ. ಈ ಎರಡು ವೃತ್ತಿಗಳೊಂದಿಗೆ ಪುರಾಣ ಕಾವ್ಯಗಳಲ್ಲಿ 'ತಿಲಗಾಣ' (ತಿಲಗಾಣವೆಂದರೆ; ತಿಲ ಎಂದರೆ ಎಳ್ಳು, ಎಳ್ಳನ್ನು ಗಾಣಕ್ಕೆಹಾಕಿ ಎಣ್ಣೆ ತೆಗೆಯುವುದು), ಒಕ್ಕಲಿಗ(ವ್ಯವಸಾಯ), ಅರ್ಚಕ, ಬೇಟೆಗಾರ ವೃತ್ತಿ ಮೊದಲಾದವುಗಳ ಉಲ್ಲೇಖವಿದೆ. ಕಾಯಕ ಸಂಬಂಧಿತವಾದ ಅನೇಕ ಜನಾಂಗಾಧಾರಿತ ವೃತ್ತಿಗಳನ್ನು ಇಲ್ಲಿ ಕಾಣಬಹುದು. ಇವುಗಳೊಂದಿಗೆ ರಾಜ, ರಾಜ ಪಂಡಿತ (ಆಸ್ಥಾನ ಪಂಡಿತ), ಮಂತ್ರಿ, ರಾಜ ಗುರು ಮೊದಲಾದ ಕಾಯಕಗಳು ಒಂದೆಡೆಯಾದರೆ, ದುಡಿದು, ಕಷ್ಟಪಟ್ಟು ಬದುಕ ನಡೆಸುವ ಕಾಯಕ ಇನ್ನೊಂದೆಡೆ. ಅಂತೆಯೇ ಕ್ರೂರರಾಗಿ ಬೇಟೆಯಾಡಿ, ಕೊಲೆಗೈದು ಬದುಕುವ ವೃತ್ತಿ ಮತ್ತೊಂದೆಡೆಯಾಗಿ ಚಿತ್ರಿತವಾಗಿರುವದನ್ನು ಕಾಣಬಹದು.

### ೫.೫.೮. ಕಾವ್ಯಗಳಲ್ಲಿ ಉಲ್ಲೇಖಗೊಂಡ ಮುದನೂರು

ಈಗಾಗಲೇ ಮುದನೂರಿನ ಬಗ್ಗೆ ಮೊದಲಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಆದರೂ ಕಾವ್ಯಗಳು ಮುದನೂರನ್ನು ಅಭಿನವ ಕೈಲಾಸ ಎಂದು ಕರೆದು ಬಣ್ಣಿಸಿವೆ. ವಿರೂಪಾಕ್ಷ ದೇಶಿಕನ ಕಾವ್ಯದಲ್ಲಿನ ಮುದನೂರು. ಅಲ್ಲಿನ ಸೌಕರ್ಯಗಳನ್ನು ಕಂಡಾಗ ದೈವಾಂಶ ಫಲಿತನಾಡಾಗಿ ವರ್ಣಿಸಲ್ಪಟ್ಟಿದೆ.

ಸುರಗಿರಿಯ ದಕ್ಷಿಣದ ಭಾಗದೊ
ಳುರೆ ಮೆರೆವ ಕರ್ನಾಟ ದೇಶದ
ಪರಿಯ ಪೇಳ್ವದ ಸಾಧ್ಯ ನಾಂ ಬಲ್ಲನಿತ ಪೇಳುವೆನು.[೨೪]

ಎಂದು ವಿರೂಪಾಕ್ಷ ದೇಶಿಕನು ವರ್ಣಿಸುತ್ತಾನೆ. ಎಲ್ಲಿ ನೋಡಲು ಅರವಟ್ಟಿಕೆಗಳು, ಎಲ್ಲಿ ನೋಡಲು ಅನ್ನ ಛತ್ರಗಳು, ಎಲ್ಲಿ ನೋಡಲು ಬಾಳೆ, ಬಸವಪುಂಡ್ರೇಕ್ಷು ದೋಟಗಳು, ಎಲ್ಲಿ ನೋಡಲು ಗದ್ದೆಗಳು. ಅರಣ್ಯಗಳು ಕಮಲ (ಸರಸಿ)ದ ಹೂದೋಟಗಳು. ನೀತಿ ನಿಪುಣತೆ, ನ್ಯಾಯ, ರೀತಿ, ವಿನಯ, ಮಂಗಳ ಎಲ್ಲದಕ್ಕೂ ಮುದನೂರು ಹೆಸರಾಗಿತ್ತು. ಖ್ಯಾತಿಗೆ, ಸಂಪತ್ತಿಗೆ, ಸೌಭಾಗ್ಯಕ್ಕೆ ಕೀರ್ತಿಯನ್ನು ಪಡೆದಿತ್ತು. ಇಲ್ಲಿ ಪ್ರೀತಿ, ಉದಾರಗುಣ, ವಿವೇಕ, ನೀತಜ್ಞಾನ, ವಿರಕ್ತಿ, ಭಕ್ತಿ ಎಲ್ಲ ಗುಣಗಳಿಗೆ ಹೆಸರಾದ ಪ್ರದೇಶ ಇದಾಗಿತ್ತು. ಅಷ್ಟೆ ಅಲ್ಲದೇ ಕೋಪ, ನಿಷ್ಠುರ, ನಿಷ್ಕರುಣ, ತ್ರೈತಾಪ, ಕರ್ಕಶ ಶೋಕ, ಕಪಟ, ಲೋಭ, ವ್ಯಾಧಿ, ಮದ, ಮತ್ಸರಗಳು, ಪಾಪಗಳು, ಮೋಸ–ಹಿಂಸೆಗಳು ಕರ್ನಾಟಕ ದೇಶದ ಈ ಪ್ರದೇಶದಲ್ಲಿ ಕಂಡು ಬರುವುದಿಲ್ಲ. ಎಲ್ಲರಿಗೂ ಸವಿಯಾಗಿ ಮೃದು ಮಧುರವಾಗಿ ಮುದನೂರು ಕಂಡು ಬರುತ್ತಿತ್ತು. ಅಲ್ಲಿನ ಪ್ರಾಣಿ ಪಕ್ಷಿಗಳು, ನಿಸರ್ಗವೂ ಸಹ ಇದಕ್ಕೆ ಪೂರಕವಾಗಿತ್ತು.

ಎಲ್ಲ ಸಸಿಯೆಂಬ ರ್ಭಕರು ಬಸು
ರಲ್ಲಿರಲು ಭೂ ದೇವಿ ತನ್ನಯ
ಸಲ್ಲಲಿತ ಪ್ರಸವೋತ್ಸವಕೆ ಪಸುರ್ವಸನವುಟ್ಟವೊಲು।
ಎಲ್ಲಸಿತ ಪಸುರೊಗರು ಭೂಮಿಯೆ
ಳೆಲ್ಲ ಮುಸುಕಲು ಬೀಗಿ ಬೆಳದಿಹ
ನೆಲ್ಲ ಗರ್ದೆಗಳೆಸದವಾ ಕರ್ನಾಟ ದೇಶದೊಳು[೨೫]

ಅಲ್ಲಿ ಪಾಮರಿಯೊರ್ವಳಾ ಗಿಳಿ
ಯೆಲ್ಲಾ ಪಾರಿಸುತಿರ್ಪ ಭಾವವು
ನಿಲ್ಲದೆ ಬರುತಿರ್ಪ ಪಾಂಥರಿಗಿಂತು ತೋರಿದುದು।
ಸಲ್ಲಲಿತ ಮೃಧು ಮಧುರ ಗುಣವಹ
ಸೊಲ್ಲಿಗಿ ನಿಮ್ಮಯ ನುಡಿಯು ಸರಿ
ಯಲ್ಲ ವೆಂದೆನುತವನು ಪಾರಿಸಿದಂತೆ ತೋರಿದುದು[೨೬]

ಅಲ್ಲಿನ ಒಂದೊಂದು ವೈಶಿಷ್ಟ್ಯತೆಗಳನ್ನು ವಿರೂಪಾಕ್ಷ ದೇಶಿಕನು ವರ್ಣಿಸುತ್ತಾನೆ. ಅದೇ ಕನ್ನಡ ವಚನ ದೇವಾಂಗ ಪುರಾಣದಲ್ಲಿ ಮುದನೂರು ಆಮೋದಪುರವೆಂದು ಕರೆಯಲ್ಪಟ್ಟು ಗಂಗಾಧರ ರಾಜನಿಂದ ಆಳ್ವಿಕೆಗೆ ಒಳಪಟ್ಟಿದೆ.

### ೫.೬. ಪೊಟ್ಟಲಕೆರೆ ಒಂದು ವಿಶ್ಲೇಷಣೆ

ಇದನ್ನು ಶಿವತತ್ವ ಚಿಂತಾಮಣಿಯಲ್ಲಿ 'ಪೊಢಚೆಱು' ಎಂದೂ ತೆಲುಗು ಬಸವ ಪುರಾಣದಲ್ಲಿ 'ಪೊಟ್ಲಚೆಱು' ಎಂದೂ ಕನ್ನಡ ಬಸವ ಪುರಾಣದಲ್ಲಿ 'ಹೊಟ್ಟಲಕೆರೆ' ಎಂತಲೂ, ಅಲ್ಲಿನ ಪ್ರಾದೇಶಿಕ ಶಾಸನಗಳಲ್ಲಿ 'ಪೊಟ್ಟಣಕೆರೆ ಎಂದೂ, 'ಪಾಟಣ್‌ಚಿರುವು'[೩೭] ಎಂದು ಅನೇಕ ಬಗೆಯಾಗಿ ಕರೆಯಲಾಗುತ್ತದೆ.

ಕಾವ್ಯಗಳಲ್ಲಿ ಉಲ್ಲೇಖಿತವಾದಂತೆ ಇಪ್ಪತ್ತು ಸಾವಿರ ಜೈನರನ್ನೂ, ೭೦೦ ಬಸದಿಗಳನ್ನು ಹೊಂದಿದ ಜಯಸಿಂಹನ ರಾಜಧಾನಿ ಈ ಪೊಟ್ಟಲ ಕೆರೆ, ಪೊಟ್ಟಲಕೆಯ ಶಾಸನದ ಪ್ರಕಾರ ಕ್ರಿ.ಶ ೧೦೩೪ರ ಶಾಸನದಲ್ಲಿ ಪೊಟ್ಟಲ ಕೆರೆಯು ಇಮ್ಮಡಿ ಜಯಸಿಂಹನ ರಾಜಧಾನಿಯಾಗಿದ್ದು ಸೂಚಿತವಾಗಿದೆ. ಅಲ್ಲಿ ಬುಧ ಸೇನ, ಜೀನಾಲಯಗಳಿದ್ದು, ಅವುಗಳಿಗೆ ದತ್ತಿ ನೀಡಲಾಗಿದೆ. ಅಲ್ಲಿನ 'ತೆಂಗಿನ ಮರ' ಹೆಸರಿನ ದೇವಾಲಯದ ದೇವತೆಯ ಹೆಸರು 'ಬೋಗೇಶ್ವರ ದೇವರು' ಆ ಊರಿನಲ್ಲಿ 'ನಗರೇಶ್ವರ' ' ಏಲೇಶ್ವರ' ಇತ್ಯಾದಿ ಹಲವು ಶೈವ ದೇವಾಲಯಗಳಿದ್ದುದಲ್ಲದೆ ಪಂಚಮಠ ಸ್ಥಾನ, ಕೂರ್ಮಮಠ ಸ್ಥಾನ ಇತ್ಯಾದಿ ಮಠಗಳು ಇದ್ದವು.[೩೮] ಅದೊಂದು ಧಾರ್ಮಿಕ ಕ್ಷೇತ್ರವಾಗಿದ್ದಿತು ಎಂದು ಬಂದು ಸತ್ಯ ಇಲ್ಲಿ ದಾಸಿಮಯ್ಯನಿಗೆಂದೇ ಒಂದು ಮಠ ವಿದ್ದು, ಅಲ್ಲಿ ದೇವ ದಾಸಿಮಯ್ಯನು ತಂಗಿದ್ದ ಒಬ್ಬ ಮಠಾಧೀಶನೋ, ಸನ್ಯಾಸಿಯೋ ಎಂದು ಭಾವಿಸಲು ಅನುವುಮಾಡಿಕೊಡುತ್ತದೆ.

ಈ ಪೊಟ್ಟಲಕೆರೆಯು ಆಂಧ್ರಪ್ರದೇಶದ ಹೈದರಬಾದಿನಿಂದ ಜೈರಾಬಾದಿಗೆ ಹೋಗುವ ದಾರಿಯಲ್ಲಿ ಬಲಗಡೆ ಸುಮಾರು ಇಪ್ಪತ್ತು ಮೈಲು ದೂರದಲ್ಲಿ ಪೊಟ್ಟಲಕೆರೆ ಎಂಬ ಊರಿದೆ. ಈಗ ಅಲ್ಲಿ ಪ್ರಬಲವಾಗಿರುವ ತೆಲುಗಿನಲ್ಲಿ ಅದರ ಹೆಸರು ಪೊಟ್ಲ ಚರು ಎಂದು ಮಾರ್ಪಟ್ಟಿದೆ. ಇಂಗ್ಲೀಷಿನಲ್ಲಿ Petamchare(!) ಎಂದಾಗಿದೆ. ಅಲ್ಲಿನ ಪ್ರಾಚೀನ ಗುಡಿಗೋಪುರಗಳು ಈಗ ನಾಶವಾಗಿವೆ. ಹಲವು ದೇವಾಲಯಗಳು ಈಗ ಮಸೀದಿಗಳಾಗಿವೆ. ಹಿಂದೂ ವಿಗ್ರಹಗಳು ಚೂರು ಚೂರಾಗಿ ಬೀದಿ ಬೀದಿಯಲ್ಲಿ ಬಿದ್ದಿವೆ. ದೇವರ ದಾಸಿಮಯ್ಯನು ಸ್ಥಾಪಿಸಿದ ನಾಗಲಿಂಗೇಶ್ವರ ದೇವಾಲಯವೂ ಅದರ ಮುಂದಣ ನಂದಿಯೂ ಅತ್ಯಂತ ದುಸ್ಥಿತಿಯಲ್ಲಿವೆ ಪಡುವಣ ಚಾಲುಕ್ಯರ ಕಾಲದ ಎರಡು ಕೆರೆಗಳು ಮಾತ್ರ ಇಂದಿಗೂ ಇವೆ. ಎಂದು ಗೋವಿಂದ ಪೈ ಯವರು ದಾಖಲಿಸುತ್ತಾರೆ.[೩೯]

ಡಾ.ಫ್ಲೀಟರಾದರೆ ಅದು "ಪಡುವಣ ಚಾಲುಕ್ಯ ಸಾಮ್ರಾಜ್ಯನಾದ ೧ನೇ ಜಗದೇಕಮಲ್ಲ ಜಯಸಿಂಹನ (ಕ್ರಿ.ಶ ೧೦೧೫-೪೨) ಶಾಸನಗಳಿಂದ ಪೊಟ್ಟಲಕೆರೆ ಆತನ ಉಪರಾಜಧಾನಿಗಳಲ್ಲಿ ಒಂದಾಗಿತ್ತು. ಆ ಪೊಟ್ಟಲಕೆರೆಯನ್ನು ಎಷ್ಟೋ ಹಿಂದೆ ಬಳ್ಳಾರಿ ಜಿಲ್ಲೆಯ ದಣ್ಣಾಯಕನ ಕೆರೆ ಎಂಬ ಊರಿನೊಂದಿಗೆ ಸಮೀಕರಿಸುತ್ತಾರೆ."[೪೦] ಈ ಉಲ್ಲೇಖವು Fleets Kenarese Dynarties ನ ಪುಟ ೪೩೭ರಲ್ಲಿ ದೊರೆಯುತ್ತದೆ.

ಪೊಟ್ಟಲಕೆರೆಯು ದೇವರ ದಾಸಿಮಯ್ಯ ಹಾಗೂ ಆತ ಪ್ರತಿಷ್ಠಾಪಿಸಿದ ಉತ್ತರೇಶ್ವರ ಲಿಂಗದೊಂದಿಗೆ ಸಾಂಸ್ಕೃತಿಕ ಅನನ್ಯತೆಯನ್ನು ಹೊಂದಿದೆ. ಶಾಸನಗಳಲ್ಲಿ, ಕಾವ್ಯಗಳಲ್ಲಿ ಉಕ್ತಗೊಂಡ ಈ ಸ್ಥಳ ಧಾರ್ಮಿಕವಾಗಿ ಸಾಂಸ್ಕೃತಿಕವಾಗಿ ವೈಶಿಷ್ಟ್ಯತೆಯನ್ನು ಹೊಂದಿದ್ದು, ಚಾಲುಕ್ಯ ರಾಜರ ಪೋಷಣೆಯಲ್ಲಿತ್ತು. ಜೈನ ಹಾಗೂ ವೀರಶೈವ ಅಥವಾ ಶೈವ ಕೇಂದ್ರವಾಗಿಯೂ ಚರಿತ್ರೆಯಲ್ಲಿ ಗುರುತಿಸಲ್ಪಟ್ಟಿದೆ.

### ೫.೭. 'ಉತ್ತರೇಶ್ವರ ದೇವಾಲಯ': ಒಂದು ವಿವೇಚನೆ

'ಉತ್ತರೇಶ್ವರ ಲಿಂಗ'ಎಂಬ ಹೆಸರು ಇದಕ್ಕೆ ಬಂದುದು ಸ್ವಾರಸ್ಯಪೂರ್ಣವಾಗಿದೆ. ವಾದಿರಾಜ ಎಂಬ ಕವಿ ಜಯಸಿಂಹನ ಆಸ್ಥಾನವನ್ನು ವಾಗ್ವಧೂಜನ್ಮಭೂಮಿ ಎಂದು ಕರೆದು ಆರಾಧಿಸಿದ್ದಾನೆ. ಇದೊಂದು ವಾದ ವೇದಿಕೆಯಾಗಿದ್ದುದಾಗಿ ದಾಖಲೆಯಾಗಿದೆ. 'ಉತ್ತರೇಶ್ವರ ದೈವದ' ಉದ್ಭವವು ವಾದಗೋಷ್ಠಿಯಿಂದ ಸಮರ್ಥನೆಗೊಂಡು ಉಂಟಾದುದು. ಬಸವಪುರಾಣದ ನಂತರ ಎಲ್ಲಾ ಕಾವ್ಯಗಳು ಇದನ್ನೇ ಪ್ರತಿಪಾದಿಸುತ್ತವೆ. ದೇವರದಾಸಿಮಯ್ಯನು ಸುಗ್ಗಲೆಯ ಕರೆಯಮೇರೆಗೆ ಪೊಟ್ಟಲಕೆರೆಗೆ ಹೋಗಿ ಅಲ್ಲಿನ ಜೈನರನ್ನು ವಾದದಲ್ಲಿ ಗೆದ್ದು, ನಂತರ ಘಟಸರ್ಪ ಪವಾಡ ಮೆರೆದು ಅದರಿಂದುಂಟಾದ ಸ್ಫಟಿಕಲಿಂಗಕ್ಕೆ 'ಉತ್ತರೇಶ್ವರ' ಎಂಬ ಹೆಸರನ್ನಿಟ್ಟಿದುದು ಕಾವ್ಯಾಧಾರಿತ ಕಥೆಯಾಗಿದೆ.

ಬಸವಪುರಾಣದ ಉಲ್ಲೇಖದ ಪ್ರಕಾರ ಈ ಉತ್ತರೇಶ್ವರ ಲಿಂಗವನ್ನು ಸ್ಥಾಪಿಸಲಾಯಿತು ಎಂದಿದೆ. ಆದರೆ ಇಲ್ಲಿನ ನಾಲ್ಕು ಕನ್ನಡ ಶಸನಗಳಲ್ಲಿ ಇದರ ಉಲ್ಲೇಖಗಳಿರುವುದಿಲ್ಲ. ಮುದನೂರಿನ ಒಂದು ಶಾಸನದಲ್ಲಿ ಉತ್ತರೇಶ್ವರ ದೇವಾಲಯಕ್ಕೆ ದತ್ತಿ ನೀಡಿದ ಉಲ್ಲೇಖವಿದೆ. ಎಂ.ಎಂ.ಕಲಬುರ್ಗಿ ಅವರ ಆಧಾರದಂತೆ[೪೧] ಎಳಮೇಲದ ಕ್ರಿ.ಶ ೧೦೪೪ರ ಶಾಸನ ಉತ್ತರೇಶ್ವರದೇವರಿಗೆ ದಾನ ನೀಡಿದ ಹೊಲದ ಮೇರೆಯನ್ನು ವಿವರಿಸುತ್ತದೆ. ಮಾರ್ಸನ್ ಹಳ್ಳಿ ಶಾಸನ ಉತ್ತರೇಶ್ವರ ದೇವಾಲಯದ ಮಠವನ್ನೂ, ಕಡ್ಲೇವಾಡ ಶಾಸನವು ಸಿಂಗದೇವರಸು ಉತ್ತರೇಶ್ವರ ಪಾದಾರಾದಕನಾಗಿದ್ದಂತೆಯೂ, ಬಾಲ್ಕಿ ಶಾಸನ ಉತ್ತರೇಶ್ವರ ದೇವರಿಗೆ ದತ್ತಿ

ಬಿಟ್ಟುದ್ದನ್ನು, ಹಿರೇಕೇರೂರಿನ ಕಣವಿಸಿದ್ಧಗಿರಿ ಶಾಸನ, ಬಳ್ಳಾರಿ ಜಿಲ್ಲೆಯ ಹಡಗಲಿ ತಾಲ್ಲೂಕಿನ ಏಣಿಗಿ ಗ್ರಾಮದ ಶಾಸನ, ಶಿರೂರು ಗ್ರಾಮದ ಸಂಸ್ಕೃತ ಶಾಸನ, ಜಮಖಂಡಿಯ ಶಾಸನ, ಕುರ್ತುಕೋಟಿಯ ಶಾಸನ ಹೀಗೆ ಕರ್ನಾಟಕದಲ್ಲಿ ಒಂಬತ್ತು, ಮಹಾರಾಷ್ಟ್ರದಲ್ಲಿ ಮಂಗಳವೇಡ ಗ್ರಾಮ ಹಾಗೂ ಬಾರಸಿಯಲ್ಲಿ ಉತ್ತರೇಶ್ವರ ದೇವಾಲಯಗಳಿರುವುದಾಗಿ ತಿಳಿದು ಬರುತ್ತದೆ. ಹೀಗೆ ಆಂಧ್ರದ ಪೆದ್ದಚಪ್ಪಲಿ, ಆಲಂಪುರಗಳಲ್ಲಿನ ಶಾಸನಗಳು ಈ ದೇವಾಲಯಗಳನ್ನು ಉಲ್ಲೇಖಿಸುತ್ತವೆ. ಇವುಗಳಲ್ಲಿ ಕಾಳಾಮುಖ ಹಾಗೂ ಪಾಶುಪತ ಈ ಎರಡೂ ಸಂಪ್ರದಾಯಕ್ಕೆ ಸೇರಿದ ಶಾಸನಗಳಿರುವುದಾಗಿ ಎಂ.ಎಂ.ಕಲಬುರ್ಗಿಯವರು ಗುರುತಿಸುತ್ತಾರೆ. ಹಾಗೆ ಇವುಗಳಲ್ಲಿ ಒಂದಾರೂ ದೇವರದಾಸಿಮಯ್ಯನಿಂದ ಸ್ಥಾಪಿಸಲ್ಪಟ್ಟಿರಬೇಕೆಂದು ಊಹಿಸುತ್ತಾರೆ.

ಉತ್ತರೇಶ್ವರ ದೇವಾಲಯ ಮುದನೂರಿನಲ್ಲಿ ಮೊದಲು ಇದ್ದು, ನಂತರ ರಾಮಲಿಂಗದ ಪ್ರಭಾವದಿಂದ ಅದು ತನ್ನ ಪ್ರಭಾವ ಕಳೆದುಕೊಂಡಿತೋ ತಿಳಿಯದು. ಆದರೆ ಇಲ್ಲಿನ ಶಾಸನದಲ್ಲಿ ಉಲ್ಲೇಖಿಸಲಾಗಿದ್ದು, ಪ್ರಸ್ತುತ ಇದರ ಕುರುಹುಗಳಿರುವುದಿಲ್ಲ. ಅಂತೆಯೇ ಕಣಿವೆಸಿದ್ದಗಿರಿ ಶಾಸನದಲ್ಲಿ ರಾಮೇಶ್ವರ ಹಾಗೂ ಉತ್ತರೇಶ್ವರ ಎರಡೂ ದೇವಾಲಯಗಳಿಗೆ ಭೂಮಿ ದಾನ ನೀಡಿದುದರ ಉಲ್ಲೇಖವಿದೆ. ದೇವರದಾಸಿಮಯ್ಯನ ಊರು ಎಂದು ಊಹಿಸಲಾಗಿರುವ ಮತ್ತು ಸುಗ್ಗಲೆಯ ಶಾಸನ ದೊರೆತ ಊರಾದ ದೇವನೂರಿನಲ್ಲಿ ಉತ್ತರೇಶ್ವರ ದೇವಾಲಯವಿರು ವುದಿಲ್ಲ; ಬದಲಿಗೆ ರಾಮೇಶ್ವರ ದೇವಾಲಯವಿದೆ. ಇವುಗಳನ್ನು ಗಮನಿಸಿದಾಗ ಅಂದಿನ ಶರಣರಾದ ದೇವರದಾಸಿಮಯ್ಯ ಹಾಗೂ ಜೇಡರದಾಸಿಮಯ್ಯರ ಜ್ಞಾನ ಪ್ರಸರಣದ ವ್ಯಾಪ್ತಿಯನ್ನು ತಿಳಿಯಬಹುದಾಗಿದೆ. ಆದರೂ ಇವುಗಳ ಬಗ್ಗೆ ಹೆಚ್ಚಿನ ಅಧ್ಯಯನದ ನಡೆಯಬೇಕಾದ ಅವಶ್ಯಕತೆ ಇದೆ.

### ೫.೮. ಅಗ್ರಹಾರ, ಶಿವಪುರ, ಮಠ ಸಂಸ್ಕೃತಿ ಹಾಗೂ ದಾಸಿಮಯ್ಯ

ಪ್ರಾಚೀನ ಕರ್ನಾಟಕದ ವಿದ್ಯಾಭ್ಯಾಸದ ಪ್ರಮುಖ ನೆಲೆಗಳೆಂದರೆ ಅಗ್ರಹಾರಗಳು, ಶಿವಪುರಗಳು, ಬ್ರಹ್ಮಪುರಿಗಳು, ಮಠಗಳು, ದೇವಸ್ಥಾನಗಳು, ಘಟಿಕಾಸ್ಥಾನಗಳು. ಇವುಗಳಲ್ಲಿ ಅಗ್ರಹಾರ–ಶಿವಪುರ–ಮಠಗಳು ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯರ ಜೀವನದ ಪ್ರಮುಖ ನೆಲೆಗಳಾಗಿದ್ದುದಾಗಿ ಅವರ ಬಗೆಗಿನ ಪುರಾಣಕಾವ್ಯಗಳಲ್ಲಿ ಉಲ್ಲೇಖಗಳಿವೆ. ಅಗ್ರಹಾರಗಳು ಪ್ರಮುಖ ವಿದ್ಯಾಕೇಂದ್ರಗಳು.

**ಅಗ್ರಹಾರ:** ೧. ಅಗ್ರ–ಶ್ರೇಷ್ಠ, ಆಹಾರ–ಸ್ಥಳ ೨. ಅಗ್ರ– ಶ್ರೇಷ್ಠ ಬ್ರಾಹ್ಮಣರಿಗೆ, ಹಾರವನ್ನು ಹೃ ಧಾತುವಿನಿಂದ ನಿಷ್ಪತ್ತಿಮಾಡಿ ಬ್ರಾಹ್ಮಣರಿಗೆ ನೀಡಿದ ದಾನವೆಂದು ಅರ್ಥೈಸಲಾಗುತ್ತದೆ. ಜೇಡರದಾಸಿಮಯ್ಯನ ಊರು ಮುದನೂರು. ಇದು ಒಂದು ಅಗ್ರಹಾರವಾಗಿದ್ದು, ಇಲ್ಲಿ ದಾಸಿಮಯ್ಯ

ವೈಷ್ಣವರನ್ನು ವಾದದಲ್ಲಿ ಸೋಲಿಸಿ ರಾಮೇಶ್ವರನನ್ನು ಒಲಿಸಿಕೊಂಡ ಎಂಬ ಕತೆಗಳು ಕಾವ್ಯಗಳಲ್ಲಿ ಉಲ್ಲೇಖಿತಗೊಂಡಿವೆ. ಅಗ್ರಹಾರಗಳನ್ನು ಶ್ರೋತ್ರಿಯ ಗ್ರಾಮವೆಂದೂ ಕರೆಯಲಾಗುತ್ತದೆ.

**ಶಿವಪುರ:** ಶಿವಪುರಗಳು ಅಗ್ರಹಾರಗಳಂತೆ ದಾನಿಗಳು ವ್ಯವಸ್ಥೆ ಮಾಡಿಕೊಟ್ಟ ಊರುಗಳು. ಶಿವಪುರವೆಂದರೆ ವೀರಶೈವ ಧರ್ಮದ ಯತಿಗಳಿಗೆ ಮತ್ತು ಭಕ್ತರಿಗೆ ನೀಡಲ್ಪಟ್ಟ ಗ್ರಾಮವೆಂದೂ ಅದು ಬ್ರಾಹ್ಮಣರಿಗೆ ಕೊಡುತ್ತಿದ್ದ ಅಗ್ರಹಾರ ಅಥವಾ ಬ್ರಹ್ಮಪುರಿಗಳಿಗೆ ಸಮಾನವಾದುವೆಂದು ಹೇಳಲಾಗುತ್ತದೆ. ಕೋಗುಂಡಿ, ಬಿದಿರುಕೋಟೆ ಮೊದಲಾದ ಶಾಸನಗಳಲ್ಲಿ ಇದರ ಉಲ್ಲೇಖಗಳಿವೆ. ಜೇಡರದಾಸಿಯ್ಯನು ಗೊಬ್ಬೂರಿಗೆ ಕನ್ಯೆ ಹುಡುಕಲು ಹೋದಾಗ ಅಲ್ಲಿನ ಒಬ್ಬ ಶೈವಯತಿ ಆತನಿಗೆ ಆಶ್ರಯವಿತ್ತು, ಇಲ್ಲೇ ಪಕ್ಕದ ಶಿವಪುರದಲ್ಲಿ ನೀನು ಹುಡುಕುವ ಕನ್ಯೆ ಇದ್ದಾಳೆಂದು ಹೇಳಿ ಕರೆದೊಯ್ಯುತ್ತಾನೆ.

**ಮಠ:** ದೇವರದಾಸಿಮಯ್ಯನು ಪೊಟ್ಟಲಕೆರೆಗೆ ಸುಗ್ಗಲೆಯ ಕರೆಗೆ ಓಗೊಟ್ಟು ಹೊರಡುತ್ತಾನೆ. ಅಲ್ಲಿ ಆತನಿಗೆ ತಂಗಲು ವ್ಯವಸ್ಥೆ ಮಾಡಿದುದಾಗಿ ಶಿವಶರಣವಿಲಾಸದಲ್ಲಿ ಹೇಳಲಾಗಿದೆ. ಬಹುಶಃ ಮಹಾಂತದೇಶಿಕರ ಕಾಲದಲ್ಲಿ ಮಠಗಳು ಹೆಚ್ಚು ಪ್ರಭಾವಿಯಾಗಿದ್ದು, ಅದರ ಉಲ್ಲೇಖ ಸಹಜವಾಗಿದೆ. ಈ ಮೂರು ನೆಲೆಗಳು ಪ್ರಾಚಿನ ಕಾಲದಿಂದಲೂ ತಮ್ಮ ಅಸ್ತಿತ್ವವನ್ನು ಕಾಯ್ದು ಕೊಂಡೇ ಬಂದಿವೆ, ಇಂದು ಅಗ್ರಹಾರ ಹಾಗೂ ಶಿವಪುರ ಸಂಸ್ಕೃತಿಗಳು ಅಷ್ಟಾಗಿ ಕಂಡುಬರುವುದಿಲ್ಲವಾದರೂ ಮಠಮಾನ್ಯಗಳು ಸಾಮಾಜಿಕ ಹಾಗೂ ಧಾರ್ಮಿಕ ಕಾರ್ಯಗಳಲ್ಲಿ ಹಾಸುಹೊಕ್ಕಾಗಿ ಬೆರೆತುಹೋಗಿವೆ.

"ವೀರಶೈವ ಪವಾಡ ಕಥೆಗಳು ಹಲವೆಡೆ ಸಾಂಕೇತಿಕ ಅರ್ಥವನ್ನೊಳಗೊಂಡಿವೆ. ಅವು ವರ್ಣಿಸುವುದನ್ನು ನಾವು ಶಬ್ದಶಃ ಸತ್ಯವೆಂದಿಟ್ಟುಕೊಳ್ಳದೆ ಅವುಗಳ ಹಿನ್ನೆಲೆಯಲ್ಲಿ ಅಡಕಗೊಂಡ ಭಾವ ಸತ್ಯವನ್ನು ಗ್ರಹಿಸುವುದು ಉಚಿತ".[೬೨] ಧಾರ್ಮಿಕ ತತ್ವಗಳನ್ನು ನೇರವಾಗಿ ತಾರ್ಕಿಕ ರೀತಿಯಲ್ಲಿ ಹೇಳಿದರೆ, ಸಾಮಾನ್ಯರಿಗೆ ಅರ್ಥವಾಗುವುದು ಕಷ್ಟ ಸಾಧ್ಯ. ಹಾಗಾಗಿ ಈ ಪವಾಡ ಕಥೆಗಳು ತರ್ಕವಾಗಿ ನಿರೂಪಿಸುವಲ್ಲಿ ಸೋತಿದ್ದರೂ, ಅವುಗಳು ಬಿತ್ತರಕೆಯಿಂದ ಪರಿಣಾಮಕಾರಿ ಯಾಗಿ ಕಾರ್ಯ ನಿರ್ವಹಿಸುತ್ತಿವೆ ಎಂಬುದಂತು ಸತ್ಯ. ಕೆಲವೊಮ್ಮೆ ವಿಶಿಷ್ಟ ರೀತಿಯಲ್ಲಿ ಪ್ರತಿಕ್ರಿಯಿಸಿ ಜನತೆಯ ಸಂಸ್ಕೃತಿಯನ್ನು ದೃಢಗೊಳಿಸಬಲ್ಲವೂ ಆಗಿವೆ. ಒಂದು ರೀತಿಯಲ್ಲಿ ಧಾರ್ಮಿಕವಾಗಿ ಪ್ರಚಾರ ಸಹಾಯಕಗಳಾಗಿ ಕಾರ್ಯ ನಿರ್ವಹಿಸಿದರೆ ಮತ್ತೊಂದೆಡೆ ಜನಪದರಿಗೆ ಹತ್ತಿರವಾಗಿ ಅವರನ್ನು ಭಾವನಾತ್ಮಕವಾಗಿ ಸೇರಿ ಹೋಗುತ್ತವೆ. "Miracoles are traditional stories rather than tree histories some no doubt, have a symbolic valuem as when a record of spiritual revelation is told in meteria terms burning bush"[೬೩]

ಎಂದು 'Encyclopeadia of Religion and Ethics' vol 8 ರಲ್ಲಿ ಹೇಳಿರುವಂತೆ, ಪವಾಡ ಕಥೆಗಳು ಐತಿಹಾಸಿಕ ವಸ್ತುಗಳನ್ನು, ವ್ಯಕ್ತಿಗಳನ್ನು ದೇವಾಲಯಗಳನ್ನು ಬಳಸಿಕೊಂಡು, ಅವುಗಳಿಗೆ ಪೂರಕವಾಗಿ ಹೆಣೆದುಕೊಂಡ ಕಥೆಗಳಾಗಿವೆ. ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯನ ಬಗೆಗಿನ ಪವಾಡ ಕಥೆಗಳು ಇಂತಹವುಗಳ ಭಾಗವಾಗಿವೆ. ಕವಿಯು ಮತ ಪ್ರಸರಣೆಯ ಆವೇಶದಲ್ಲಿ ಕೈಗೊಂಡ ಕಾಲ್ಪನಿಕ ವಿಹಾರಗಳೆಂದೇ ಇವುಗಳನ್ನು ಕರೆಯಬಹುದು. ಐತಿಹಾಸಿಕ ಸಂಗತಿಗಳೇ ಆಗಿದ್ದರೂ, ಚರಿತ್ರೆಗೆ ಸಂಬಂಧಿಸಿದವಾಗಿದ್ದರೂ ಇವು ಸತ್ಯದಿಂದ ದೂರವೇ ಉಳಿಯುತ್ತವೆ. ಹೀಗಾಗಿ ಕಾವ್ಯ ಹಾಗೂ ಪುರಾಣಗಳನ್ನಾಧರಿಸಿ ಓರ್ವ ಶರಣ ಬಗ್ಗೆ ನಿಶ್ಚಿತವಾದ ತೀರ್ಮಾನಕ್ಕೆ ಬರುವುದು ಅಸಾಧ್ಯ. ಆದರೆ ಅಂತಹ ಕಾವ್ಯ ಹಾಗೂ ಪುರಾಣಗಳಲ್ಲಿ ಹರಡಿಕೊಂಡಿರುವ ಕಥಾ ವೈಶಿಷ್ಟ್ಯವನ್ನು ಭಾವನಾತ್ಮಕವಾಗಿ ಮತ್ತು ಸಾಂಸ್ಕೃತಿಕವಾಗಿ ಅಧ್ಯಯನ ಮಾಡಬಹುದಾಗಿದೆ.

**ಅಡಿಟಿಪ್ಪಣಿಗಳು**

೧. ಪೂಜಾರ ವ್ಹಿ.ಜಿ., ವೀರಶೈವ ಪುರಾಣಗಳ ಪವಾಡ ಕಥೆಗಳು, ಮುನ್ನುಡಿ

೨. ಸರಸ್ವತಿ(ಸಂ), ವಿರೂಪಾಕ್ಷ ದೇಶಿಕನ ದೇವರದಾಸಿಮಯ್ಯ ಪುರಾಣ, ಸಂಧಿ ೧೭, ಪದ್ಯ ೨೨

೩. ಅದೇ, ಸಂಧಿ ೧, ಪದ್ಯ ೧

೪. ಅದೇ, ಮುನ್ನುಡಿ

೫ ಅದೇ, ಮುನ್ನುಡಿ

೬. ಅದೇ, ೧, ಪದ್ಯ ೧೦

೭. ಸಿದ್ದಲಿಂಗಯ್ಯ ಜಿ.ಎಸ್., ಕನ್ನಡ ಸಂಸ್ಕೃತಿಗೆ ಹೊಸ ತಿರುವುಕೊಟ್ಟ ಹರಿಹರ, ಪು.೪೮

೮. ಸಿದ್ಧಲಿಂಗ ದೇಸಾಯಿ(ಸಂ), ಫ.ಗು.ಹಳಕಟ್ಟಿ ಸಂ.೧೨, ಪು.೬೬೫

೯. ಅದೇ, ಪು.೬೬೫

೧೦. ಅದೇ, ಪು.೬೬೭

೧೧. ಅದೇ, ಪು.೬೭೯

೧೨. ಅದೇ, ಪು.೬೮೨

೧೩. ಅದೇ, ಪು.೬೮೨

೧೪. ಅದೇ, ಪು.೬೮೫

೧೫. ನರಸಿಂಹಾಚಾರ್ ಆರ್., ಕವಿಚರಿತೆ ೩, ಪು.೨೪೭

೧೬. ಸಿದ್ಧಲಿಂಗ ದೇಸಾಯಿ(ಸಂ), ಫ.ಗು.ಹಳಕಟ್ಟಿ ಸಂ ೧೨, ಪು.೬೧೩

೧೭. ಅದೇ, ಪು.೬೧೩

೧೮. ಅದೇ, ಪು.೬೧೪

೧೯. ಅದೇ, ಪು.೬೧೫

೨೦. ಅದೇ, ಪು.೬೧೫

೨೧. ಅದೇ, ಪು.೬೧೮

೨೨. ಅನ್ನಪೂರ್ಣ ಜಾಲವಾದಿ, ಶಂಕರದಾಸಿಮಯ್ಯ ಪುರಾಣ ಒಂದು ಅಧ್ಯಯನ, ಪು. ೨೦೫

೨೩. ರಾಘವಂಕನದೆನ್ನಲಾದ ದೇವಂಗ ದಾಸಿಮಯ್ಯ ಪುರಾಣದಲ್ಲಿ ಗೋರೆ ಕಲ್ಲಿನ ತುಂಡಲಗಳ ಷಡುರಸಾನ್ನದ ಉಲ್ಲೇಖವಿದೆ.

೨೪. ಶ್ರೀ ಕನ್ನಡ ವಚನ ದೇವಾಂಗ ಪುರಾಣ, ದೇವಾಂಗ ಟ್ರಸ್ಟ್, ಪು.೨೬೮

೨೫. ಪೂಜಾರ ವ್ಹಿ.ಜಿ., ವೀರಶೈವ ಪುರಾಣಗಳ ಪವಾಡ ಕಥೆಗಳು, ಪು.೨೦೪

೨೬. ಅದೇ ಪು.೨೦೪

೨೭. ಹಿರೇಮಠ. ಆರ್.ಸಿ, ಸುಂಕಾಪುರ. ಎಂ.ಎಂ, ಭೈರವೇಶ್ವರ ಕಾವ್ಯ ಕಥಾಮಣಿ ಸೂತ್ರ ರತ್ನಾಕರ, ಭಾಗ ೨, ದಾಸಿಮಯ್ಯನು ಜೈನರನ್ನು ಸೋಲಿಸಿದ ಕಥೆ, ಪದ್ಯ ೩೫–೩೬

೨೮. ಬಸವರಾಜು ಎಲ್., ದೇವರದಾಸಿಮಯ್ಯನ ವಚನಗಳು, ಮುನ್ನುಡಿ ಪು.೩೨

೨೯. ಹಿರೇಮಠ. ಆರ್.ಸಿ, ಸುಂಕಾಪುರ. ಎಂ.ಎಂ, ಭೈರವೇಶ್ವರ ಕಾವ್ಯ ಕಥಾಮಣಿ ಸೂತ್ರ ರತ್ನಾಕರ, ಭಾಗ ೨, ಪು.೧೬೦

೩೦. ಫ.ಗು.ಹಳಕಟ್ಟಿ ಸಂ ೧೨, ಪು.೪೬೨

೩೧. ಶ್ರೀ ಕನ್ನಡ ವಚನ ದೇವಾಂಗ ಪುರಾಣ, ದೇವಾಂಗ ಟ್ರಸ್ಟ್, ಪು.೧೯೧

೩೨. ಹಿರೇಮಠ ಆರ್.ಸಿ., ಸುಂಕಾಪುರ. ಎಂ.ಎಂ, ಭೈರವೇಶ್ವರ ಕಾವ್ಯ ಕಥಾಮಣಿ ಸೂತ್ರ ರತ್ನಾಕರ, ಭಾಗ ೨, ಪು.೧೩೭

೩೩. ಚಿದಾನಂದಮೂರ್ತಿ ಎಂ., ವಚನಸಾಹಿತ್ಯ, ಪು.೩೧

೩೪. ಸರಸ್ವತಿ(ಸಂ), ವಿರೂಪಾಕ್ಷ ದೇಶಿಕನ ದೇವರದಾಸಿಮಯ್ಯ ಪುರಾಣ, ಸಂಧಿ ೨, ಪದ್ಯ ೧೦

೩೫. ಅದೇ, ಪದ್ಯ ೧೧

೩೬. ಅದೇ, ಪದ್ಯ ೧೨

೩೭. ಚಿದಾನಂದಮೂರ್ತಿ ಎಂ., ದೇವರದಾಸಿಮಯ್ಯ ಶಂಕರದಾಸಿಮಯ್ಯ ಜೇಡರದಾಸಿಮಯ್ಯ, ಪು.೧೨

೩೮. ಅದೇ, ಪು.೧೨

೩೯. ಶರಣ ಸಾಹಿತ್ಯ ಸಂಪುಟ೧೦, ಸಂಚಿಕೆ ೧೫, ಪು.೨೩೭

೪೦. ಅದೇ, ಪು.೨೩೭

೪೧. ಕಲಬುರ್ಗಿ ಎಂ.ಎಂ., ಮಾರ್ಗ ೪, ಪು.೪೪೨–೪೪೪

೪೨. ಪೂಜಾರ ವ್ಹಿ.ಜಿ., ವೀರಶೈವ ಪುರಾಣಗಳ ಪವಾಡ ಕಥೆಗಳು, ಪು.೧೮೧

೪೩. ಅದೇ, ಪು.೧೮೧

# ಅಧ್ಯಾಯ: ಆರು

## ಜೇಡರದಾಸಿಮಯ್ಯ: ಸಾಂಸ್ಕೃತಿಕ ನೆಲೆಗಳು

೬.೧. ಮುದನೂರಿನ ತೀರ್ಥಗಳು ಹಾಗೂ ಪುಷ್ಕರಣಿಗಳು

೬.೨. ಮುದನೂರಿನ ದೇವಾಲಯಗಳು

೬.೪. ಮುದನೂರಿನ ಶಾಸನಗಳು

೬.೫. ದೇವರದಾಸಿಮಯ್ಯ: ಜಾತ್ರಾ ಮಹೋತ್ಸವ

೬.೬. ದೇವಾಲಯಗಳ ವಿರೂಪತೆ ಹಾಗೂ ಜನಜೀವನ

೬.೭. ಮುದನೂರು ಸುತ್ತಮುತ್ತಲಿನ ರಾಮಲಿಂಗ ದೇವಾಲಯಗಳು

# ಅಧ್ಯಾಯ: ಆರು

## ಜೇಡರದಾಸಿಮಯ್ಯ: ಸಾಂಸ್ಕೃತಿಕ  ನೆಲೆಗಳು

ಜೇಡರದಾಸಿಮಯ್ಯನ ಜೀವನದ ಎಲ್ಲ ದಂತಕಥೆಗಳಿಗೆ ಮುದನೂರಿನ ಪರಿಸರ ಕೆಲಮಟ್ಟಿಗೆ ಉತ್ತರವನ್ನು ನೀಡುತ್ತದೆ. ಆತನ ಜೀವನದ ಹಲವು Myth ಗಳಿಗೆ ತಾತ್ವಿಕ ರೂಪವನ್ನು ತರುವ ಸಾಧ್ಯತೆ ಇಲ್ಲಿನ ಪರಿಸರ ಹಾಗೂ ಸುತ್ತಮುತ್ತಲಿನ ಸ್ಥಳಗಳಿಗಿದೆ ಎಂದರೆ ತಪ್ಪಾಗಲಾರದು. ಜೇಡರದಾಸಿಮಯ್ಯನ ಜೀವನ ಮತ್ತು ಆಗಿ ಹೋದ ಘಟನೆಗಳನ್ನು ತಿಳಿಯಬೇಕಾದರೆ ಆತನು ನೆಲೆ ನಿಂತು, ಕಂಡು ನೋಡಿದ ನೆಲೆಗಳನ್ನು ಗಮನಿಸಬೇಕಾದುದು ಅನಿವಾರ್ಯ. ಯಾವುದೇ ವ್ಯಕ್ತಿ ಪ್ರಧಾನನೆನಿಸಬೇಕಾದರೆ ಆತನ ಸುತ್ತಲಿನ ಪರಿಸರದ ಪ್ರಭಾವವೂ ಅಷ್ಟೇ ಪ್ರಧಾನವಾಗುತ್ತದೆ. ಹಾಗೆಯೇ ದಾಸಿಮಯ್ಯನಂಥ ಶರಣನ ಜೀವನಕ್ಕೆ ಅವು ಪೂರಕವೂ ಹೌದು. ಅಂತಹ ಪ್ರಧಾನವಾದ ಸ್ಥಳಗಳಲ್ಲಿ ಮುದನೂರು ಅಗ್ರ ಸ್ಥಾನವನ್ನು ಪಡೆಯುತ್ತದೆ. ಈಗಾಗಲೇ ಮೊದಲಿನ ಅಧ್ಯಾಯಗಳಲ್ಲಿ 'ದಾಸಿಮಯ್ಯನ ಊರು ಮುದನೂರು' ಹಾಗೂ 'ಮುದನೂರು ಪದ ನಿಷ್ಪತ್ತಿ' ಮೊದಲಾದವುಗಳ ಕುರಿತು ಚರ್ಚಿಸಲಾಗಿದೆ. ಹಾಗಾಗಿ ಅದರ ಹೊರತಾದ ವಿಷಯಗಳನ್ನು ಇಲ್ಲಿ ತೆಗೆದುಕೊಂಡು ವಿವರಿಸಲಾಗಿದೆ.

ಮುದನೂರು ಸ್ವಾಭಿಮಾನಿಗಳ ನಾಡು ಎನಿಸಿದ ಸುರಪುರ ತಾಲ್ಲೂಕಿನಲ್ಲಿದೆ. ಅಕ್ಷರಶಃ ಹೇಳಬೇಕೆಂದರೆ, ಈಗಿನ ಯಾದಗಿರಿ ಜಿಲ್ಲೆಯ, ಸುರಪುರ ತಾಲ್ಲೂಕಿನಿಂದ ೨೫ ಕಿ.ಮೀ ದೂರದಲ್ಲಿದೆ. ಮುದನೂರಿಗೆ ಸುರಪುರದಿಂದ ಹೋಗಲು ಎರಡು  ಮಾರ್ಗಗಳಿವೆ.

೧. ಸುರಪುರದಿಂದ ನೇರ ಕೆಂಬಾವಿ ರಸ್ತೆ > ಕೆಂಬಾವಿಯಿಂದ ಹಾಗೇ ಮುಂದಕ್ಕೆ ಬಂದು ಬಲಕ್ಕೆ ತಿರುಗಬೇಕು. ಒಟ್ಟಾರೆ ಕೆಂಬಾವಿಯಿಂದ ೮ ಕಿ.ಮೀ ದೂರ.

೨. ಸುರಪುರದಿಂದ ಬಾಚಿಮಟ್ಟಿ ಮಾರ್ಗದಿಂದ> ಅಗ್ನಿರಾಂಪೂರ ಕ್ರಾಸ್‌ನಿಂದ> ಒಳಗೆ ೧ ಕಿ.ಮೀ ಹೋಗಬೇಕು

ಮುದನೂರು ಸುರಪುರದ ಸಮೀಪದ ನಾಡು. ಸುರಪುರ ಐತಿಹಾಸಿಕವಾಗಿ ಪ್ರಭಾವಶಾಲಿಯಾದ ಆಳ್ವಿಕೆಗಾರರನ್ನು ಹೊಂದಿದ ಪ್ರದೇಶ. ವಿಜಯನಗರೊತ್ತರ ಕರ್ನಾಟಕದ ಇತಿಹಾಸದಲ್ಲಿ ಚಿತ್ರದುರ್ಗವನ್ನು ಹೊರತುಪಡಿಸಿದರೆ ಸುರಪುರಕ್ಕೆ ಅಗ್ರಸ್ಥಾನ ಲಭಿಸುತ್ತದೆ.[೧] ಸುರಪುರ ಭೀಮಾ ಹಾಗೂ ಕೃಷ್ಣಾ ನದಿಗಳ ನಡುವೆ ಹರಡಿದ ನಾಡು. "ಪ್ರಾರಂಭದಲ್ಲಿ ವಿಜಯನಗರದ ಸಂಸ್ಕೃತಿಯ ಸಂರಕ್ಷಣೆ ಹಾಗೂ ಮುಂದುವರಿಕೆಯ ಧ್ಯೇಯೋದ್ದೇಶವನ್ನಿಟ್ಟುಕೊಂಡ ಈ ಸಂಸ್ಥಾನ ವಿಜಯನಗರೋತ್ತರ ಇತಿಹಾಸದಲ್ಲಿ, ಅದರಲ್ಲೂ ಮುಖ್ಯವಾಗಿ ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಈ ನೆಲದ ಹಿರಿಮೆ-ಗರಿಮೆಯನ್ನು ಮೆರೆಯುತ್ತಾ, ಇಡೀ ದಕ್ಷಿಣ ಭಾರತದಲ್ಲಿ 'ಛಲದ ಪ್ರತೀಕ' ವೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಈ ಮೂಲಕ ರಾಷ್ಟ್ರೀಯ ಮಟ್ಟದ ಇತಿಹಾಸದಲ್ಲಿ ತಮ್ಮದೇ ಆದ ರಾಜಕೀಯ ಕ್ಷೇತ್ರದಲ್ಲಷ್ಟೇ ಅಲ್ಲ, ಸಾಂಸ್ಕೃತಿಕ ಕ್ಷೇತ್ರಗಳಾದ, ಕಲೆ, ಸಾಹಿತ್ಯ, ಸಂಗೀತ, ವಾಸ್ತುಶಿಲ್ಪ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ ಕ್ಷೇತ್ರವನ್ನು ಶ್ರೀಮಂತಗೊಳಿಸಿವೆ. ಇಂದಿಗೂ ನೋಡಲು ಸಿಗುತ್ತವೆ. ಈ ಸಂಸ್ಥಾನದ ವಂಶಸ್ಥರು ಇಂದಿಗೂ ಇದ್ದು, ಅನೇಕ ಹಬ್ಬ-ಉತ್ಸವ, ನಂಬಿಕೆ-ಸಂಪ್ರದಾಯಗಳಂತಹ ಆಚರಣೆಗಳನ್ನು ಜೀವಂತವಾಗಿರಿಸಿ ಕೊಂಡಿದ್ದಾರೆ. ಅಲ್ಲದೇ ಜನಸಾಮಾನ್ಯರೊಂದಿಗೆ ಬೆರೆತು ತಮ್ಮ ವೈಭವವನ್ನು ಸಾರುವ ಹಬ್ಬ ಉತ್ಸವಗಳಲ್ಲಿ ಭಾಗಿಗಳಾಗುತ್ತಿರುವುದು ಇವರ ಆಚರಣೆಗಳ ಜೀವಂತಿಕೆಗೆ ಸಾಕ್ಷಿಯಾಗಿದೆ. ಇವು ಒಂದಿಲ್ಲಾ ಒಂದು ರೀತಿಯಲ್ಲಿ ಐತಿಹಾಸಿಕ ಹಾಗೂ ಸಂಸ್ಕೃತಿಕ ಪ್ರತಿಕೃತಿಗಳೇ ಸರಿ. ಇಂಥ ಅನೇಕ ವಿಶೀಷ್ಟವಾದ ಕೊಡುಗೆಗಳನ್ನು ನೀಡಿರುವುದು ಸುರಪುರ ಸಂಸ್ಥಾನ"[೨] ಎಂದು ಹೇಳಬಹುದು.

ಹೀಗೆ ಸುರಪುರ ಸಂಸ್ಥಾನದ ಆಸುಪಾಸಿನಲ್ಲಿದ್ದ ಮುದನೂರು ಕಲ್ಯಾಣಿ ಚಾಲುಕ್ಯರು, ಕಳಚೂರಿ ಮೊದಲಾದ ದೊರೆಗಳಿಂದ ಆಳಲ್ಪಟ್ಟು, ಇಂತಹದ್ದೇ ಚರಿತ್ರೆಯನ್ನು ಮತ್ತು ಸಾಂಸ್ಕೃತಿಕ ಪ್ರಾಮುಖ್ಯತೆಯನ್ನು ಪಡೆದಿದೆ. ಸುರಪುರಕ್ಕೆ ಸಂಬಂಧಿಸಿದ ಈ ಎಲ್ಲಾ ಮಾತುಗಳು-ಮುದನೂರಿಗೂ ಅನ್ವಯಿಸುತ್ತವೆ. ಅದರಲ್ಲೂ ಕಲೆ, ವಾಸ್ತುಶಿಲ್ಪ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕವಾಗಿ ಶ್ರೀಮಂತವಾದ ಪ್ರದೇಶ ಮುದನೂರು. ಈಗಲೂ ಇಲ್ಲಿ ಪೂರ್ವಕಾಲದಿಂದಲೂ ನಡೆದುಕೊಂಡು ಬರುವ ಆಚರಣೆಗಳು, ಹಬ್ಬ, ಹರಿದಿನ, ಜಾತ್ರಾ ಮಹೋತ್ಸವಗಳು ವಿಶಿಷ್ಟವಾಗಿ ನಡೆಯುತ್ತವೆ.

ಮುದನೂರು ಸುತ್ತಮುತ್ತಲಿನ ಪ್ರದೇಶಗಳು ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ತುಂಬಾ ಪ್ರಬುದ್ಧವಾದ ಹಾಗೂ ಪ್ರಭಾವಶಾಲಿಯಾದ ಪ್ರದೇಶಗಳಾಗಿದ್ದವು ಎನ್ನುವುದಕ್ಕೆ ಹಲವು ಆಧಾರಗಳಿವೆ ಅದೇ ಸುರಪುರ ತಾಲ್ಲೂಕಿನ ಕೆಂಭಾವಿ, ಭೋಗಣ್ಣನ ಊರು. ಕೊಡೇಕಲ್ ಬಸವಣ್ಣ, ತಿಂತಿಣಿ

ಮೌನೇಶ್ವರರು, ಕೋಲ ಶಾಂತಯ್ಯ ಮೊದಲಾದ ಶರಣರು, ದಾರ್ಶನಿಕರು ಹಾಗೂ ಕವಿಗಳು ಇದೇ ನಾಡಿನಲ್ಲಿ ನೆಲೆಸಿದ್ದು ಇದಕ್ಕೆ ಸಾಕ್ಷಿಯಾಗಿದೆ. ಇನ್ನು ಭಾಗೋಳಿಕವಾಗಿ ನೋಡುವುದಾದರೆ ಸುರಪುರ ತಾಲ್ಲೂಕಿನ ಹಲವು ಪ್ರದೇಶಗಳು ಪ್ರಾಗೈತಿಹಾಸಿಕ ನೆಲೆಗಳು ಎಂದು ತಜ್ಞರಿಂದ ಗುರುತಿಸಲ್ಪಟ್ಟಿವೆ.[೩] ಅದರಲ್ಲಿಯೂ ಮುದನೂರಿನ ಸಮೀಪದ ಹುಣಸಗಿ–ಕೆಂಭಾವಿ ಪ್ರದೇಶಗಳು ಹಳೇಶಿಲಾಯುಗಕ್ಕೂ, ಕೊಡೇಕಲ್–ಬೂದಿಹಾಳ್ ಇತ್ಯಾದಿಗಳು ಹೊಸ ಶಿಲಾಯುಗಕ್ಕೂ ಸೇರುತ್ತವೆ. ಅಂತೆಯೇ ಕಬ್ಬಿಣದ ಯುಗದ ಶವ ಹೂಳುವ, ಸಮಾಧಿಮಾಡುವ ಶೈಲಿಯ ಆಧಾರಗಳು ಇಲ್ಲಿ ದೊರೆಯುತ್ತವೆ ಎಂದು ಇತಿಹಾಸಜ್ಞರು ಹೇಳುತ್ತಾರೆ.[೪]

ಮುದನೂರು ಭೌಗೋಳಿಕವಾಗಿ ಪ್ರಾಗೈತಿಹಾಸ ಕಾಲದಿಂದಲೂ ಸಮೃದ್ಧವಾಗಿ ಹರಡಿದ ನಾಡು. ಈ ಬಗ್ಗೆ ಲೇಖಕರಾದ ಪದ್ದಯ್ಯಕೆ ಅವರು ಹೀಗೆ ಹೇಳುತ್ತಾರೆ. "ಸಗರನಾಡೆಂದು ಕರೆಯುವ ಪ್ರದೇಶವು ತ್ರಿಕೋಣಾಕಾರದ ಬಯಲು ಪ್ರದೇಶವಾಗಿದ್ದು ಕೃಷ್ಣ, ಭೀಮೆಯರ ಸಂಗಮವಾಗಿದೆ. ಇದು ಸುರಪುರ, ಶಾಹಪುರ ಹಾಗೂ ಇಂದಿನ ಕಲ್ಬುರ್ಗಿ ಜಿಲ್ಲೆಯ ಜೇವರ್ಗಿ ಹೀಗೆ ಒಟ್ಟು ಮೂರು ತಾಲ್ಲೂಕುಗಳನ್ನೊಳಗೊಂಡ ಪ್ರದೇಶವಾಗಿದ್ದು ಮನುಷ್ಯನ ಬದುಕಿಗೆ ಬೇಕಾಗಿರುವ ಬಗೆ ಬಗೆಯ ನೈಸರ್ಗಿಕ ಸಂಪನ್ಮೂಲಗಳಾದ ನದಿ ಮತ್ತು ಚಿಲುಮೆ (ಮುದನೂರು ಮತ್ತು ದೇವಪುರಗಳನ್ನು ಪ್ರಧಾನವಾಗಿ ಹೆಸರಿಸಿದ್ದಾರೆ)ಗಳ ರೂಪದಲ್ಲಿನ ನಿರಂತರವಾದ ಜಲ ಸಂಪನ್ಮೂಲಗಳು ಪ್ರಾಣಿ ಸಂಕುಲಕ್ಕಾಗಿ ವಿಶಾಲವಾದ ಬೆಟ್ಟಗಳಿಂದ ಆವೃತವಾದ ಹುಲ್ಲುಗಾವಲು, ಕೃಷಿಗಾಗಿ ಸಮತಟ್ಟಿನಿಂದ ಕೂಡಿದ ಫಲವತ್ತತೆಯ ಬಯಲು ಭೂಮಿ, ಹುಲುಸಾಗಿ ಬೆಳೆದ ಮರಗಿಡಗಳು ಹಾಗೂ ವನ್ಯ ಜೀವಿಗಳನ್ನು ಹೊಂದಿರುವುದು ಅದೃಷ್ಟವೇ ಸರಿ"[೫] ಎನ್ನುವ ಪದ್ದಯ್ಯ ಅವರ ಮಾತು ಮುದನೂರ ಹಾಗೂ ದೇವನೂರುಗಳನ್ನು ಇಲ್ಲಿ ವಿಶೇಷವಾಗಿ ಪರಿಗಣಿಸಿದಂತಿದೆ. ಇದಕ್ಕೆ ಪೂರಕವೆಂಬಂತೆ ಮುದನೂರಿನಲ್ಲಿ ಚಿಲುಮೆಯಿಂದ ನಿರ್ಮಾಣವಾದ ೭ ತೀರ್ಥಗಳು ಇವೆ. ಇಲ್ಲಿನ ಸುತ್ತಲಿನ ಪ್ರದೇಶವು ಸದಾ ಹಸಿರಾಗಿದ್ದು, ಕೃಷಿ, ಅದರಲ್ಲೂ ಭತ್ತ ಬೆಳೆಯಲು ಯೋಗ್ಯವಾದ ಸ್ಥಳವಾಗಿದೆ ಎಂಬುದು ಈ ಆಧಾರಗಳಿಂದ ತಿಳಿಯುತ್ತದೆ.

### ೬.೧. ಮುದನೂರಿನ ತೀರ್ಥಗಳು.

ಮುದನೂರಿನಲ್ಲಿ ಪ್ರಧಾನವಾಗಿ ಏಳು ತೀರ್ಥಗಳು ಇದ್ದು, ಈ ನೀರನ್ನು ಆಧರಿಸಿ ಜನಜೀನವ ನಡೆಯುತ್ತಿತ್ತು ಎನ್ನುವುದಕ್ಕೆ ಇಂದಿಗೂ ಆಧಾರಗಳು ದೊರೆಯುತ್ತವೆ. ಆ ಏಳು ತೀರ್ಥಗಳು ಹೀಗಿವೆ. ೧. ರಾಮ ತೀರ್ಥ, ೨. ಲಕ್ಷ್ಮಣ ತೀರ್ಥ, ೩. ಸಂಗಮ ತೀರ್ಥ, ೪. ಪಾಂಡು ತೀರ್ಥ, ೫. ಮರಳು ತೀರ್ಥ, ೬. ಸಕ್ಕರೆ ತೀರ್ಥ, ೭. ಹಾಲು ತೀರ್ಥ. ಈ

ತೀರ್ಥಗಳಿರುವುದರಿಂದಲೇ ಮುದನೂರಿಗೆ ಪ್ರಾಚೀನ ಕಾಲದಿಂದಲೂ ಮುದಿನೀರು, ಆಮೋಧಪುರ ಮೊದಲಾದ ಹೆಸರುಗಳು ಬಂದಿವೆ ಎಂದು ಹೇಳಬಹುದು. ಈ ಏಳು ತೀರ್ಥಗಳಲ್ಲಿ ರಾಮೇಶ್ವರ ದೇವಾಲಯದ ಹೊರಗೆ ಪೂರ್ವದಲ್ಲಿ ಪಾಂಡುತೀರ್ಥವಿದೆ. ಇದನ್ನು ಪಾಳೆ ಪಾಂಡವರ ತೀರ್ಥವೆಂತಲೂ ಕರೆಯುವರು. ಇನ್ನು ಉತ್ತರಕ್ಕೆ ರಾಮತೀರ್ಥವಿದೆ. ಈ ತೀರ್ಥಗಳ ವಿಶೇಷವೆಂದರೆ ಇವುಗಳ ಸುತ್ತಲೂ ರಾಮಾಯಣ, ಮಹಾಭಾರತಗಳ ಪೌರಾಣಿಕ ಕಥನಗಳ ಕೆತ್ತನೆ ಇದೆ. ಪಾಂಡುತೀರ್ಥದಿಂದ ರಾಮತೀರ್ಥವನ್ನು ಬಳಸಿ ಹಾಗೆ ಮುಂದಕ್ಕೆ ನಡೆದರೆ, ಊರ ಹೊರಗೆ ಲಕ್ಷ್ಮಣ ತೀರ್ಥ ದೊರೆಯುತ್ತದೆ. ಇದರ ಒಂದು ಪಕ್ಕದಲ್ಲಿ ಭದ್ರಪ್ಪಯ್ಯನ ಮಠವಿದ್ದು, ಇಲ್ಲಿಯೇ ಒಂದು ನಟರಾಜ ವಿಗ್ರಹವಿದೆ. ಲಕ್ಷ್ಮಣ ತೀರ್ಥಕ್ಕೆ ಬರುವ ದಾರಿಯಲ್ಲಿಯೇ ತೀರ್ಥದ ಸಮೀಪವೇ ಒಂದು ಹನುಮಂತ ವಿಗ್ರಹವಿದ್ದು, ಗುಡಿಯಂತೆ ಚಿಕ್ಕದಾಗಿ ನಿರ್ಮಿಸಲಾಗಿದೆ. ಇನ್ನೊಂದು ಪಕ್ಕದಲ್ಲಿ ಲಕ್ಷ್ಮೇಶ್ವರ ಗುಡಿ ಇದ್ದು ಹೂತು ಹೋಗಿದೆ[೬] ಎನ್ನಲಾಗುತ್ತದೆ.

ಲಕ್ಷ್ಮಣ ತೀರ್ಥದ ಹತ್ತಿರವೇ ಒಂದು ಪುರುಷ ಹಾಗೂ ಸ್ತ್ರೀ ವಿಗ್ರಹವಿದ್ದು ಅವುಗಳನ್ನು ಜೇಡರ ದಾಸಿಮಯ್ಯ ಹಾಗೂ ದುಗ್ಗಳೆಯ ವಿಗ್ರಹಗಳೆಂದು ಹೇಳುವರು. ಇದನ್ನು ಗಮನಿಸಿದಾಗ ದಾಸಿಮಯ್ಯನಿಗಿಂತಲೂ ದುಗ್ಗಳೆಯ ವಿಗ್ರಹ ದೊಡ್ಡದಾಗಿದ್ದು, ಅಂದಿನ ಸ್ತ್ರೀ ಸಮಾನತೆ ಹಾಗೂ ಸ್ತ್ರೀಯನ್ನು ಪೂಜ್ಯ ಭಾವನೆಯಿಂದ ನೋಡುತ್ತಿದ್ದಕ್ಕೆ ಸಾಕ್ಷಿ ಎಂದು ಹೇಳಲಾಗುತ್ತದೆ. ಇದೇ ತೀರ್ಥದ ಪಕ್ಕ ಒಂದು ನಾಗರ ಶಿಲ್ಪವೂ ಇದೆ.

ಹಾಲು ತೀರ್ಥ ಹಾಗೂ ಸಕ್ಕರೆ ತೀರ್ಥಗಳು ಮುದನೂರಿನ ಪ್ರಾರಂಭದಲ್ಲಿಯೇ ಸಿಗುತ್ತವೆ. ಈ ಎರಡೂ ತೀರ್ಥಗಳು ಮೊದಲು ಹಾಳಾದ ಸ್ಥಿತಿಯಲ್ಲಿದ್ದು, ದುರಸ್ಥಿಯಲ್ಲಿದ್ದವು. ಈಗ ಇವುಗಳನ್ನು ಜೀರ್ಣೋದ್ಧಾರ ಮಾಡಲಾಗಿದೆ. ಇಲ್ಲಿಯೇ ಸ್ವಲ್ಪದೂರ ಮರಳು ತೀರ್ಥ ದೊರೆಯುತ್ತದೆ. ಮೊದಲು ಸಂಗಮನಾಥ ದೇವಾಲಯವಿದ್ದು, ಈಗ ಇದು ಕಂಡುಬರುವುದಿಲ್ಲ. ಈ ಸಂಗಮನಾಥ ದೇವಾಲಯದ ಬಳಿಯೇ ಸಂಗಮ ತೀರ್ಥವಿದ್ದುದಾಗಿ ತಿಳಿದು ಬರುತ್ತದೆ. ಮುದನೂರು ಹೀಗೆ ನೀರಿನ ಒರತೆಗಳನ್ನು ಹೊಂದಿದ ಸಮೃದ್ಧವಾದ ಊರು. ಈ ತೀರ್ಥಗಳಲ್ಲದೆ, ಊರನ್ನು ಇಬ್ಭಾಗವಾಗಿಸುವ ಒಂದು ಚಿಕ್ಕ ಹಳ್ಳ ಹರಿಯುತ್ತದೆ. ಅಷ್ಟೇ ಅಲ್ಲದೆ ಇಲ್ಲಿನ ಭೂಭಾಗ ಸುಣ್ಣದ ಕಲ್ಲಿನಿಂದ ಕೂಡಿದ್ದು, ನೀರಿನ ಸಂಗ್ರಹಕವಾಗಿ ಕಾರ್ಯ ನಿರ್ವಹಿಸುತ್ತದೆ. ಈ ನೀರು ಸಂಗ್ರಾಹಗೊಂಡು ಚಿಲುಮೆಯಾಗಿ ಉಕ್ಕಿ ಬರುತ್ತದೆ[೭] ಎಂದು  ಚಂದ್ರಶೇಖರ್.ಎಚ್ ತಮ್ಮ ಲೇಖನದಲ್ಲಿ ಹೀಗೆ ವಿವರಿಸುತ್ತಾ, "ಜೇಡರದಾಸಿಮಯ್ಯನ 'ತವನಿಧಿ' ಒಂದು ಜಲಗೋಳದ ಸುಂದರ ರೂಪಕ (concept of hydrological)"[೮] ಎನ್ನುತ್ತಾರೆ. ಹೀಗೆ ತವನಿಧಿಯ ಕಲ್ಪನೆಯನ್ನು ಅಲ್ಲಿನ ಜಲಗೋಳವನ್ನಾಧರಿಸಿ ವಾಸ್ತವದ ನೆಲೆಗಟ್ಟಿನಲ್ಲಿ ನೋಡಬಹುದು. ಇನ್ನು ಪುರಾಣಗಳ ಆಧಾರದ ಮೇಲೆ ತವನಿಧಿ ಎಂದರೆ ಏನು ಎಂದು ತಿಳಿಯಬೇಕಾಗುತ್ತದೆ.

ಹರಿಹರನ ಶಂಕರದಾಸಿಮಯ್ಯ ರಗಳೆ ಹಾಗೂ ಶಂಕರದಾಸಿಮಯ್ಯ ಪುರಾಣಗಳನ್ನು ಅವಲೋಕಿಸಿದಾಗ, ಅದರಲ್ಲಿಯೂ ಪ್ರಧಾನವಾಗಿ ಶಂಕರದಾಸಿಮಯ್ಯ ಪುರಾಣದಲ್ಲಿ "ದೇವರ ದಾಸಿಮಯ್ಯನಿಗೆ (ಜೇಡರ ದಾಸಿಮಯ್ಯ) ಭತ್ತದ ತವನಿಧಿ ಇದ್ದಿತು. ಈ ಬಗ್ಗೆ ಕವಿ ಕೊಡುವ ವಿವರ ಹೀಗಿದೆ, ತಂಡೋಪತಂಡವಾಗಿ ನೆಲ್ಲು ತುಂಬಿದ ಬಂಡಿಗಳು, ತಲೆಹೊರೆಯ, ಹೆಡಗೆ ತೋರಮೋಳಿಗೆ, ಹೇಸರ-ಕುದುರೆ-ಎತ್ತುಗಳ ಬೆನ್ನ ಮೇಲೆ ಹೊತ್ತುಕೊಂಡು ಹೋಗುತ್ತಿದ್ದ ಜನ ಮುದನೂರಿನ ದಾರಿಯಲ್ಲೆಲ್ಲ, ಕಂಡು ಬರುತ್ತಾರೆ. ರಾಜ್ಯದಲ್ಲೆಲ್ಲ ಧಾನ್ಯದ ಸುಗ್ಗಿ! ದೇವರ ದಾಸಿಮಯ್ಯನು 'ಎಮ್ಮ ಭತ್ತದಿ ನಾಡು ಬದುಕಿದೆ ಎನ್ನುವುದಲ್ಲಿ ದೇವರ ದಾಸಿಮಯ್ಯನ ತವನಿಧಿಯು ಸಮಯ ಸಂದರ್ಭದ ಇತಿಮಿತಿಗಳಿಗೆ ಒಳಪಡದ ಅಪೂರ್ವ ಸಂಪತ್ತಾಗಿತ್ತೆಂದು ತಿಳಿದುಬರುತ್ತದೆ."[೯]

ತವನಿಧಿಯು ಯಾವುದು? ಎಂಬುದು ಇಲ್ಲಿ ಮಹತ್ವದ ಪ್ರಶ್ನೆ, ಹರಿಹರನ ಶಂಕರ ದಾಸಿಮಯ್ಯ ರಗಳರಯಲ್ಲಿ ಬರುವ ಜೇಡರದಾಸಿಮಯ್ಯನ ಕಥೆಯಲ್ಲಿ ಈತ ಕೃಷಿಕಾಯಕವನ್ನು ಮಾಡುತ್ತಿದ್ದ ಎಂಬ ಉಲ್ಲೇಖವಿದೆ. ಮತ್ತೊಂದು ಅಂಶವೆಂದರೆ ಈಗಾಗಲೇ ಸ್ಪಷ್ಟಗೊಂಡಂತೆ ಶಂಕರ ದಾಸಿಮಯ್ಯನಿಗೆ ಧಾನ್ಯದ ಚೀಲವನ್ನು ಕಳುಹಿಸಲು ಆತ ಅದನ್ನೂ ಕ್ಷೀಣಿಸುವಂತೆ ಶಾಪ ನೀಡಿದ: ಅದರಿಂದ ಭತ್ತವೆಲ್ಲ ಕ್ಷೀಣಿಸಿ ಬಂದಾಯಿತು ಎಂಬ ಪುರಾಣ ಕಲ್ಪನೆ ಇದೆ. ಇಲ್ಲಿ ಕ್ಷೀಣಿಸಿದ್ದು ಯಾವುದು? ಎಂಬುದು ಮತ್ತೊಂದು ಪ್ರಶ್ನೆ. ಶಂಕರದಾಸಿಮಯ್ಯನು ಮನನೊಂದು ಜೇಡರದಾಸಿಮಯ್ಯನಿಗೆ ಶಾಪ ಹಾಕಿರಬಹುದು. ತಲಕಾಡು ಮರುಳಾಗಿ, ಮಧುರೈ ಹೊತ್ತಿ ಉರಿಯಲಿ ಹೀಗೆ ಪುರಾಣ ಹಾಗೂ ಐತಿಹ್ಯದಲ್ಲಿ ಕಂಡುಬರುವ ಅನೇಕ ಶಾಪ ಪ್ರಸಂಗಗಳನ್ನು ನಾವು ಕಾಣುತ್ತೇವೆ. ಅಂತೆಯೇ ಶಂಕರ ದಾಸಿಮಯ್ಯನ ಶಾಪ ಅಲ್ಲಿನ ನೀರು (ತವನಿಧಿ) ಬತ್ತಿಹೋಗಲಿ ಎಂದೂ ಇರಬಹುದು. ಅಲ್ಲಿನ ನೀರು ಬತ್ತಿ ಹೋಗಿ, ತೀರ್ಥಗಳೆಲ್ಲ ಅಳಿದು ಜನ ಸಂಕಷ್ಟಕ್ಕೆ ಗುರಿಯಾಗಿರಬಹುದು. ಮತ್ತೆ ದಾಸಿಮಯ್ಯ ದಂಪತಿಗಳು ಅಹಂ ಅನ್ನು ಬಿಟ್ಟು ತಮ್ಮ ಕಾಯಕ ಹಾಗೂ ದಾಸೋಹದ ನಿಮಿತ್ತ ಶಂಕರದಾಸಿಮಯ್ಯನಲ್ಲಿಗೆ ಬಂದು ಬೇಡಲು ಆತನು ಮತ್ತೆ ಕ್ಷೀಣಿಸಿದ ತವನಿಧಿ ಚೈತನ್ಯಗೊಳ್ಳುವಂತೆ ವರಪ್ರಧಾನ ಮಾಡಿದನು. ಈವರೆಗೆ ಕೇವಲ ತುಂಬಿಕೊಂಡಿದ್ದ ನೀರಿನ ಒರತೆಗಳು ಉಕ್ಕಿ ಹರಿಯಲಿ "ತವನಿಧಿಯು ಸೋರುವಾಯಿಂ ಬಪ್ಪುದಿಂದು ಮೊದಲಾಗಿ ಮೇಲುಬಾಯಿಂದುಕ್ಕಿ ಬರಲೆಂದು"[೧೦] ಹಾರೈಸಿದ. ಅಂತೆಯೇ ಅಲ್ಲಿನ ನೀರಿನ ಒರತೆಗಳು ವರ್ಷವಿಡೀ ತುಂಬಿ ಹರಿಯುತ್ತವೆ ಎಂದು ಗ್ರಹಿಸಬಹುದು.

ತವನಿಧಿಯ ಕುರಿತು ವಿದ್ವಾಂಸರಲ್ಲಿ, ಆ ಊರಿನ ಜನಸಾಮಾನ್ಯರಲ್ಲಿ ಹಲವು ಚಿಂತನೆಗಳು, ಕತೆಗಳು ರೂಢಿಯಲ್ಲಿರುವುದು ಕಂಡುಬರುತ್ತದೆ. “ದಾಸಿಮಯ್ಯನವರು ತಮ್ಮ ಇಷ್ಟದೈವವಾದ ರಾಮನಾಥನನ್ನು ಪೂಜಿಸಲು ಪ್ರಾರಂಭಿಸಿದ ದಿನಗಳಿಂದಲೂ ಪ್ರತಿ ದಿನವೂ ಹನ್ನೆರಡು ಹರಿದಾರಿ ದೂರದ (ಭೀಮಾ) ನದಿಗೆ ಕಾಲ್ನಡಿಗೆಯಲ್ಲಿ ಹೋಗಿ ಗಡಿಯಲ್ಲಿ, ನಡೆಮಡಿಯಿಂದ ನೀರನ್ನು ತರುತ್ತಿದ್ದರು. ಹೀಗಿರುವಾಗ ಒಂದು ದಿನ ಬೆಳಗಿನ ‘ಜಾವ’ದಲ್ಲಿ ದೇವರ ದಾಸಿಮಯ್ಯನವರ ಕನಸಿನಲ್ಲಿ ಗಂಗಾ ಮಾತೆಯು ಪ್ರತ್ಯಕ್ಷಳಾಗಿ ಅಷ್ಟು ದೂರ ನಡೆದುಕೊಂಡು ಹೋಗುವುದು ಬೇಡ. ರಾಮನಾಥ ದೇವಾಲಯದ ಹತ್ತಿರದಲ್ಲೆಲ್ಲ ನಾನು ಉದ್ಭವಿಸಿ ಶಾಶ್ವತವಾಗಿ ಹರಿದು, ಮುದನೂರು ಕ್ಷೇತ್ರದಲ್ಲಿ ‘ತವನಿಧಿ’ ನೆಲೆಸುವಂತೆ ಮಾಡುತ್ತೇನೆ. ನೀನು ನಾಳೆಯೇ ನಿನಗಿಷ್ಟವಾದ ಸ್ಥಳಗಳಲ್ಲಿ ಪುಷ್ಕರಣಿಗಳನ್ನು ತೋಡಿಸಿ ನಿರ್ಮಿಸು ಎಂದು ಆಶೀರ್ವದಿಸಿ ಮಾಯವಾದಳು. ತೇಜೋಮಯ ವ್ಯಕ್ತಿತ್ವದ ದಾಸಿಮಯ್ಯನವರು, ಬೆಳಗಾಗುತ್ತಿದಂತೆಯೇ ಜನರನ್ನು ಕರೆದು, ತಮಗೆ ಗಂಗಾ ಮಾತೆಯ ‘ಅಪ್ಪಣೆ’ ಯಾಗಿರುವುದನ್ನು ಹೇಳಿ, ಮುದನೂರಿನಲ್ಲಿ ಸಪ್ತ (ಏಳು) ಪುಷ್ಕರಣಿಗಳನ್ನು ತೋಡಿಸಿದರು. ಗಂಗೆಯು ತಾನೇ ತಾನಾಗಿ ಪುಷ್ಕರಣಿಗಳಲ್ಲಿ ಉಕ್ಕಿ ಹರಿಯತೊಡಗಿದಳು. ಮುದನೂರು ಕ್ಷೇತ್ರವು ‘ಮುದನೂರು ತೀರ್ಥ’ ಎಂದು ಹೆಸರಾಯಿತಲ್ಲದೆ, ಆ ಸೀಮೆಯೆಲ್ಲವೂ ಹಚ್ಚಹಸಿರಾಗಿ ದವಸ-ಧಾನ್ಯಗಳು ಎಲ್ಲರ ಮನೆಗಳಲ್ಲೂ ತುಂಬಿ ತುಳುಕಿದವು”[೧೧] ಎನ್ನುವುದು ಒಂದು ವಾಸ್ತವಿಕತೆಯನ್ನಾಧರಿಸಿದ ಕತೆಯಾದರೆ ಅಲ್ಲಿನ ಊರಿನ ಹಿರಿಯರು ಇನ್ನು ವಿಶೇಷವಾಗಿ ಇಲ್ಲಿನ ತೀರ್ಥಗಳ ಕತೆಯನ್ನು ಹೇಳುತ್ತಾರೆ.

“ದಿನಾಲು ಮಡಿ ಬಟ್ಟೆಯಲ್ಲಿ ಭೀಮಾನದಿಯಿಂದ ನೀರು ತಂದು ಅಭಿಷೇಕ ಮಾಡಿ ‘ರಾಮನಾಥನ’ ಪೂಜೆ ಮಾಡುತ್ತಿರುವ ದಾಸಿಮಯ್ಯನ ಕಷ್ಟ ಕಂಡ ಗಂಗಾ ಮಾತೆ ಪ್ರತ್ಯಕ್ಷವಾಗಿ ಅಪ್ಪ ಮಗನೆ ನೀನು ಈ ರೀತಿಯಾಗಿ ದಿನಾಲು ಬರುವುದನ್ನು ನನಗೆ ನೋಡಲಿಕ್ಕಾಗದು ನೀನು ಮುಂದೆ ಮುಂದೆ ಸಾಗು ನಾನು ನಿನ್ನ ಹಿಂದೆ ಬರುತ್ತೇನೆ. ಆದರೆ ನಾನು ಬರುವಾಗ ಬಹಳ (ಶಬ್ದ) ಸದ್ದು ಆಗುತ್ತದೆ; ನೀನು ಹೆದರ ಬೇಡ ಮಗ ಎಂದ ಗಂಗಾ ಮಾತೆಯು ಮಾಯವಾದಳು. ನಂತರ ದಾಸಿಮಯ್ಯ ಮುಂದೆ ಮುಂದೆ ಬರುವಾಗ ಗುಡ್ಡ, ಕಲ್ಲು ಬಂಡೆಗಳಲ್ಲಿ ಸದ್ದು ಜೋರಾಗಿ ಬರತೊಡಗಿತು ಆಗ ದಾಸಿಮಯ್ಯ ಹಿಂದಕ್ಕೆ ತಿರುಗಿ ನೋಡಿದಾಗ, ಗಂಗಾ ಮಾತೆ ಭೂಮಿಯಲ್ಲಿ ಹುದುಗಿದಳು ಎಂದು ಹೇಳುವ ಕೆಲವು ಹಿರಿಯರು ಮತ್ತೆ ಹೀಗೂ ಹೇಳುತ್ತಾರೆ. ಗಂಗಾ ಮಾತೆಯಿಂದ ನಮ್ಮ ಊರು ಹೊಳೆಯಾಗಿ ಹರಿದರೆ, ನಮ್ಮ ಊರಿನ ಜನ ರೈತರ ಜಮೀನು ನೀರಿನಿಂದ ತುಂಬಿ ಅವರ ಕೃಷಿಗೆ ಭೂಮಿ ಇರುವುದಿಲ್ಲವೆಂದು ಯೋಚಿಸಿದ ದಾಸಿಮಯ್ಯ ಹಿಂದಕ್ಕೆ ತಿರುಗಿ ನೋಡಿದ್ದಾರೆ”[೧೨] ಆಗ ಗಂಗೆಯು ಅಲ್ಲಿ

ಹುದುಗಿದ್ದಾಳೆ ಎಂದು ದಾಸಿಮಯ್ಯನ ಸಾಮಾಜಿಕ ಕಳಕಳಿಯನ್ನು ಇಂದಿಗೂ ನೆನೆಯುತ್ತಾರೆ. ಪುಷ್ಕರಣಿಗಳ ಸೃಷ್ಟಿಯ ಕಥೆಯನ್ನು ಹೀಗೆ ವಿವರಿಸುವ ಜನರೇ, ಮುದನೂರಿನ ಈ ಏಳು ತೀರ್ಥಗಳನ್ನು ದೇವಾಂಗನ ಏಳು ಅವತಾರಗಳೆಂತಲೂ ಕರೆಯುವರು.[೧೩]

ಅದೇನೇ ಇದ್ದರೂ ಈ ತೀರ್ಥಗಳು ವರ್ಷವಿಡೀ, ಎಲ್ಲ ಕಾಲಗಳಲ್ಲಿಯೂ ತುಂಬಿ ಹರಿಯುತ್ತವೆ. ಇವುಗಳಿಂದ ಮುದನೂರು ಹಚ್ಚ ಹಸಿರಾಗಿ ಸಮೃದ್ಧಗೊಂಡಿದೆ ಎಂಬುದು ನಿಜ. ತವನಿಧಿಯ ಕಲ್ಪನೆ ಒಂದು ಕಾಲ್ಪನಿಕ ಹಾದಿಯಲ್ಲಿಯೂ, ವಾಸ್ತವಿಕ ನೆಲೆಯಲ್ಲಿಯೂ, ಪೌರಾಣಿಕ ಹಿನ್ನೆಲೆಯಿಂದ ಹೀಗೆ ಹಲವು ರೀತಿಯಲ್ಲಿ ಚಿತ್ರಿತಗೊಂಡಿರುವುದು ವಿಶೇಷ. ಹೆಚ್ಚು ಮಟ್ಟಿಗೆ ತವನಿಧಿ ಶಿವನಿತ್ತ ಅಕ್ಷಯ ಪಾತ್ರೆ ಆದರೆ ಅದು ಎಂತಹದು ಎನ್ನುವುದನ್ನು ತಿಳಿಯಲು ಈ ಕತೆಗಳು, ವಿದ್ವಾಂಸರ ಸಂಶೋಧನೆಗಳು ಹಲವು ಹೊಸ ಸಂಶೋಧನಾ ಸಾಧ್ಯತೆಗಳನ್ನೊದಗಿಸುತ್ತವೆ.

## ೬.೨. ಮುದನೂರಿನ ದೇವಾಲಯಗಳು

ಮುದನೂರು ಧಾರ್ಮಿಕ ಸ್ಥಳವಾಗಿದ್ದು, ಇಲ್ಲಿ ಅನೇಕ ದೇವಾಲಯಗಳಿವೆ. ಪ್ರಧಾನವಾಗಿ ವೈಷ್ಣವ ಹಾಗೂ ಶೈವ ದೇವಾಲಯಗಳಿರುವುದು ಕಂಡು ಬರುತ್ತದೆ. ಇಲ್ಲಿನ ದೇವಾಲಯಗಳನ್ನು ಎರಡು ರೀತಿಯಲ್ಲಿ ವಿಭಾಗಿಸಬಹುದು. ಒಂದು ಪ್ರಸ್ತುತವಿರುವ ದೇವಾಲಯಗಳು, ಎರಡನೆಯದು ಪ್ರಸ್ತುತವಿಲ್ಲದೇ ನಶಿಸಿಹೋಗಿದ್ದು, ಶಾಸನಗಳಲ್ಲಿ ಉಲ್ಲೇಖಗೊಂಡ ದೇವಾಲಯಗಳು. ಮುದನೂರು ಮೊದಲು ವೈಷ್ಣವ ನೆಲೆಯಾಗಿದ್ದು ನಂತರ ಶೈವೀಕರಣಗೊಂಡಿರಬೇಕು. ಇದಕ್ಕೆ ಇತಿಹಾಸದಲ್ಲಿ ಹಲವು ಕುರುಹುಗಳು ದೊರೆಯುತ್ತವೆ. ಜೇಡರದಾಸಿಮಯ್ಯನು ಮುದನೂರಿನಲ್ಲಿ ವೈಷ್ಣವರನ್ನು ಶೈವರನ್ನಾಗಿಸಿ ಎಂಬ ಕಾವ್ಯಗಳ ದಾಖಲೆ ದೇವಾಲಯಗಳ ಅಧ್ಯಯನವು ಇಂಬು ಕೊಡುತ್ತದೆ. ಮುದನೂರಿನಲ್ಲಿ ಹಲವು ದೇವಾಲಯಗಳಿದ್ದು, ಅವುಗಳಲ್ಲಿ ಪ್ರಮುಖವಾದವುಗಳನ್ನು ಇಲ್ಲಿ ಚರ್ಚಿಸಲಾಗುವುದು.

### ರಾಮೇಶ್ವರ ಅಥವಾ ರಾಮನಾಥ ದೇವಾಲಯ

ರಾಮೇಶ್ವರ ದೇವಾಲಯವು ಪುರಾಣ ಪ್ರಸಿದ್ಧವಾದುದು. ಜೇಡರದಾಸಿಮಯ್ಯನ ಅಸ್ತಿತ್ವ ಹಾಗೂ ಬೆಳವಣಿಗೆ ಈ ರಾಮೇಶ್ವರನಿಂದಲೇ ಎನ್ನಲಾಗುತ್ತದೆ. ರಾಮನಾಥ ದೇವಾಲಯವು ಪೂರ್ವಕ್ಕೆ ಮುಖವಾಗಿದೆ. ಇದು ದ್ವಿಕೂಟ ದೇವಾಲಯವಾಗಿದ್ದು ಗರ್ಭಗೃಹದಲ್ಲಿ ರಾಮನಾಥನ ಲಿಂಗವಿದೆ. ಈ ದೇಗುಲದ ಬಗ್ಗೆ ಎಚ್.ಎಸ್. ಬೇನಾಳ ಅವರು ಹೀಗೆ ವಿವರಿಸುತ್ತಾರೆ. “ಮೇಲ್ನೋಟಕ್ಕೆ ದ್ವಿಕೂಟಚಲ ದೇವಾಲಯವೆಂದು ಕಂಡು ಬಂದರೂ, ಈ ದೇವಾಲಯದ

ವಾಸ್ತುಶೈಲಿಯನ್ನು (ಲಕ್ಷಣಗಳನ್ನು) ಸೂಕ್ಷ್ಮವಾಗಿ ಗಮನಿಸಿದರೆ 'ರಾಮಲಿಂಗ' ಗರ್ಭಗೃಹವುಳ್ಳ ಏಕಕೂಟ ದೇವಾಲಯವಾಗಿ ಪ್ರಾಚೀನ ಕಾಲದಲ್ಲಿ ಇದು ನಿರ್ಮಾಣಗೊಂಡಿದ್ದು, ನವರಂಗವು ಮಂಟಪದಂತೆ ತೆರೆದ ಹಜಾರಾಗಿದ್ದು, ಕಾಲಕ್ರಮೇಣ (ದಾಸಿಮಯ್ಯನವರ ಕಾಲಕ್ಕೆ) ನವರಂಗ ಭಿತ್ತಿದ್ವಾರಗಳು ಹಾಗೂ ಪಶ್ಚಿಮಾಭಿಮುಖವಾದ ಗರ್ಭಗೃಹವೊಂದನ್ನು ನಿರ್ಮಿಸಿದ್ದಿರಬೇಕು; ಮೊದಲಿಗೆ ಈ ಗರ್ಭ ಗೃಹದಲ್ಲಿ ಸೂರ್ಯನ ವಿಗ್ರಹವನ್ನಿರಿಸಿರಬೇಕು. ನೋಡಲು 'ದ್ವಿಕೂಟಾಚಲ' ದೇವಾಲಯದಂತೆ ಕಂಡುಬಂದರೂ, ರಾಮನಾಥನ ಗರ್ಭಗೃಹದ, ಮೇಲಿನ ಗೋಪುರ(ಶಿಖರ) ವಷ್ಟೇ ಪ್ರಧಾನವಾಗಿ ಕಾಣಿಸುವಂತಿದೆ".[೧೪] ಹಾಗಾಗಿ ಮೊದಲು ಏಕಕೂಟ ದೇವಾಲಯವಾಗಿದ್ದ ರಾಮೇಶ್ವರ ದೇವಾಲಯವು ಬಹುಶಃ ದಾಸಿಮಯ್ಯನ ಕಾಲಕ್ಕೆ ದ್ವಿಕೂಟ ದೇವಾಲಯವಾಗಿ ಪರಿವರ್ತನೆ ಹೊಂದಿರಬೇಕು ಎಂದು ಸಂಶಯಿಸಲಾಗಿದೆ. ಅಷ್ಟೇ ಅಲ್ಲದೆ ಇಲ್ಲಿ ಗರ್ಭಗುಡಿಯು ಪೂರ್ವಕ್ಕಿದ್ದು, ಲಲಾಟದಲ್ಲಿ ಗಜಲಕ್ಷ್ಮಿ ಕೆತ್ತನೆ ಇದೆ. ಈ ಕೆತ್ತನೆ ಆಗಿನ ಕಾಲದ ಮುದನೂರಿನ ಸುತ್ತಲಿನ ಹಲವು ದೇವಾಲಯಗಳಲ್ಲಿ ಕಂಡುಬರುತ್ತದೆ. ಇಲ್ಲಿ ಮತ್ತೊಂದು ಊಹೆ ಮನಸ್ಸನ್ನು ಕೆದಕುತ್ತದೆ, ಅದೇನೆಂದರೆ ರಾಮನಾಥ ಅಥವಾ ರಾಮೇಶ್ವರ ದೇವಾಲಯವು ವೈಷ್ಣವ ದೇವರಾದ ರಾಮ(ವಿಷ್ಣುವಿನ ಅವತಾರ)ನ ದೇವಾಲಯವಾಗಿ ನಿರ್ಮಾಣಗೊಂಡು, ನಂತರದ ಕಾಲದಲ್ಲಿ ಅದು ಶೈವೀಕರಣ ಗೊಂಡಿರಬೇಕು.

ಈ ದೇವಾಲಯದಲ್ಲಿ ಪಶ್ಚಿಮಾಭಿಮುಖವಾಗಿರುವ ಒಂದು ಗರ್ಭಗುಡಿ ಇದ್ದು, ಇದರಲ್ಲಿ ಮೊದಲು ಜೇಡರದಾಸಿಮಯ್ಯನು ನೇಯ್ಗೆ ಕಾಯಕ ಮಾಡುತ್ತಿದ್ದನೆಂಬ ಪ್ರತೀತಿ ಇದೆ. ಆತನ ಮರಣದ ನಂತರದಲ್ಲಿ ಈ ಸ್ಥಳದಲ್ಲಿ, ಆತನ ಗದ್ದುಗೆ ನಿರ್ಮಿಸಿ ಉಮಾಮಹೇಶ್ವರ ವಿಗ್ರಹವನ್ನು ಇರಿಸಲಾಗಿತ್ತು, ಇತ್ತೀಚೆಗೆ ಈ ದೇವಾಲಯದಲ್ಲಿ ಜೇಡರ ದಾಸಿಮಯ್ಯನ ಕಪ್ಪು ಕಲ್ಲಿನ ಮೂರ್ತಿಯನ್ನು ಪ್ರತಿಷ್ಠಾಪಿಸಿದ್ದು, ಇದು ೨೦೦೩ ರಲ್ಲಿ ತಯಾರಾದ ಆಧುನಿಕ ವಿಗ್ರಹವಾಗಿದೆ. ಇದೇ ದೇವಾಲಯದಲ್ಲಿ ಒಂದು ಗಣಪತಿ ವಿಗ್ರಹ ಮತ್ತು ಒಂದು ವೀರಗಲ್ಲು ದೊರೆಯುತ್ತವೆ. ದೇವಾಲಯದ ಕೆತ್ತನೆಗಳು ಸ್ಪಷ್ಟವಾಗಿಲ್ಲದೆ, ಮಾಸಿದಂತೆ ಕಂಡು ಬರುತ್ತವೆ. ರಾಮನಾಥ ದೇವಾಲಯದ ಹೊರಗೆ ೫ ದೇವಾಲಯಗಳಿದ್ದು, ಆ ಎಲ್ಲವೂ ಗರ್ಭಗೃಹ ಹಾಗೂ ಅರ್ಧ ಮಂಟಪವನ್ನು ಹೊಂದಿವೆ. ಅದರ ಕೆಳಭಾಗದಲ್ಲಿ ರಾಮನಾಥ ದೇವಾಲಯದ ಒಳಗಿರುವಂತೆಯೇ ಕೆತ್ತನೆಗಳಿವೆ. ಇವುಗಳ ರಚನಾ ಶೈಲಿ ರಾಷ್ಟ್ರಕೂಟರ ಕಾಲವನ್ನು ಸೂಚಿಸುತ್ತದೆ.[೧೫] ಇಲ್ಲಿಯೇ ಒಂದು ದಕ್ಷಿಣ ಮೂರ್ತಿ ವಿಗ್ರಹ ಇರುವ ಕಿರುದೇವಾಲಯವಿದೆ.

ರಾಮೇಶ್ವರ ದೇವಾಲಯದ ಅಂತರಾಳದಲ್ಲಿ ಬ್ರಹ್ಮ-ವಿಷ್ಣು-ಮಹೇಶ್ವರರಿರುವ ಆಕರ್ಷಕ ಮಕರ ತೋರಣವಿದೆ. ದೇವಾಲಯ ಹೊರಗೆ ಅನೇಕ ಐತಿಹಾಸಿಕ ಅವಶೇಷಗಳು ಕಂಡು

ಬರುತ್ತವೆ. ಒಂದು ಮುರಿದು ಹೋದ ಶಾಸನ ಕಲ್ಲು, ಚಕ್ರದ ಕೆತ್ತನೆ, ಉಬ್ಬುಶಿಲ್ಪಗಳು ಎಲ್ಲವನ್ನು ಒಂದೆಡೆ ಇರಿಸಲಾಗಿದೆ ಕೆಲವು ಅಳಿದ ಸ್ಥಿತಿಯಲ್ಲಿಯೂ ಇನ್ನೂ ಕೆಲವು ಅಳಿದು ಹೋಗುತ್ತಿರುವ ಸ್ಥಿತಿಯಲ್ಲಿಯೂ ಕಂಡು ಬರುತ್ತವೆ. ಈ ದೇವಾಲಯಕ್ಕೆ ಹೊಂದಿಕೊಂಡಂತೆ ಶಾಸನಗಳಿವೆ. ದೇವಾಲಯದ ಒಳಗೂ ಶಾಸನಗಳಿರುವುದು ಕಂಡು ಬರುತ್ತದೆ. ರಾಮೇಶ್ವರ ದೇವಾಲಯದ ಪರಿಸರದಲ್ಲಿಯೇ ಸಿದ್ದಲಿಂಗ ಗುಡಿ ಕಂಡುಬರುತ್ತದೆ. ಗರ್ಭಗೃಹ, ತೆರೆದ ಅಂತರಾಳ, ನವರಂಗವನ್ನು ಹೊಂದಿದ್ದು, ಗರ್ಭಗೃಹ, ನವರಂಗಗಳು, ನಾಲ್ಕು-ಐದು ಶಾಖೆಗಳ ಬಾಗಿಲುವಾಡಗಳನ್ನು ಹೊಂದಿದೆ. ಇಲ್ಲಿಯೂ ಲಲಾಟದಲ್ಲಿ ಗಜಲಕ್ಷ್ಮಿಯ ಕೆತ್ತನೆಗಳಿವೆ. ಅಂತರಾಳದಲ್ಲಿ ಮಕರ ತೋರಣವಿದೆ.

ಚೌಡೇಶ್ವರಿ ದೇವಾಲಯವೂ ಮುದನೂರಿನಲ್ಲಿದ್ದು, ಪುರಾಣಗಳಲ್ಲಿ[೧೬] ಈ ದೇವಾಲಯದ ಬಗ್ಗೆ ಹೇಳಲ್ಪಟ್ಟಿದೆ. ಈ ದೇವಾಲಯವು ಮುದನೂರಿನ ಕುರುಬರ ಓಣಿಯಲ್ಲಿದ್ದು, ದೇವಿಯ ವಿಗ್ರಹ ನಿಂತಿರುವ ಭಂಗಿಯಲ್ಲಿದೆ. ಆಳೆತ್ತರದ ವಿಗ್ರಹವಾಗಿದ್ದು, ಶಕ್ತಿದೇವಿ ಎಂದು ಜನರು ಈ ದೇವಿಯನ್ನು ನಂಬುತ್ತಾರೆ. ಈಕೆಗೆ ಹರಕೆ ಹೊತ್ತು, ತೀರಿಸುವುದು ಸರ್ವೇ ಸಾಮಾನ್ಯವಾಗಿದೆ. ಈ ಗುಡಿಯನ್ನು ಜೀರ್ಣೋದ್ಧಾರ ಕ್ರಿಯೆಯ ಮೂಲಕ ಅಲ್ಲಲ್ಲಿ ಭದ್ರಗೊಳಿಸಲಾಗಿದೆ. ಮುದನೂರಿನ ಪ್ರಮುಖ ದೇವಾಲಯಗಳಲ್ಲಿ ಭದ್ರಪ್ಪಯ್ಯ ದೇವಾಲಯವು ಒಂದು. ಈಗಾಗಲೇ ಹೇಳಿರುವಂತೆ ಇದು ಲಕ್ಷ್ಮಣ ತೀರ್ಥದ ಬಳಿ ಇದೆ. ಇದನ್ನು ಭದ್ರಪ್ಪಯ್ಯನವರ ಮಠವೆಂದು ಕರೆಯಲಾಗುತ್ತದೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು, ಗರ್ಭಗೃಹ, ಅಂತರಾಳ, ನವರಂಗಗಳನ್ನು ಹೊಂದಿದೆ. ಇದರ ಮುಖ್ಯ ಬಾಗಿಲಿಗೆ ಬ್ರಹ್ಮ, ನಟರಾಜ, ವಿಷ್ಣುವನ್ನೊಳಗೊಂಡಂತೆ ಹಲವು ದೇವರುಗಳ ಪರಿವಾರವುಳ್ಳ ಮಕರ ತೋರಣವಿದೆ.

ಚಿಕ್ಕ ಮುದನೂರಿನ ಗೋಪಾಲಸ್ವಾಮಿ ದೇವಾಲಯ ಚಾರಿತ್ರಿಕ ಮಹತ್ವವನ್ನು ಹೊಂದಿದೆ. ಈ ದೇವಾಲಯದಲ್ಲಿಯೇ ಅತಿ ಹೆಚ್ಚು ಶಾಸನಗಳು ದೊರೆಯುತ್ತವೆ. ಇನ್ನು ಲಕ್ಷೀದೇವಿ ಗುಡಿ ಸಾಂಸ್ಕೃತಿಕ ಮಹತ್ವವನ್ನು ಹೊಂದಿದ್ದು, ಮುದನೂರಿನ 'ದೊಡ್ಡವಾಡೇ'ವು ಎಂದು ಕರೆಯಿಸಿಕೊಳ್ಳುವಲ್ಲಿ ಈ ದೇವಸ್ಥಾನವಿದೆ. ಇದು ಈಗಲೂ ಪೂಜೆಗೊಳ್ಳುತ್ತಿದ್ದು, ಲಕ್ಷ್ಮೀದೇವಿ ವಿಗ್ರಹವು ಚಿಕ್ಕದಾಗಿದೆ. ಈ ಮೇಲಿನ ದೇವಾಲಯಗಳಷ್ಟೆ ಅಲ್ಲದೇ ಲಕ್ಷ್ಮಣೇಶ್ವರ ದೇವಾಲಯ, ಭೃಂಗೇಶ್ವರ, ಮಲ್ಲಿಕಾರ್ಜುನ ದೇವಾಲಯ ಮೊದಲಾದ ದೇವಾಲಯಗಳು ಇದ್ದು, ಮುದನೂರನ್ನು ವೈಶಿಷ್ಟ್ಯ ಪೂರ್ಣಗೊಳಿಸಿವೆ. ಇವುಗಳೊಂದಿಗೆ ಶಾಸನಗಳಲ್ಲಿ ಉಕ್ತಿಗೊಂಡಿರುವ ದೇವಾಲಯಗಳಾದ ಕುಮಾರೇಶ್ವರ, ಮಾಚೇಶ್ವರ, ಚಂದೇಶ್ವರ, ಭೈರವ ಬೋಂಕೇಶ್ವರ, ಮಾಣಿಕೇಶ್ವರ, ಉಗ್ರಮಾರ್ತಾಂಡ, ಅಗಸ್ತೇಶ್ವರ, ನಾರಾಯಣ ದೇವರು, ಉತ್ತರೇಶ್ವರ ದೇವಾಲಯ ಮೊದಲಾದವು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅನನ್ಯತೆಯ ದೃಷ್ಟಿಯಿಂದ ಮಹತ್ವವಾದವುಗಳಾಗಿವೆ.

ಮುದನೂರಿನ ರಾಮನಾಥ ದೇವರು ದೇವಾಂಗ ಮಹರ್ಷಿಯ ಐಕ್ಯಸ್ಥಳ. ಲಿಂಗರೂಪ ಎಂದು ಹೇಳಲಾಗುತ್ತದೆ. ತದನಂತರದಲ್ಲಿ ಇದಕ್ಕೆ ಜೇಡರದಾಸಿಮಯ್ಯನ ಗುಡಿ ಬಂದು ಸೇರಿಕೊಂಡಿದೆ. ೨೦೦೩ ರಲ್ಲಿ ಇಲ್ಲಿನ ಉಮಾಮಹೇಶ್ವರ ವಿಗ್ರಹವನ್ನು ತೆಗೆದು ಜೇಡರದಾಸಿಮಯ್ಯನ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಈ ಸ್ಥಳವನ್ನು ಜೇಡರದಾಸಿಮಯ್ಯನ 'ಸಮಾಧಿಸ್ಥಳ' ಎಂದು ಕರೆಯಲಾಗುತ್ತದೆ. ಅಷ್ಟೇ ಅಲ್ಲದೆ "ಶಾಸನೋಕ್ತ ಕುಮಾರೇಶ್ವರ, ಬೋಂಕೇಶ್ವರ ದೇವಾಲಯಗಳ ಜಾಗದಲ್ಲಿ ಮಲ್ಲಿಕಾರ್ಜುನ ದೇವಾಲಯ ಜೀರ್ಣೋದ್ಧಾರಗೊಂಡತಿದೆ. ಲಕ್ಷ್ಮಣೇಶ್ವರ ದೇಗುಲದ ಕಂಬಗಳನ್ನು ವೇಣುಗೋಪಾಲ ದೇವಾಲಯಕ್ಕೆ ಬಳಸಿರಬೇಕು"[೧೭] ಎಂದು ಊಹಿಸಲಾಗಿದ್ದು, ದಾಖಲೆಗಳು ಇವೆ. ಇಲ್ಲಿನ ರಾಮನಾಥ ದೇವಾಲಯ ಹಾಗೂ ಲಕ್ಷ್ಮಣೇಶ್ವರ ದೇವಾಲಯಗಳು ಕಲ್ಯಾಣ ಚಾಲುಕ್ಯರ ಕಾಲದಿಂದಲೂ ಬಹಳ ಪ್ರಸಿದ್ಧವಾಗಿದ್ದವೆಂದು ಇಲ್ಲಿನ ಶಾಸನಗಳು ತಿಳಿಸುತ್ತವೆ.

**೬.೩. ಮುದನೂರಿನ ಶಾಸನಗಳು**

ಮುದನೂರು ಪೂರ್ವದಲ್ಲಿ ಒಂದು ವಿದ್ಯಾಕೇಂದ್ರವಾಗಿಯೂ, ಧಾರ್ಮಿಕ ಸ್ಥಳವಾಗಿಯೂ, ಅಷ್ಟೇ ಅಲ್ಲದೆ ಇದು ಶೈವ ಶಾಖೆಯಾದ ಲಕುಲೀಶ ಪಾಶುಪತದ ಶಾಖಾ ಸ್ಥಳವಾಗಿತ್ತು ಎಂಬುದು ಸತ್ಯ. ಹಲವು ರಾಜರುಗಳಿಂದ ದಾನದತ್ತಿ ಪಡೆದು ಉನ್ನತಿಗೊಂಡ ಪ್ರದೇಶ. ಇದಕ್ಕೆ ಸಂಬಂಧಿಸಿದಂತೆ ಅನೇಕ ಶಾಸನಗಳು ಈ ಊರಿನ ಚರಿತ್ರೆಯನ್ನು ಬಿಚ್ಚಿ ಹೇಳುತ್ತವೆ. ಮುದನೂರು ಮೇಲಿನ ಎಲ್ಲಾ ದಾಖಲೆಗಳೊಂದಿಗೆ ಇದು ಒಂದು ವಾಣಿಜ್ಯ ಕೇಂದ್ರವೂ ಆಗಿತ್ತು ಎಂಬುದು ಇಲ್ಲಿನ ಶಾಸನಗಳಿಂದ ತಿಳಿಯುತ್ತದೆ. ಮುದನೂರಿನಲ್ಲಿ ಒಟ್ಟು ದೊರೆಯುವುದು ೧೮ ಶಾಸನಗಳು ಎಂದು ಹನುಮಾಕ್ಷಿ ಗೋಗಿ ಮತ್ತು ಹಿರೇಮಠ.ಬಿ.ಆರ್[೧೮] ಅವರ ಅಧ್ಯಯನದಿಂದ ತಿಳಿಯುತ್ತದೆ. ಆದರೆ ಮುದನೂರಿನಲ್ಲಿ ಒಟ್ಟು ೨೧ ಶಾಸನಗಳಿವೆ[೧೯] ಎಂದು ಅಕ್ಕಿ.ಡಿ.ಎನ್ ಅವರು ಹೇಳುತ್ತಾರೆ. ಅವರು ಕೊಡುವ ವಿವರಣೆ ಹೀಗಿದೆ."ಕಲ್ಯಾಣ ಚಾಲುಕ್ಯರ ದೊರೆ ತ್ರಿಭುವನಮಲ್ಲ ಬಿರುದಾಂಕಿತ ಆರನೆಯ ವಿಕ್ರಮಾದಿತ್ಯನ ಕಾಲದ ಕ್ರಿ.ಶ ೧೦೯೩, ೧೦೯೯, ೧೧೦೦, ೧೧೦೫ ಹಾಗೂ ೧೨ನೇ ಶತಮಾನದ ೨ ಶಾಸನಗಳು ಒಟ್ಟು ಆರು ಶಾಸನಗಳಲ್ಲದೇ, ಭೂಲೋಕಮಲ್ಲ ಸೋಮೇಶ್ವರನ ಕಾಲದ ಕ್ರಿ.ಶ ೧೧೨೯, ೧೧೪೦ರ ಎರಡು ಶಾಸನಗಳು, ಇಮ್ಮಡಿ ಜಗದೇಕ ಮಲ್ಲನ ಕ್ರಿ.ಶ ೧೧೪೬, ೧೧೫೪ರ ಎರಡು ಶಾಸನಗಳು, ಕ್ರಿ.ಶ೧೧೮೦ರ ಮೂರನೆಯ ತೈಲಪ ತ್ರೈಲೋಕ್ಯಮಲ್ಲನ ಒಂದು ಶಾಸನ ಇವು ಕಲ್ಯಾಣ ಚಾಲುಕ್ಯರ ಕಾಲದವುಗಳಾದರೆ, ಕಳುಚೂರಿನ ದೊರೆಗಳಾದ ಬಿಜ್ಜಳನ ಕ್ರಿ.ಶ ೧೧೬೭, ಸೋವಿದೇವನ ಕ್ರಿ.ಶ ೧೧೭೫ ರ ಅಹವಮಲ್ಲನ ಕ್ರಿ.ಶ ೧೧೮೨ ರ ಇವರ ಮೂರು ಶಾಸನಗಳಲ್ಲದೆ, ಯಾದವ

ಬಿಲ್ಲಮನ ಕ್ರಿ.ಶ ೧೧೮೮ ರ ಶಾಸನ, ದೊರೆಗಳಾದ ಸಿಂಗಣನ ಕ್ರಿ.ಶ ೧೧೨೮ರ ಮೂರ ಶಾಸನಗಳು, ೧೨ನೇ ಶತಮಾನದ ೪ ಶಾಸನಗಳು, ೧೩ನೇ ಶತಮಾನದ ಒಂದು ಶಾಸನ. ಒಟ್ಟು ೨೧ ಶಾಸನಗಳು (ಚಿಕ್ಕಮುದನೂರಿನಲ್ಲಿ ೧೦, ಹಿರೇಮುದನೂರಿನಲ್ಲಿ ೧೧) ಮುದನೂರು ಗ್ರಾಮದಲ್ಲಿ ಲಭ್ಯವಾಗಿವೆ[೨೦] ಎಂದು ಸಂಖ್ಯಾವಾರು ವಿವರಣೆಗಳನ್ನು ನೀಡುತ್ತಾರೆ.

ಈ ಶಾಸನಗಳಲ್ಲಿ ದೊರೆಯುವ ಮಹತ್ವದ ವಿಷಯಗಳೆಂದರೆ, ಒಂದನೆಯದಾಗಿ ಯಾವ ಯಾವ ರಾಜರ ಕಾಲದಲ್ಲಿ ಮುದನೂರು ಆಳ್ವಿಕೆಗೊಳಪಟ್ಟಿತ್ತು. ಎರಡನೆಯದಾಗಿ ಯಾರಿಂದ ಈ ಊರು ಮತ್ತು ಇಲ್ಲಿನ ದೇವಾಲಯಗಳು ಜೀರ್ಣೋದ್ಧಾರಗೊಂಡವು ಎನ್ನುವುದನ್ನು ಗಮನಿಸಬೇಕಾಗುತ್ತದೆ. ಕಲ್ಯಾಣ ಚಾಲುಕ್ಯರ ಕಾಲದಿಂದ ಯಾದವರವರೆಗಿನ ಶಾಸನಗಳು ಇಲ್ಲಿವೆ. ಭೃಂಗಿ ಗುಡಿಯ ಮುಂದಿರುವ ಶಾಸನ ಇದು ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯ ಕಾಲದ್ದಾಗಿದ್ದು, ಇದರಲ್ಲಿ ಮುದನೂರನ್ನು 'ಅಗ್ರಹಾರ ಮುದನೂರ' ಎಂದು ಕರೆಯಲಾಗಿದೆ. ಈ ಶಾಸನದ ಪಾಠ ಕುಮಾರೇಶ್ವರ ದೇವರಿಗೆ, ರಾಮೇಶ್ವರ ದೇವರಿಗೆ ಭೂಮಿ, ಹಣ, ಅಂಗಡಿಗಳನ್ನು, ಸಂತೆಯ ಆಯಗಳನ್ನು ದತ್ತಿಯಾಗಿ ನೀಡಿದ ವಿವರಗಳಿವೆ. ಈ ಶಾಸನದ ಕಾಲ ಕ್ರಿ.ಶ ೧೧೦೯ ಡಿಸೆಂಬರ್ ೧೪ ಬುಧವಾರಕ್ಕೆ ಸಮಾನ[೨೧] ಎಂದು ವಿದ್ವಾಂಸರು ಗುರುತಿಸಿದ್ದಾರೆ. ಈ ಶಾಸನದಲ್ಲಿ ದಕ್ಷಿಣ ವಾರಣಾಸಿ, ಹಗರಿಟಗೆಯ ನಾಡು ಎಂಬ ಎರಡು ಸಾಲುಗಳು ಮುದನೂರಿನ ಕುರಿತು ತಿಳಿಸುತ್ತವೆ. ಇಲ್ಲಿನ ಕೆಲವು ದೇವಾಲಯಗಳು, ದತ್ತಿ ನೀಡಿದವರ ವಿವರಗಳು ಬರುತ್ತವೆ.

ಗೋಪಾಲ ಸ್ವಾಮಿ ದೇವಾಲಯದ ಆವರಣದಲ್ಲಿನ ಶಾಸನಗಳು ಸಹ ಇಂತಹದ್ದೇ ಮಹತ್ವವನ್ನು ಹೊಂದಿವೆ. ಇದರಲ್ಲಿಯ ನಾಲ್ಕು ಶಾಸನಗಳು ಲಕ್ಷ್ಮೇಶ್ವರ ದೇವರಿಗೆ ನೀಡಿದ ದತ್ತಿಯನ್ನು ಕುರಿತು ಹೇಳಿದರೆ, ಇನ್ನುಳಿದ ನಾಲ್ಕು ಶಾಸನಗಳು ರಾಮೇಶ್ವರ ದೇವರಿಗೆ ನೀಡಿದ ದತ್ತಿಯ ವಿಚಾರವನ್ನು ತಿಳಿಸುತ್ತವೆಂದು ಇವುಗಳನ್ನು ಎರಡು ರೀತಿಯಾಗಿ ವಿಂಗಡಿಸಬಹುದು. ೧. ರಾಮೇಶ್ವರ ದೇವಾಲಯದ ದತ್ತಿ ಕುರಿತ ಶಾಸನಗಳು–ಕ್ರಿ.ಶ ೧೧೪೬, ೧೨೧೮, ೧೨೧೮ ಜೂನ್ ೨೨, ಹದಿಮೂರನೇ ಶತಮಾನದ್ದು ಎನ್ನಲಾದ ಶಾಸನಗಳು. ೨. ಲಕ್ಷ್ಮಣೇಶ್ವರ ದೇವಾಲಯಕ್ಕೆ ನೀಡಿದ ದತ್ತಿ ಕುರಿತ ಶಾಸನಗಳು–ಕ್ರಿ.ಶ ೧೧೭೩, ೧೧೬೭, ೧೧೮೨, ೧೧೮೮ರ ಕಾಲದ ಶಾಸನಗಳು. ಗೋಪಾಲಸ್ವಾಮಿ ದೇವಾಲಯದ ಹಿಂದಿರುವ ಜೀರ್ಣಮಂಟಪದ ಕಂಬಗಳ ಮೇಲೆ ಈ ಶಾಸನಗಳನ್ನು ಕೆತ್ತಲಾಗಿದೆ.

ರಾಮನಾಥ ದೇವಾಲಯದ ಆವರಣದಲ್ಲಿಯೂ ಹಲವು ಶಾಸನಗಳು ಕಂಡು ಬರುತ್ತವೆ. ಅವುಗಳಲ್ಲಿ ದೇವಾಲಯದ ಬಲ ಭಾಗದಲ್ಲಿನ ಶಾಸನವೂ ಒಂದು. ಇದು ಕಲ್ಯಾಣ ಚಾಲುಕ್ಯ

ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ಕಾಲದ್ದು ಎನ್ನಲಾಗಿದೆ. ಈ ಶಾಸನವು ದಾನವನ್ನು ನೀಡಿದ್ದರ ಬಗ್ಗೆ ಹೇಳುತ್ತದೆ. ಮಹಾಮಂಡಲೇಶ್ವರ ಗೋಮ ದೇವರನು ಹಾಗೂ ಮುದಿನೀರ ಮಹಾಜನರು ಅಗಸ್ತ್ಯೇಶ್ವರ ದೇವರಿಗೆ ಭೂದಾನ ನೀಡಿದುದಾಗಿ ತಿಳಿಸುತ್ತದೆ. ಈ ಶಾಸನ ಕಾಲ ಕ್ರಿ.ಶ ೧೧೯೩ ಎಂದು ಖಚಿತಗೊಳಿಸಲಾಗಿದೆ. ಮತ್ತೊಂದು ಗುಡಿಯ ಹೊರಗಿನ ಶಾಸನ. ಇದರ ಕಾಲ ಕ್ರಿ.ಶ ೧೧೧೫. ಇದು ಕೂಡ ಆರನೇ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಿಸಿದ್ದೇ ಆಗಿದೆ. "ಆರನೆಯ ವಿಕ್ರಮಾದಿತ್ಯ ಮಹಾಮಂಡಲೇಶ್ವರ ಜೋಗಮರಸನ ಹೆಂಡತಿ ತಾರಾದೇವಿ ಮಹಾಜನರಿಗೆ ಐವತ್ತು(೫೦) ಗದ್ಯಾಣ ಹಣ ಕೊಟ್ಟು ಪಡೆದ ಭೂಮಿಯನ್ನು ಉತ್ತರೇಶ್ವರ ದೇವಾಲಯಕ್ಕೆ ದಾನವಾಗಿ ನೀಡಿದ ವಿಷಯವನ್ನು ಈ ಶಾಸನ ತಿಳಿಸುತ್ತದೆ."[೨೨]

ದೇವಾಲಯದ ಎರಡನೇ ಕಂಬದ ಮೇಲೆ ಒಂದು ಶಾಸನವಿದ್ದು, ಇದರ ಕಾಲ ಕ್ರಿ.ಶ ೧೧ ರಿಂದ ೧೨ನೇ ಶತಮಾನವಿರಬಹುದು ಎನ್ನಲಾಗುತ್ತದೆ. ಇದೂ ಸಹ ಕಲ್ಯಾಣ ಚಾಲುಕ್ಯ ದೊರೆ ಆರನೇ ವಿಕ್ರಮಾದಿತ್ಯನ ಪ್ರಭುತ್ವವನ್ನು ಸೂಚಿಸುತ್ತದೆ. ರಾಮೇಶ್ವರ ದೇವಾಲಯದ ಉದ್ಧಾರಕ್ಕಾಗಿ ಅಲ್ಲಿನ ಜನರು ತೇಜೋರಾಶಿ ಪಂಡಿತನಿಗೆ ಭೂಮಿ ಮತ್ತು ಹಣ ದಾನ ನೀಡಿದ ವಿಷಯ ಶಾಸನದ ಪಾಠದಲ್ಲಿದೆ. ಹಾಗೆ ಇದೇ ದೇವಾಲಯದ ಉತ್ತರ ದಿಕ್ಕಿನ ಜಾಲಿ ಗಿಡದ ಕೆಳಗಿನ ಶಾಸನವೂ ಇದೇ ಕಾಲದ್ದಾಗಿದ್ದು ಲಕ್ಷ್ಮರಸನ ಮಗ ಕಪ್ಪದೇವರಸನು ಬ್ರಹ್ಮಪುರಿಯ ಸತ್ರದ ಅಗ್ಗಿಷ್ಟಿಗೆಗೆ ಹಣ ದಾನ ಮಾಡಿದ ವಿಷಯವಿದೆ. ಕ್ರಿ.ಶ ೧೧೭೯ ರಲ್ಲಿ ರಚಿತವಾದ ಮತ್ತೊಂದು ಶಾಸನ ದೇವಾಲಯದ ಒಳಗಿನ ಗೋಡೆಯ ಕಲ್ಲಿನಲ್ಲಿ ಕೆತ್ತಲಾಗಿದೆ. ಇದು ಮೂರನೇ ಸೋಮೇಶ್ವರನ ಕಾಲದ್ದು. ಕ್ರಿ.ಶ ೧೦೮೩ ರ ಶಾಸನವೂ ಈತನದೇ ಆಗಿದ್ದು ದೇವಾಲಯದ ಒಂದನೇ ಕಂಬದ ಮೇಲ್ಭಾಗದಲ್ಲಿದೆ. ಕ್ರಿ.ಶ ೧೧೫೪ ರ ಶಾಸನ ದೇವಾಲಯದ ಹತ್ತಿರದಲ್ಲಿದೆ. ಕ್ರಿ.ಶ ೧೧೮೦ ರ ಶಾಸನ ದೇವಾಲಯದ ಹೊರಗೆ ನಿಲ್ಲಿಸಲಾಗಿದೆ. ಈ ಎಲ್ಲಾ ಶಾಸನಗಳು ದೇವಾಲಯಕ್ಕೆ ನೀಡಿದ ದಾನ, ದತ್ತಿಗಳನ್ನು ತಿಳಿಸುತ್ತವೆ.

**೬.೪. ದೇವರದಾಸಿಮಯ್ಯ: ಜಾತ್ರಾಮಹೋತ್ಸವ.**

ಮುದನೂರಿನಲ್ಲಿ ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತದೆ. ಈ ಜಾತ್ರೆಯ ವಿಶೇಷತೆ ಎಂದರೆ, ಇದನ್ನು ದೇವರದಾಸಿಮಯ್ಯನ ಜಾತ್ರೆ ಎಂದೇ ಕರೆಯಲಾಗುತ್ತದೆ. ಎಚ್.ಎಸ್.ಬೇನಾಳ ಅವರು ಸ್ವತಃ ಇದೇ ಊರಿನವರಾಗಿದ್ದು, ಇಲ್ಲಿನ ಜಾತ್ರೆಯನ್ನು ಹೀಗೆ ವಿವರಿಸುತ್ತಾರೆ. ಇದು 'ರಾಮನಾಥ' ದೇವರ ಜಾತ್ರೆ ಮುಂದೆ ಅದು 'ದೇವರದಾಸಿಮಯ್ಯ'ನ ಜಾತ್ರೆಯೆಂದೇ ಪ್ರಸಿದ್ಧವಾಗಿ ಈಗಲೂ ಹಾಗೇ ಕರೆಯಲ್ಪಡುತ್ತಿದೆ ಎನ್ನುತ್ತಿದೆ ಎಂದು ಪ್ರಸ್ತುತ ಪಡಿಸುತ್ತಾರೆ. ಆದರೆ ಅಲ್ಲಿನ ಊರಿನ ಹಿರಿಯರು ಮಾತ್ರ ಬೇರೆಯೇ ಹೇಳುತಾರೆ. ಮೊದಲು ಯಾವುದೇ ಜಾತ್ರೆ ಆಚರಣೆಗಳಿರಲಿಲ್ಲ.

ವಚನಕಾರ 'ದೇವರದಾಸಿಮಯ್ಯ' (ಊರಿನವರ ಉದ್ಗಾರದಂತೆ) ನಮ್ಮ ಊರಿನವನು ಎಂದು ತಿಳಿಯಿತು. ಈ ಬಗ್ಗೆ ಸಂಶೋಧನೆ ಮಾಡಲು ವಿದ್ವಾಂಸರು ಊರಿಗೆ ಬಂದು ಹೋಗಲು ಪ್ರಾರಂಭಿಸಿದರು. ಆಗ ಈ ಸ್ಥಳದ ಮಹತ್ವ ತಿಳಿಯಿತು. ನಂತರ ೧೯೬೧ ರಲ್ಲಿ ಷಡಕ್ಷರನ ದೇವರದಾಸಿಮಯ್ಯ ಪುರಾಣವನ್ನು ಊರಿನಲ್ಲಿ ಹಿರಿಯರು ಸೇರಿ ನಿರ್ಧರಿಸಿ ಓದಲು ಪ್ರಾರಂಭಿಸಿದರು. ವರ್ಷಕ್ಕೊಮ್ಮೆ ಒಂದು ವಾರದಿಂದ ಹದಿನೈದು ದಿನಗಳ ಕಾಲ ಪುರಾಣಪಠಣೆ ನಡೆಯುತ್ತಿತ್ತು. ನಂತರ ಜಾತ್ರೆ ನಡೆಸಬೇಕೆಂದು ನಿರ್ಧರಿಸಿ ಕ್ರಿಶ. ೧೯೭೧–೭೨ರ ನಂತರ ಜಾತ್ರೆಯನ್ನು ಆಚರಿಸುವ ಪದ್ಧತಿಯನ್ನು ಜಾರಿಗೆ ತರಲಾಯಿತು ಎನ್ನುತ್ತಾರೆ.

ಯುಗಾದಿಯ ನಂತರದ ದಶಮಿಗೆ ಈ ಜಾತ್ರೆ ನಡೆಯುತ್ತದೆ. ಯುಗಾದಿ ಅಮವಾಸೆಯಾಗಿ ಐದನೇ ದಿನ ಜೇಡರದಾಸಿಮಯ್ಯನ ಜಯಂತೋತ್ಸವ, ನಂತರ ದಶಮಿಗೆ ಜಾತ್ರೆ, ಇಲ್ಲಿನವರು ಹೇಳುವಂತೆ ಮೊದಲೆಲ್ಲಾ ಕೇವಲ ಪುರಾಣ ಪಠಣ ಮಾಡಿ ತೇರನ್ನು ಎಳೆಯಲಾಗುತ್ತಿತ್ತು. ಮುದನೂರು ಬಿ(ಹಿರೇಮುದನೂರು)ಯಿಂದ ಮುದನೂರು ಕೆ(ಚಿಕ್ಕಮುದನೂರು)ಯ ಪಾದಗಟ್ಟಿಯವರೆಗೂ ತೇರನ್ನು ಎಳೆದು ತಂದು ಮತ್ತೆ ದೇವಸ್ಥಾನದವರೆಗೆ ವಾಪಾಸು ತೆಗೆದುಕೊಂಡು ಹೋಗಲಾಗುತ್ತದೆ.

ಈ ಜಾತ್ರೆಯು ಹದಿನೈದು ದಿನಗಳವರೆಗೆ ನಡೆಯುತ್ತದೆ. ಈ ಹದಿನೈದು ದಿನಗಳ ಕಾಲ ಪುರಾಣ ಪಠಣವಾಗುತ್ತದೆ. ನಂತರ ಕೊನೆಯದಿನ ತೇರನ್ನು ಎಳೆಯಲಾಗುವುದು. ಇತ್ತೀಚಿಗೆ ೨೦೦೨ ರಲ್ಲಿ ದೇವಾಲಯಕ್ಕೆ ಸಂಬಂಧಿಸಿದಂತೆ ಒಂದು ಟ್ರಸ್ಟನ್ನು ನಿರ್ಮಿಸಿಕೊಂಡು 'ದೇವರ ದಾಸಿಮಯ್ಯ ವಿಚಾರ ವೇದಿಕೆ' ಎಂಬ ವೇದಿಕೆಯ ಮೂಲಕ ದಾಸಿಮಯ್ಯನ ಜಾತ್ರೆಯ ಸಮಯದಲ್ಲಿ ಆತನ ವಚನಗಳನ್ನು ಮತ್ತು ಜೀವನವನ್ನು ಕುರಿತ ಉಪನ್ಯಾಸ ಕಾರ್ಯಕ್ರಮ ನಡೆಸಲಾಗುತ್ತಿದೆ. ಈ ಜಾತ್ರಾಮಹೋತ್ಸವದಲ್ಲಿ ಊರಿನ ಎಲ್ಲರೂ, ಯಾವುದೇ ಜಾತಿ, ಧರ್ಮಗಳ ಅಂತರವಿಲ್ಲದೆ ಈ ತೇರಿನಲ್ಲಿ ಭಾಗವಹಿಸುತ್ತಾರೆ. ತೇರಿನ ಕಲಶ ಮೊದಲು ದೇವಾಲಯದ ಮಂಟಪಕ್ಕೆ ಸೇರಿದ್ದು, ಸುರಕ್ಷತೆಯ ದೃಷ್ಟಿಯಿಂದ ಊರಿನ ಒಬ್ಬ ಗೌಡರ ಮನೆಯಲ್ಲಿ ಇಡಲಾಗಿತ್ತು. ಇತ್ತೀಚೆಗೆ ಮತ್ತೆ ಅದನ್ನು ದೇವಾಲಯದ ಅಧೀನಕ್ಕೆ ಒಳಪಡಿಸಿ ಕೊಳ್ಳಲಾಗಿದೆ. ಜೇಡರದಾಸಿಮಯ್ಯನ ಕುರಿತು ವೈಚಾರಿಕ ಆಚರಣೆಗಳು ಮುದನೂರಿನಲ್ಲಿ ನಡೆಯುತ್ತಿರುವುದು ಮಹತ್ವದ ಸಂಗತಿಯಾಗಿದೆ. ಈ ಜಾತ್ರಾಮಹೋತ್ಸವದ ಅಂಗವಾಗಿ 'ದೇವರದಾಸಿಮಯ್ಯ ಪ್ರಶಸ್ತಿ' ಹಾಗೂ 'ತವನಿಧಿ' ಪ್ರಶಸ್ತಿಗಳನ್ನು ನೀಡಲಾಗುತ್ತಿದೆ.

ಮುದನೂರಿನ ಜಾತ್ರೆಗೆ ಮೊದಲೆಲ್ಲಾ ಮುದನೂರು ಸಮೀಪದ ಕಮಲಾಪುರದಿಂದ ದೇವಾಂಗ ಸಮಾಜದ ಜನರೂ ಬರುತ್ತಿದ್ದರು. ಇತ್ತೀಚೆಗೆ ಕಮಲಾಪುರದಲ್ಲಿಯೇ ಒಂದು

ದಾಸಿಮಯ್ಯನ ದೇವಸ್ಥಾನವನ್ನು ನಿರ್ಮಿಸಿ, ಅಲ್ಲಿಯೂ ಜಾತ್ರಾಮೋತ್ಸವವನ್ನು ಆಚರಿಸಲಾಗುತ್ತಿದೆ. ಅಷ್ಟೇ ಅಲ್ಲದೆ ಜಮಖಂಡಿ ಮೊದಲಾದೆಡೆಗಳಲ್ಲಿ ದಾಸಿಮಯ್ಯನ ದೇವಸ್ಥಾನಗಳನ್ನು, ಶಿಲಾಮೂರ್ತಿಗಳನ್ನು, ನಿರ್ಮಿಸಲಾಗುತ್ತಿದೆ. ಹಾಗೆ "ಮುದನೂರಿಗೆ ಸಮೀಪದ ಕೊಟ್ಬೂರು, ಆಳಂದ, ಗುಳೇದಗುಡ್ಡ ಊರುಗಳಲ್ಲಿ ಜೇಡರಿದ್ದು ಪ್ರತೀವರ್ಷ ದಾಸಿಮಯ್ಯನ ಜಯಂತಿ ಆಚರಿಸುತ್ತಾರೆ."[೨೩]

## ೬.೫. ದೇವಾಲಯಗಳ ವಿರೂಪತೆ ಹಾಗೂ ಜನ ಜೀವನ

ಜನಾಂಗಿಕವಾಗಿ ನೋಡುವುದಾದರೆ ಮುದನೂರಿನಲ್ಲಿ ಲಿಂಗಾಯತ ರೆಡ್ಡಿಗಳ ಜನಸಂಖ್ಯೆ ಹೆಚ್ಚಾಗಿದ್ದು, ತದನಂತರ ಕುರುಬರು ಕಬ್ಬಲಿಗರು, ಮುಸಲ್ಮಾನರು, ಹರಿಜನರು ಕ್ರಮವಾಗಿ ಕಂಡು ಬರುತ್ತಾರೆ. ಇನ್ನುಳಿದ ಜನಾಂಗಗಳು ಕಡಿಮೆ ಸಂಖ್ಯೆಯಲ್ಲಿದ್ದಾರೆ. ವಿಶೇಷವೆನಿಸುವುದೇನೆಂದರೆ, ಜೇಡರ ಅಥವಾ ನೇಯ್ಗೆ ಜನಾಂಗದ ಒಂದು ಕುಟುಂಬ ಮಾತ್ರ ಮುದನೂರಿನಲ್ಲಿ ಕಂಡು ಬರುತ್ತದೆ. ಈ ಕಟುಂಬ ದಾಸಿಮಯ್ಯನ ವಂಶಸ್ಥರೆಂದು ಹೇಳಿಕೊಳ್ಳುತ್ತಾರಾದರೂ ಯಾವುದೇ ದಾಖಲೆಗಳು ಈ ಹೇಳಿಕೆಗೆ ಪೂರಕವಾಗಿ ಕಂಡು ಬರುವುದಿಲ್ಲ. ವೃತ್ತಿಯಿಂದ ದಾಸಿಮಯ್ಯ ನಮ್ಮವ ಎನ್ನುವ ಪರಿಪಾಟ ಬರುತ್ತದೆ ಎಂದು ಅಲ್ಲಿನ ಸ್ಥಳೀಯರು ವಿವರಿಸುತ್ತಾರೆ.

ಮುದನೂರಿನ ಅನೇಕ ದೇವಾಲಯಗಳು, ರಾಮನಾಥ ದೇವಾಲಯವನ್ನೊಳಗೊಂಡು ಜನ ಜೀವನದಲ್ಲಿ ಹಾಸುಹೊಕ್ಕಾಗಿ ಸೇರಿಹೋಗಿವೆ. ದೇವಾಲಯದ ಗೋಡೆಗಳಿಗೆ ಹೊಂದಿ ಕೊಂಡಂತೆ ಮನೆಗಳನ್ನು ಇಲ್ಲಿ ಕಟ್ಟಿಕೊಳ್ಳಲಾಗಿದೆ. ಮನೆಗಳ ಒಳಗೆ ದೇವಾಲಯಗಳ ಅವಶೇಷಗಳು ಕಂಡು ಬರುತ್ತವೆ. ಇದರಿಂದ ದೇವಾಲಯದ ಗೋಡೆಗಳು, ಕೆತ್ತನೆಗಳು ನಾಶವಾಗುವ ಪರಿಸ್ಥಿತಿ ತಲೆದೋರಿದೆ. ಇದಕ್ಕೆ ಸಂಬಂಧಿಸಿದ ಇಲಾಖೆಯವರು ಹೀಗೆ ದೇವಾಲಯಗಳಿಗೆ ಹೊಂದಿ ಕೊಂಡಂತೆ ಇರುವ ಮನೆಯವರನ್ನು ಖಾಲಿಮಾಡಿಸಲು, ಊರಿನ ಒಂದು ಬದಿಗೆ ಸ್ಥಳ ನಿಯೋಜಿಸಿದ್ದಾರೆ. ಆದರೆ ಅದು ಕಾರ್ಯರೂಪಕ್ಕೆ ಬರುವುದು ತಡವಾಗುತ್ತಲಿದೆ.

ಈ ಎಲ್ಲಾ ಹಿನ್ನೆಲೆಗಳಿಂದ ಮುದನೂರು ಹಲವು ವಿಶೇಷತೆಗಳನ್ನು, ಸೌಲಭ್ಯಗಳ ಕೊರತೆಗಳ ನಡುವೆಯೂ ತನ್ನ ವೈಶಿಷ್ಟ್ಯವನ್ನು ಉಳಿಸಿಕೊಂಡು ಬಂದಿದ್ದು, ಜೇಡರದಾಸಿಮಯ್ಯನ 'ಪುಣ್ಯ ನೆಲ' ಎಂದೇ ಗುರುತಿಸಲ್ಪಡುತ್ತಿದೆ. ಆದರೆ ಹಿಂದಿನ ಅವಶೇಷಗಳು ನಶಿಸಿಹೋಗುತ್ತಿದ್ದು, ಜೀರ್ಣೋದ್ಧಾರ ಕ್ರಿಯೆ ನಡೆಯುತ್ತಿದೆಯಾದರು ಸಂಬಂಧ ಪಟ್ಟ ಅಧಿಕಾರಿಗಳು ಮತ್ತು ಇಲಾಖೆಗಳ ಕಾರ್ಯ ಇನ್ನೂ ತ್ವರಿತಗತಿಯಲ್ಲಿ ನಡೆಯಬೇಕಾಗಿದೆ.

## ೬.೬ ಮುದನೂರು ಸುತ್ತಮುತ್ತಲಿನ ರಾಮಲಿಂಗ ದೇವಾಲಯಗಳು

ಮುದನೂರು ಸೇರಿದಂತೆ ಮುದನೂರಿನ ಸುತ್ತಮುತ್ತಲಿನ ಅನೇಕ ಊರುಗಳಲ್ಲಿ ರಾಮೇಶ್ವರ ಅಥವಾ ರಾಮಲಿಂಗ ದೇವಾಲಯಗಳಿರುವುದು ಕಂಡು ಬರುತ್ತದೆ. ನಡಕೂರು, ಅಣಬಿ, ಮೂಡಬೂಳ, ತುಮಕೂರು, ಹಯ್ಯಾಳ(ಬಿ), ವಜ್ಜಲ ಇನ್ನೂ ಮೊದಲಾದ ಸ್ಥಳಗಳಲ್ಲಿ ರಾಮಲಿಂಗ ದೇವಾಲಯಗಳು ಕಂಡು ಬರುತ್ತವೆ.

**ವಜ್ಜಲ:** ಸುರಪುರದಿಂದ ಪಶ್ಚಿಮಕ್ಕೆ ೩೨ ಕಿ.ಮೀ ದೂರದಲ್ಲಿ ವಜ್ಜಲ ಎಂಬ ಹಳ್ಳಿ ಇದೆ. ಯಾದಗಿರಿ ಜಿಲ್ಲೆಯಲ್ಲಿ ಒಂದೇ ಒಂದು ಬಿಸಿ ನೀರಿನ ಚಿಲುಮೆಯನ್ನು ಹೊಂದಿದ ಪ್ರದೇಶ ಇದಾಗಿದೆ. ಇದೇ ಊರಿನಲ್ಲಿ ರಾಮಲಿಂಗ ದೇವರ ಗುಡಿ ಇರುವುದು ತಿಳಿದು ಬರುತ್ತದೆ. ಈ ಗುಡಿಯು ಪ್ರಾಚೀನವಾಗಿದ್ದು, ಅಲ್ಲಿನ ಗರ್ಭಗುಡಿಯು ಭೂಮಿಯ ಒಳಗೆ ಇರುವುದು ಕಂಡು ಬರುತ್ತದೆ. ಅದರ ಶಿಖರ ಭಾಗ ಮಾತ್ರ ಭೂಮಿಯಿಂದ ಹೊರ ಚಾಚಿದೆ. ದೇವಾಲಯದ ಪಕ್ಕದಲ್ಲಿಯೇ ಸರ್ವಋತು ಬಿಸಿ ನೀರಿನ ಬುಗ್ಗೆ ಕಂಡು ಬರುತ್ತದೆ. ಇದು ಮುದನೂರಿನ ರಾಮೇಶ್ವರ ದೇವಾಲಯ ಹಾಗೂ ಅದರ ಮುಂದಿನ ಸರ್ವಋತು ತೀರ್ಥಗಳನ್ನು ಜ್ಞಾಪಿಸುತ್ತದೆ.

**ನಡಕೂರು:** ಸುರಪುರದಿಂದ ಪಶ್ಚಿಮಕ್ಕೆ ೨೫ ಕಿ.ಮೀ ಅಂತರದಲ್ಲಿ ಪರಸನಹಳ್ಳಿ ಎಂಬ ಗ್ರಾಮವಿದ್ದು, ಅಲ್ಲಿಂದ ೩ ಕಿ.ಮೀ ದಕ್ಷಿಣಕ್ಕೆ ಹೋದರೆ ನಡಕೂರು ಎಂಬ ಗ್ರಾಮ ಸಿಗುತ್ತದೆ. ಇಲ್ಲಿ ಸುಮಾರು ೧೧-೧೨ ನೇ ಶತಮಾನದ್ದು ಎನ್ನಲಾಗುವ ರಾಮಲಿಂಗೇಶ್ವರ ದೇವಾಲಯವಿದ್ದು, ಇದು ಸಂಪೂರ್ಣ ನಾಶವಾದ ಸ್ಥಿತಿಯಲ್ಲಿದೆ. ಇದರ ಅಧಿಷ್ಠಾನ ಭಾಗ ಮಾತ್ರ ಉಳಿದುಕೊಂಡಿದ್ದು, ಅಲ್ಲಿ ಶಿವಲಿಂಗವಿದೆ. ಈ ದೇವಾಲಯದ ಆವರಣದಲ್ಲಿ ಗಣೇಶ ವಿಗ್ರಹ, ಲಕ್ಷ್ಮೀನಾರಾಯಣ ವಿಗ್ರಹ, ರಾಮಲಿಂಗ ಎನ್ನುವ ಶ್ರೀರಾಮನ ವಿಗ್ರಹ. ಸೀತೆ, ಲಕ್ಷ್ಮಣರ ವಿಗ್ರಹಗಳೂ ಇವೆ. ಕೆಂಬಾವಿಯ ಕ್ರಿಶ ೧೦೫೪ರ ಶಾಸನದಲ್ಲಿ ಈ ಗ್ರಾಮದ ಉಲ್ಲೇಖ ಸಿಗುತ್ತದೆ. ನಂದಿ ಮತ್ತು ಶಿವಲಿಂಗ ವಿಗ್ರಹಗಳನ್ನು ಕಪ್ಪು ಕಲ್ಲಿನಲ್ಲಿ ಕೆತ್ತಲಾಗಿರುವುದನ್ನು ಗಮನಿಸಿದರೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಿಸಿದ್ದಿರಬೇಕು ಎನ್ನಲಾಗುತ್ತದೆ. ನಡಕೂರು, ಶೈವ ಹಾಗೂ ವೈಷ್ಣವ ಧರ್ಮಗಳ ಕೇಂದ್ರವಾಗಿತ್ತೆಂದು ಅಲ್ಲಿನ ಇತಿಹಾಸದಿಂದ ತಿಳಿದು ಬರುತ್ತದೆ. ಮತ ಸಂಘರ್ಷದಿಂದಲೋ ಅಥವಾ ಬೇರೆ ಯಾವ ಕಾರಣಕ್ಕಾಗಿಯೋ ಇಲ್ಲಿನ ರಾಮಲಿಂಗ ದೇವಾಲಯ ನಾಶ ಹೊಂದಿದ್ದು, ಈ ಬಗ್ಗೆ ಯಾವುದೇ ನಿಖರ ಆಧಾರಗಳು ದೊರೆತಿಲ್ಲ ಎಂದು ದೇಸಾಯಿ.ಎನ್.ಎಚ್ ಅವರು ಸ್ಪಷ್ಟಪಡಿಸುತ್ತಾರೆ.

**ಅಣಬಿ :** ಆಳಂಬಿ ಅಗ್ರಹಾರ ಎಂದೂ ಇದನ್ನು ಕರೆಯಲಾಗುತ್ತಿದ್ದುದಾಗಿ ತಿಳಿದು ಬರುತ್ತದೆ. ಇದು ಶಹಪುರ ತಾಲ್ಲೂಕಿಗೆ ಸೇರಿದ ಸ್ಥಳವಾಗಿದೆ. ಇಲ್ಲಿ ಹಲವು ದೇವಾಲಯಗಳಿದ್ದು,

ಅದರಲ್ಲಿ ರಾಮಲಿಂಗ ದೇವಾಲಯವೂ ಒಂದು. ಈ ದೇವಾಲಯವು ಗ್ರಾಮದ ಕೊನೆಗೆ ಉತ್ತರದಲ್ಲಿದ್ದು, ಗರ್ಭಗೃಹ, ಅಂತರಾಳ, ನವರಂಗಗಳಿಂದ ಕೂಡಿದ ಏಕಕೂಟ ದೇವಾಲಯ ವಾಗಿದೆ. ಇಲ್ಲಿನ ಶಿವಲಿಂಗಕ್ಕೆ ನಿತ್ಯ ಪೂಜೆ ನಡೆಯುತ್ತದೆ. ಮುಖಮಂಟಪದಲ್ಲಿ ಗಣೇಶ ಹಾಗೂ ನಂದಿಯ ವಿಗ್ರಹಗಳಿವೆ. ಇದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಿತವಾಗಿರಬಹುದು ಎನ್ನಲಾಗುತ್ತದೆ. ಈ ಪ್ರದೇಶವು ಅಗ್ರಹಾರವಾಗಿದ್ದು, ರಾಷ್ಟ್ರಕೂಟರ ಕಾಲದಲ್ಲಿ ಸಾವಿರಾರು ವಿದ್ಯಾರ್ಥಿಗಳು ಜ್ಞಾನಾರ್ಜನೆಯನ್ನು ಮಾಡುತ್ತಿದ್ದರು ಎನ್ನಲು ದಾಖಲೆಗಳು ಸಿಗುತ್ತವೆ. ಇದು 'ಕುಂಬಾರ ಶಾಲೆ'[೨೪] ಎಂದೇ ಪ್ರಸಿದ್ಧವಾದ ಪ್ರದೇಶವಾಗಿದೆ.

**ಮೂಡಬಾಳ :** ಶಹಪುರದಿಂದ ಕಲಬುರ್ಗಿ ಮಾರ್ಗದಲ್ಲಿ ೨೩ ಕಿ.ಮೀ ರಾಜ್ಯ ಹೆದ್ದಾರಿಯಿಂದ ೩ ಕಿ.ಮೀ ಒಳಗಡೆಗೆ ನಡೆದರೆ, ಈ ಗ್ರಾಮ ದೊರೆಯುತ್ತದೆ. ಇಲ್ಲಿ ನೆಲಮಟ್ಟದಿಂದ ೧೩–೧೫ ಅಡಿಗಳಷ್ಟು ಆಳದಲ್ಲಿ ರಾಮಲಿಂಗವಿರುವ ರಾಮೇಶ್ವರ ದೇವಾಲಯವಿದೆ. ದೇವಾಲಯದ ಗರ್ಭಗೃಹದಲ್ಲಿ ಶಿವಲಿಂಗ, ದ್ವಾರ ಪಟ್ಟಿಗಳಲ್ಲಿ ದ್ವಾರಪಾಲಕ ಶಿಲ್ಪಗಳು, ಲಲಾಟದಲ್ಲಿ ಗಜಲಕ್ಷ್ಮೀ ಶಿಲ್ಪ ಇವೆಲ್ಲವೂ ಮುದನೂರಿನ ರಾಮೇಶ್ವರ ದೇವಾಲಯವನ್ನು ನೆನಪಿಗೆ ತರುತ್ತವೆ. ದೇವಾಲಯದ ಮೇಲಿನ ಛಾವಣಿಯು ನಾಶವಾದಂತೆ ಕಂಡುಬರುತ್ತದೆ.

**ತುಮಕೂರು :** ಶಹಾಪುರದಿಂದ ೩೫ ಕಿ.ಮೀ ದೂರದಲ್ಲಿದೆ. ಇಲ್ಲಿನ ರಾಮಲಿಂಗ ದೇವಾಲಯ ತ್ರಿಕೂಟ ದೇವಾಲಯವಾಗಿದ್ದು, ೩ ಗರ್ಭಗೃಹಗಳನ್ನು ಮೊದಲು ಹೊಂದಿದ್ದು, ನಂತರ ಎರಡು ಗರ್ಭಗೃಹಗಳು ನಾಶವಾಗಿ ಒಂದೇ ಗರ್ಭಗೃಹ ಉಳಿದಿದೆ. ಅಲ್ಲಿ ಶಿವಲಿಂಗವಿದ್ದು, ಹಿಂಬದಿಯಲ್ಲಿ ವಿಷ್ಣುವಿನ ಭಗ್ನ ಶಿಲ್ಪವಿದೆ.[೨೫] ದ್ವಾರದಲ್ಲಿ ಗಜಲಕ್ಷ್ಮೀ ಲಲಾಟಬಿಂಬ, ಬಾಗಿಲವಾಡವು ತ್ರಿಶಾಖೆಗಳಿಂದ ಕೂಡಿದೆ. ಪ್ರಸ್ತುತವಾಗಿ ಇದು ಅರ್ಧ ಮಂಟಪ, ಸಭಾ ಮಂಟಪಗಳನ್ನು ಹೊಂದಿದ ದೇವಾಲಯವಾಗಿದೆ. ಇಲ್ಲಿನ ಶಾಸನದ ಆಧಾರದಿಂದ ಇದು ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯವೆಂದು ತಿಳಿದುಬರುತ್ತದೆ.

**ಹಯ್ಯಾಳ (ಬಿ) :** ಇಂದಿನ ಶಹಾಪುರ ತಾಲ್ಲೂಕಿನಲ್ಲಿ ಈ ಗ್ರಾಮ ಕಂಡು ಬರುತ್ತದೆ. "ಈ ಗ್ರಾಮದಲ್ಲಿರುವ ರಾಮಲಿಂಗೇಶ್ವರ ದೇಗುಲವು ನೆಲಮಟ್ಟದಿಂದ ಕೆಳಭಾಗದಲ್ಲಿದೆ ಗರ್ಭಗೃಹ, ಅರ್ಧಮಂಟಪ, ಸಭಾ ಮಂಟಪವನ್ನು ಹೊಂದಿದೆ. ರಾಷ್ಟ್ರಕೂಟರ ಶೈಲಿಯಲ್ಲಿರುವ ಈ ದೇಗುಲವನ್ನು ಸ್ಥಳೀಯರು ಕಲ್ಗುಡಿ ಎಂದು ಕರೆಯುತ್ತಾರೆ. ಗರ್ಭಗೃಹದಲ್ಲಿ ಲಿಂಗವಿದ್ದು, ಬಾಗಿಲವಾಡವು ನಾಲ್ಕು ಶಾಖೆಗಳಿಂದ ಕೂಡಿದ್ದು, ಲಲಾಟದಲ್ಲಿ ಗಜಲಕ್ಷ್ಮಿಯ ಶಿಲ್ಪ, ಕೆಳಗೆ ಪೂರ್ಣ ಕುಂಭಗಳಿಂದ ಆವೃತ್ತವಾಗಿದೆ. ಅರ್ಧಮಂಟದಲ್ಲಿ ಭೈರವದಂಪತಿಗಳ ಭಗ್ನಶಿಲ್ಪಗಳಿವೆ. ಮುಂದೆ ಸಭಾ ಮಂಟಪದಲ್ಲಿ ವೀರಗಲ್ಲು (ಮೂರು ಹಂತ) ಋಷಿಯ ಶಿಲ್ಪ, ನಾಗರಶಿಲ್ಪಗಳು

ಕಂಡು ಬರುತ್ತವೆ. ಸಭಾಮಂಟಪಕ್ಕೆ ಆಧಾರವಾಗಿರುವ ಕಂಬಗಳು ಸುಂದವಾದ ಕೆತ್ತನೆಯಿಂದ ಕೂಡಿವೆ. ಅಷ್ಟೇ ಅಲ್ಲದೆ ಇಲ್ಲಿ ಕಕ್ಷಾಸನವಿದೆ.[೨೬] ಈ ದೇವಾಲಯವು ಶಿಥಿಲಾವಸ್ಥೆಯಲ್ಲಿದೆ. ಸಿದ್ಧಣ ಎಸ್. ಕುಂಬಾರವರು ಇಲ್ಲಿ ಕಂಡು ಬರುವ ಋಷಿಯ ಶಿಲ್ಪವನ್ನು ಧ್ಯಾನಾಸಕ್ತ ಶಿವನಿರಬಹುದು, ಶಿರದ ಭಾಗವು ಭಗ್ನ ಗೊಂಡಿದ್ದು ಗುರುತಿಸಲು ಸಾಧ್ಯವಾಗಿರುವುದಿಲ್ಲ ಎನ್ನುತ್ತಾರೆ.[೨೭] ಇವರು ಹೇಳುವಂಥ ಧ್ಯಾನಾಸಕ್ತ ವ್ಯಕ್ತಿಯ ಶಿಲ್ಪ; ಇದೇ ಮಾದರಿಯ ಶಿಲ್ಪ ಮುದನೂರಿನ ಲಕ್ಷ್ಮಣ ತೀರ್ಥದ ಹತ್ತಿರವಿದ್ದು, ಅದನ್ನು ದಾಸಿಮಯ್ಯನ ವಿಗ್ರಹ ಎನ್ನಲಾಗುತ್ತದೆ. ಈ ಬಗ್ಗೆ ಹೆಚ್ಚಿನ ಸಂಶೋಧನೆಗಳಿಂದ ಸತ್ಯಾಸತ್ಯತೆಗಳನ್ನು ತಿಳಿಯುವ ಅವಶ್ಯಕತೆ ಇದೆ.

ಒಟ್ಟಾರೆ ಸುರಪುರ ಹಾಗೂ ಶಹಾಪುರಗಳನ್ನು ಸೇರಿದಂತೆ ಸುತ್ತಲಿನ ಪ್ರದೇಶಗಳಲ್ಲಿ ಅನೇಕ ಶಿವಲಿಂಗ ದೇವಾಲಯಗಳಿದ್ದು, ಹೋಲಿಕೆಯಲ್ಲಿ ಮುದನೂರಿನ ರಾಮೇಶ್ವರ ದೇವಾಲಯವನ್ನು ಹೋಲುತ್ತವೆ. ಬಹುಶಃ ಇದಕ್ಕೆ ಒಂದೇ ಕಾಲದಲ್ಲಿ ಅಥವಾ ಒಂದೇ ರಾಜಮನೆತನದಿಂದ ನಿರ್ಮಾಣವಾದುದು ಒಂದು ಕಾರಣವಾಗಿರಬಹುದು. ಅದೇನೇ ಇದ್ದರೂ ರಾಮಲಿಂಗ ಅಥವಾ ರಾಮೇಶ್ವರನೆಂದು ಕರೆಯಲ್ಪಡುವ ಶೈವ ದೇವಾಲಯವು ಸುಮಾರು ೧೧-೧೨ನೇ ಶತಮಾನದ ಹೊತ್ತಿಗೆ ಬಹಳ ಪ್ರಸಿದ್ಧಿ ಹೊಂದಿದ್ದು, ಸುತ್ತಮುತ್ತಲಿನ ಪ್ರದೇಶಗಳಲ್ಲಿ ಅದರ ಕೀರ್ತಿ ಹಬ್ಬಿ, ಹಲವೆಡೆ ಈ ದೇವಾಲಯವು ನಿರ್ಮಾಣ ಹೊಂದಿರಬೇಕು ಎಂದು ಮಾತ್ರ ಹೇಳಬಹುದು. ಇದಕ್ಕೆ ದೇವೂರಿನ ರಾಮೇಶ್ವರ ದೇವಾಲಯ, ಹಂಪಿ ಪರಿಸರದ ಶಂಕರಲಿಂಗ ಮತ್ತು ರಾಮಲಿಂಗ ದೇವಾಲಯಗಳು, ಕಣವಿಸಿದ್ಧಗಿರಿ ಶಾಸನದ ಉಲ್ಲೇಖ ಇವೆಲ್ಲವೂ ಸಾಕ್ಷಿಯಾಗಿವೆ.

ಜೇಡರದಾಸಿಮಯ್ಯ ೧೨ನೇ ಶತಮಾನದಲ್ಲಿ ಕಂಡುಬರುವ ವಚನಕಾರ. ಆತನ ವಾಸ ಸ್ಥಳ ಮುದನೂರು. ಆತನೊಂದಿಗೆ ಸೇರಿಹೋದ ದೈವ ರಾಮೇಶ್ವರ ಅಥವಾ ರಾಮಲಿಂಗೇಶ್ವರ. ಈ ದೈವದ ಹೆಸರನ್ನೇ ತನ್ನ ಜೀವದ ಉಸಿರಾಗಿಸಿಕೊಂಡು, ಆ ದೈವವನ್ನೇ ಜೀವಮಾನವಿಡೀ ಆರಾಧಿಸಿದ ಶರಣನಾಗಿ ಈತ ಕಂಡು ಬರುತ್ತಾನೆ. ರಾಮೇಶ್ವರ ಹಾಗೂ ವಚನಕಾರ ಜೇಡರದಾಸಿಮಯ್ಯನ ಸಂಬಂಧವು ಅಪೂರ್ವವಾದುದು. ಒಂದು ದೈವವಾದರೆ, ಮತ್ತೊಬ್ಬ ಆ ದೈವವನ್ನಾರಾಧಿಸಿ ದೇವರೆನಿಸಿಕೊಂಡ ವ್ಯಕ್ತಿ. ಈ ಇಬ್ಬರ ಪ್ರಭಾವವು ಅಂದಿನ ಕಾಲದ ಜನಜೀವನದ ಮೇಲಾಗಿದ್ದುದಂತು ನಿಜ. ರಾಮೇಶ್ವರನಿಂದ ದಾಸಿಮಯ್ಯನ ಕೀರ್ತಿ ಇಮ್ಮಡಿಯಾಯಿತೋ? ಅಥವಾ ದಾಸಿಮಯ್ಯನ ಆರಾಧನೆಯಿಂದ ರಾಮಲಿಂಗ ಕೀರ್ತಿ ಪಡೆಯಿತೋ ಹೇಳುವುದು ಕಷ್ಟ. ಅದೇನೆ ಇದ್ದರೂ ಜೇಡರದಾಸಿಮಯ್ಯನೆಂದೊಡನೆ ಎಲ್ಲರ ಗಮನ ಸೆಳೆಯುವುದು 'ರಾಮನಾಥ' ಮತ್ತು 'ಮುದನೂರು'ಗಳು ಎನ್ನುವುದು ಮಾತ್ರ ಸತ್ಯ.

**ಅಡಿಟಿಪ್ಪಣಿ**

೧. ಅಮರೇಶ್ ಯತಗಲ್, ಸಗರನಾಡ ಸೌರಭ, ಪು.೩೧

೨. ಅದೇ, ಪು.೯

೩. ಪದ್ದಯ್ಯ ಕೆ., ಸಗರನಾಡ ಸೌರಭ, ಪು.೧೯೧

೪. ಅದೇ, ಪು.೧೯೫

೫. ಅದೇ, ಪು.೧೯೧

೬. ಬೇನಾಳ ಎಚ್.ಎಸ್., ಪ್ರಥಮ ವಚನಕಾರ ಜೇಡರದಾಸಿಮಯ್ಯ ಛಾಯಾಚಿತ್ರ ಕೆಳಗಿನ ಟಿಪ್ಪಣಿ

೭. ಚಂದ್ರಶೇಕರ್ ಎಚ್., ಜೇಡರದಾಸಿಮಯ್ಯನ ತವನಿಧಿ ಜಲಗೋಳದ ಸುಂದರ ರೂಪಕ, ಪ್ರಜಾವಾಣಿ, ದೀಪಾವಳಿ ವಿಶೇಷಾಂಕ ೧೯೯೨ ಪು.೨೨೬

೮. ಅದೇ, ಪು.೨೨೮

೯. ಅನ್ನಪೂರ್ಣ ಜಾಲವಾದಿ, ಶಂಕರದಾಸಿಮಯ್ಯ ಪುರಾಣ ಒಂದು ಅಧ್ಯಯನ ಪು.೨೬೦

೧೦. ಹರಿಹರನ ಶಂಕರದಾಸಿಮಯ್ಯ ರಗಳೆಯಲ್ಲಿನ ಉಲ್ಲೇಖ

೧೧. ಬೇನಾಳ ಎಚ್.ಎಸ್., ಪ್ರಥಮ ವಚನಕಾರ ಜೇಡರದಾಸಿಮಯ್ಯ ಪು.೫

೧೨. ಅದೇ, ಪು.೬

೧೩. ಅದೇ, ಪು.೫

೧೪. ಅಕ್ಕಿ, ಸುರಗಿರಿ. ಪು.೧೯೮

೧೫. ಅದೇ, ಪು. ೧೯೮

೧೬. ಅಯ್ಯಪ್ಪ ಕವಿಯ ದೇವಾಂಗ ಪುರಾಣದಲ್ಲಿ ಚೌಡೇಶ್ವರಿ ಮತ್ತು ದೇವಾಂಗನ ಕುರುತ ಕಥೆಗಳಿವೆ

೧೭ ಬೇನಾಳ ಎಚ್.ಎಸ್., ಪ್ರಥಮ ವಚನಕಾರ ಜೇಡರದಾಸಿಮಯ್ಯ ಪು.೯

೧೮ ರಮೇಶ್ ಮಾಳ(ಸಂ), ತವನಿಧಿ, ಪು.೫೯

೨೯ ಅಕ್ಕಿ, ಸುರಗಿರಿ ಪು.೧೯೯

೨೦. ಅದೇ, ಪು.೧೯೯

೨೧. ರಮೇಶ್ ಮಾಳ(ಸಂ), ತವನಿಧಿ, ಪು.೬೩

೨೨. ಅದೇ, ಪು.೭೮

೨೩. ಚಿದಾನಂದಮೂರ್ತಿ ಎಂ., ದೇವರದಾಸಿಮಯ್ಯ ಶಂಕರದಾಸಿಮಯ್ಯ ಜೇಡರದಾಸಿಮಯ್ಯ, ಪು.೪೮

೨೪. ರಾಜಗೋಪಾಲ ಎಂ. ವಿಭೂತಿ, ಕೃಷ್ಣಾ ವಿ. ಸುಭೇದಾರ, ಸಗರನಾಡ ಸೌರಭ, ಪು. ೨೪೦

೨೫. ಅದೇ, ಪು.೨೫೩

೨೬. ಅದೇ, ಪು.೨೫೭

೨೭. ಅದೇ, ಪು.೨೫೭

# ಸಮಾರೋಪ

‘ಜೇಡರ ದಾಸಿಮಯ್ಯ: ಒಂದು ಅಧ್ಯಯನ’ ಈ ಮಹಾಪ್ರಬಂಧದಲ್ಲಿ ಜೇಡರದಾಸಿಮಯ್ಯನ ವ್ಯಕ್ತಿಗತವಾದ ಅಧ್ಯಯನದೊಂದಿಗೆ ಆತನ ಬಗೆಗಿನ ಆಕರಗಳನ್ನು ಅಧ್ಯಯನ ಮಾಡಲಾಗಿದೆ. ಜೇಡರದಾಸಿಮಯ್ಯ-ದೇವರದಾಸಿಮಯ್ಯ ಎನ್ನುವ ಇಬ್ಬರು ಶರಣರ ಕುರಿತಾಗಿ ಆಕರಗಳನ್ನು ಮರು ಮೌಲೀಕರಣಕ್ಕೊಳಪಡಿಸುವ ಪ್ರಯತ್ನ ಮಾಡಲಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹಲವು ಶರಣರ ಬಗೆಗಿನ ಚರ್ಚೆಗಳು ಸ್ಪಷ್ಟಗೊಳ್ಳದೇ, ಆಕರಗಳ ಕೊರತೆಯ ಸಾಧ್ಯತೆಯಿಂದಲೋ ಅಥವಾ ಮಧ್ಯದಲ್ಲಿ ಸೃಷ್ಟಿಯಾದ ಹಲವು ಗೊಂದಲಗಳಿಂದಲೋ ಬಿಡಿಸಿಕೊಳ್ಳಲಾರದ ಕಗ್ಗಂಟಾಗಿಯೇ ಉಳಿದಿವೆ. ಇಂತಹ ಅನೇಕ ಶರಣರಲ್ಲಿ ಜೇಡರದಾಸಿಮಯ್ಯನೂ ಒಬ್ಬನಾಗಿದ್ದಾನೆ. ಈತನ ಬಗೆಗಿನ ಹಲವು ಚರ್ಚೆಗಳು ಹಾಗೂ ಗೊಂದಲಗಳೊಂದಿಗೆ ದಾಸಿಮಯ್ಯನ ಕಥಾ ವಸ್ತುವುಳ್ಳ ಕಾವ್ಯಗಳು, ಸಾಹಿತ್ಯ ಕೃತಿಗಳನ್ನು, ಅವುಗಳ ವಿಶೇಷತೆಯನ್ನು, ಅವು ನಿರ್ವಹಿಸುವ ಪಾತ್ರ ಮೊದಲಾದವನ್ನು ಈ ಅಧ್ಯಯನದಡಿ ತರುವ ಪ್ರಯತ್ನ ಮಾಡಲಾಗಿದೆ. ಕಾಲದಿಂದ ಕಾಲಕ್ಕೆ ಚರಿತ್ರೆಯಲ್ಲಿ ಕಂಡುಬಂದ ಧರ್ಮಗಳು ಮತ್ತು ಅವುಗಳ ಪ್ರಸಾರಕರು, ಆ ಕಾಲದಲ್ಲಿ ಅವರು ಬೀರಿದ ಪ್ರಭಾವ ಮೊದಲಾದವನ್ನು ಪ್ರಧಾನ ನೆಲೆಯಲ್ಲಿ ಚರ್ಚಿಸುವ ಹಲವು ಅಧ್ಯಯನಗಳು ಕಂಡು ಬರುತ್ತವೆ. ಇಂತಹ ಅಧ್ಯಯನಗಳ ಆಶಯವನ್ನು ಹೊತ್ತು, ಇವುಗಳ ಮಾದರಿಯ ಒಂದು ಪ್ರಯತ್ನವಾಗಿ ‘ಜೇಡರ ದಾಸಿಮಯ್ಯ: ಒಂದು ಅಧ್ಯಯನ’ ಮಹಾ ಪ್ರಬಂಧವನ್ನು ರಚಿಸಲಾಗಿದೆ. ಹೀಗೆ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಕೆಳಗಿನಂತೆ ಕ್ರೋಢೀಕರಿಸಲಾಗಿದೆ.

- ಬಸವಾದಿ ಶರಣರ ಆಂದೋಲನಕ್ಕೆ ಪೂರ್ವದಲ್ಲಿ ಒಂದು ಆಂದೋಲನವೇರ್ಪಟ್ಟಿದ್ದು, ಅದನ್ನು ವೀರಶೈವಧರ್ಮ ರೂಪು ತಳೆಯುವ ಸಂಕ್ರಮಣ ಕಾಲವೆನ್ನಬಹುದು, ಇಂತಹ ಸಂಕ್ರಮಣ ಕಾಲದ ಮೊದಲ ರೂವಾರಿಗಳಾಗಿ ಮಾದರ ಚೆನ್ನಯ್ಯ, ಡೋಹರ ಕಕ್ಕಯ್ಯ, ಕೆಂಬಾವಿ ಭೋಗಯ್ಯ, ಶಂಕರದಾಸಿಮಯ್ಯ ಮೊದಲಾದ ಶರಣರು ಕಂಡು ಬರುತ್ತಾರೆ. ಇವರ ಸಾಲಿಗೆ ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯರು ಸೇರುತ್ತಾರೆ. ಚರಿತ್ರೆಯಲ್ಲಿ

ಮಹತ್ವದ ಪಾತ್ರವನ್ನು ವಹಿಸಿದ ಇವರು, ಸಾಮಾಜಿಕರಲ್ಲಿ ನಗಣ್ಯವಾಗಿಯೇ ಉಳಿದಿದ್ದಾರೆ ಎಂದರೂ ತಪ್ಪಾಗಲಾರದು. ಅಂದರೆ ಅಲಕ್ಷಿತರ ಸಾಲಿನಲ್ಲಿ ಅವರನ್ನು ನಿಲ್ಲಿಸಲಾಗಿದೆ. ಇಂತಹ ಇಬ್ಬರು ಶರಣರ ಸಾಮಾಜಿಕ ಕೊಡುಗೆಗಳು ಇಂದಿಗೂ ಪ್ರಸ್ತುತವೆಂದು ಭಾವಿಸಿ, ಅವರ ಚರಿತ್ರೆಯನ್ನು ಕಟ್ಟುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

- ಜೇಡರದಾಸಿಮಯ್ಯನ ಬಗ್ಗೆ ನಡೆದ ಎಲ್ಲಾ ಅಧ್ಯಯನಗಳನ್ನು ಅನುಲಕ್ಷಿಸಲಾಗಿದ್ದು, ಹಲವು ಹಂತಗಳ ಚರ್ಚೆಗಳನ್ನು ದಾಖಲಿಸಲಾಗಿದೆ. ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ, ಈ ಇಬ್ಬರು ವ್ಯಕ್ತಿಗಳು ಒಬ್ಬನೇ ಎಂಬ ನಿಲುವನ್ನು ಪ್ರಾರಂಭಿಕ ಹಂತದ ಸಂಶೋಧಕರು ಗುರುತಿಸಿದ್ದರು. ನಂತರದ ಅನೇಕರು ಇದನ್ನೇ ಒಪ್ಪಿ ತಮ್ಮ ಚರ್ಚೆಗಳನ್ನು ಮಂಡಿಸಿದ್ದಾರೆ. ಆಕರಗಳ ಹೊಸ ದೃಷ್ಟಿಕೋನದ ಬಳಕೆಯಿಂದ ಹಲವು ವಿದ್ವಾಂಸರು, ಸಂಶೋಧಕರು ಹೊಸ ಫಲಿತಗಳನ್ನು ನೀಡಿ, ಈ ಇಬ್ಬರೂ ಬೇರೆ ಬೇರೆ ಎಂದೇ ಹೊಸ ಆಕರಗಳ ಆಧಾರಗಳನ್ನು ನಂತರದಲ್ಲಿ ನೀಡಿ ಸಮರ್ಥಿಸುತ್ತಾರೆ. ಇಂತಹ ಎರಡೂ ದೃಷ್ಟಿಕೋನಗಳ ಚರ್ಚೆಯನ್ನು ಗಮನಿಸಿ ಈ ಇಬ್ಬರು ಏಕೆ ಬೇರೆ ಬೇರೆ ಎನ್ನುವುದನ್ನು ಆಧ್ಯಯನದಲ್ಲಿ ನಿರೂಪಿಸಲಾಗಿದೆ.

- ಜೇಡರದಾಸಿಮಯ್ಯ ಆದ್ಯವಚನಕಾರನಾದರೂ, ಬಸವಣ್ಣನಿಗಿಂತ ಹಿರಿಯನೇ ಎಂಬುದು ಈಗಾಗಲೇ ನಿರ್ಣಯಗೊಂಡ ಸತ್ಯ. ಕೆಲವು ಕಾವ್ಯ-ಪುರಾಣಗಳಲ್ಲಿ ಅದನ್ನು ತಲೆಕೆಳಗಾಗಿಸಿ, ಬಸವಣ್ಣನೇ ಜೇಡರದಾಸಿಮಯ್ಯನಿಗೂ ಹಿರಿಯನೆಂದು ನಿರೂಪಿಸಲಾಗಿದೆ. ಫ.ಗು.ಹಳಕಟ್ಟಿ, ನಂದೀಮಠ.ಎಸ್.ಸಿ ಅವರಿಂದ ಹಿಡಿದು ಇತ್ತೀಚಿನ ಚರ್ಚೆಗಳನ್ನು, ಆಕರಗಳನ್ನು ಆಧಾರವಾಗಿ ತೆಗೆದುಕೊಂಡು ಬಸವಣ್ಣನು ದೇವರದಾಸಿಮಯ್ಯ ಹಾಗೂ ಜೇಡರದಾಸಿಮಯ್ಯರಿಗಿಂತಲೂ ಕಿರಿಯನು ಎಂಬುದನ್ನು ಕಂಡುಕೊಳ್ಳಲಾಗಿದೆ. ಹಾಗೇ ವೀರಶೈವ ಆಂದೋಲನದ ಮೊದಲ ರೂವಾರಿ ಜೇಡರದಾಸಿಮಯ್ಯ ಎಂದು ಗುರುತಿಸಲಾಗಿದೆ.

- ಕಲ್ಯಾಣ ಚಾಲುಕ್ಯರ ಎರಡನೇ ಜಯಸಿಂಹನ ರಾಣಿ ಸುಗ್ಗಲಾದೇವಿ ದೇವರದಾಸಿಮಯ್ಯನ ಶಿಷ್ಯೆ, ಈಕೆಗೂ ಜೇಡರದಾಸಿಮಯ್ಯನಿಗೂ ಯಾವುದೇ ಸಂಬಂಧವಿಲ್ಲ. ಬಹುಪಾಲು ಕವಿಗಳು ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ ಒಂದೇ ಎಂದು ಭಾವಿಸಿ, ಜೇಡರದಾಸಿಮಯ್ಯನನ್ನು ಸುಗ್ಗಲಾದೇವಿಯ ಗುರು ಎಂದು ತಮ್ಮ ಕಾವ್ಯಗಳಲ್ಲಿ ದಾಖಲಿಸುತ್ತಾರೆ. ಇಲ್ಲಿ ಖಚಿತ ದಾಖಲೆಗಳು ಎಂದು ಪರಿಗಣಿಸಿರುವ ಯಾವುದೇ ಶಾಸನಗಳಲ್ಲಿ, ವಚನಗಳಲ್ಲಿ ಈ ಬಗ್ಗೆ ಸುಳಿವುಗಳಿಲ್ಲ. ದೇವೂರು ಶಾಸನವು ಸುಗ್ಗಲಾದೇವಿಗೆ

ಸಂಬಂಧಿಸಿದ್ದಾದ್ದರಿಂದ, ಅದನ್ನೇ ಆಧರಿಸಿ ಹೇಳುವುದಾದರೆ ಅದರಲ್ಲಿ ದೇವರದಾಸಿಮಯ್ಯನ ಶಿಷ್ಯೆ ಹಾಗೂ ಎರಡನೇ ಜಯಸಿಂಹನ ಪತ್ನಿ ಎಂದೇ ಇದೆ. ವಚನಗಳಲ್ಲೆಲ್ಲಿಯೂ ದೇವರದಾಸಿಮಯ್ಯ ಹಾಗೂ ಸುಗ್ಗಲಾದೇವಿಯ ಉಲ್ಲೇಖಗಳು ಕಂಡು ಬರುವುದಿಲ್ಲ. ಈ ಎಲ್ಲಾ ಆಧಾರಗಳನ್ನು ಪರಿಗಣಿಸಿ ಜೇಡರದಾಸಿಮಯ್ಯನಿಗೂ ಸುಗ್ಗಲೆಗೂ ಯಾವುದೇ ಸಂಬಂಧವಿಲ್ಲ, ಈಕೆ ಪೊಟ್ಟಲಕೆರೆಯ ಉತ್ತರೇಶ್ವರಲಿಂಗ ಪವಾಡ ಮೆರೆದ ದೇವರ ದಾಸಿಮಯ್ಯನಿಗೆ ಸಂಬಂಧಿಸಿದಾಕೆ, ಆತನ ಶಿಷ್ಯೆ ಎಂಬ ನಿರ್ಣಯಕ್ಕೆ ಬರಲಾಗಿದೆ. ಹಾಗೆಯೇ ಜೇಡರದಾಸಿಮಯ್ಯನ ಪತ್ನಿ ದುಗ್ಗಳೆಯನ್ನು ದೇವರದಾಸಿಮಯ್ಯನ ಪತ್ನಿ ಎಂದು ಕರೆಯಲಾಗುತ್ತಿದ್ದು, ಇದರ ಬಗ್ಗೆ ಅನೇಕ ವಿದ್ವಾಂಸರು ಆಕ್ಷೇಪ ವ್ಯಕ್ತಪಡಿಸಿದ್ದಾರೆ. ಈ ವಿಷಯವನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ.

- ಜೇಡರದಾಸಿಮಯ್ಯನ ಕಾಲ ನಿರ್ಣಯದ ವಿಷಯದಲ್ಲಿ ಜಯಸಿಂಹ ಎಂಬ ರಾಜ ಪ್ರಮುಖನಾಗುತ್ತಾನೆ. ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ ಈ ಇಬ್ಬರ ಜೀವನದ ನಡಿಗೆಯಲ್ಲಿ ಜಯಸಿಂಹ ಎಂಬ ರಾಜನ ಪಾತ್ರ ಪ್ರಮುಖವಾಗುತ್ತದೆ. ಮೊದಲನೆಯದಾಗಿ ೨ನೇ ಜಯಸಿಂಹನಿಗೂ ದೇವರದಾಸಿಮಯ್ಯನಿಗೂ ನೇರ ಸಂಬಂಧವಿರುವುದು ತಿಳಿದುಬರುತ್ತದೆ. ಎರಡನೆಯದಾಗಿ ಜೇಡರದಾಸಿಮಯ್ಯನಿಗೂ ಜಯಸಿಂಹನಿಗೂ ನೇರ ಸಂಬಂಧವಿಲ್ಲ. ಜೇಡರದಾಸಿಮಯ್ಯನ ಸಮಕಾಲೀನನಾದ ಶಂಕರದಾಸಿಮಯ್ಯನಿಗೂ ಜಯಸಿಂಹನಿಗೂ ನೇರಸಂಬಂಧವಿದೆ. ಈ ಇಬ್ಬರ ಬದುಕಿನ ಕಾಲದಲ್ಲೂ ಜಯಸಿಂಹ ಎಂಬ ರಾಜನಿದ್ದದಂತು ನಿಜ. ಹಾಗಾಗಿ ದೇವರದಾಸಿಮಯ್ಯನ ಕಾಲದ ಜಯಸಿಂಹನಾರು? ಜೇಡರದಾಸಿಮಯ್ಯನ ಕಾಲದ ಜಯಸಿಂಹನಾರು? ಎಂಬ ಪ್ರಶ್ನೆಯನ್ನು ಎತ್ತಿಕೊಂಡು, ಅದನ್ನು ಚರ್ಚಿಸಲಾಗಿದೆ. ಕಲ್ಯಾಣ ಚಾಲುಕ್ಯರಲ್ಲಿ ನಾಲ್ಕು ಜನ ಜಯಸಿಂಹರು ಇದ್ದದ್ದು ತಿಳಿದುಬರುತ್ತದೆ. ಅದರಲ್ಲಿ ೨ನೇ ಜಯಸಿಂಹನು ದೇವರದಾಸಿಮಯ್ಯನ ಕಾಲ(ಕ್ರಿ.ಶ.೧೦೧೫-ಕ್ರಿ.ಶ ೧೦೪೫)ದಲ್ಲಿದ್ದವನು. ಇನ್ನು ಜೇಡರ ದಾಸಿಮಯ್ಯನ ತವನಿಧಿ ಬಯಲು ಪ್ರಸಂಗದ ನಂತರ ಶಂಕರದಾಸಿಮಯ್ಯನು ಕಲ್ಯಾಣದಲ್ಲಿ ವಿಷ್ಣುದಹನ ಪವಾಡವನ್ನು ರಾಜ ಜಯಸಿಂಹನೆದುರು ನೆರವೇರಿಸಿದನು ಎಂಬ ಉಲ್ಲೇಖ ದೊರೆಯುತ್ತದೆ. ಇದು ನಡೆದ ಕಾಲವನ್ನು ಅನ್ನಪೂರ್ಣ ಜಾಲವಾದಿಯವರು ಕ್ರಿ.ಶ ೧೧೭೫ ಎಂದು ಗುರುತಿಸುತ್ತಾರೆ. ಇದನ್ನಾಧರಿಸಿ ಹೇಳುವುದಾದರೆ ಈ ಕಾಲದಲ್ಲಿ ೪ನೇ ಜಯಸಿಂಹ ಕಲ್ಯಾಣದಲ್ಲಿ ಅಣ್ಣ ೬ನೇ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಯುವರಾಜನಾಗಿದ್ದಂತೆ ತಿಳಿಯುತ್ತದೆ. ೩ನೇ ಜಯಸಿಂಹನ ಕಾಲವೂ ಇದಕ್ಕೆ ಸಮೀಪವಿರುವುದರಿಂದ ಜೇಡರ ದಾಸಿಮಯ್ಯನ ಕಾಲದ ಜಯಸಿಂಹ ೨ನೇ ಜಯಸಿಂಹನಾಗಿರದೆ, ಆತನ ನಂತರದ

೩ನೇ ಜಯಸಿಂಹನೋ ಅಥವಾ ನಾಲ್ಕನೇ ಜಯಸಿಂಹನೋ ಆಗಿರಬೇಕು ಎಂಬ ಸತ್ಯವನ್ನು ಕಂಡುಕೊಳ್ಳಲಾಗಿದೆ. ಇದೇ ಆಧಾರದ ಮೇಲೆ ದೇವರದಾಸಿಮಯ್ಯನ ಕಾಲ ಕ್ರಿ.ಶ ೧೧ನೇ ಶತಮಾನದ ಆರಂಭ ಎಂದು ನಿರ್ಣಯಿಸಿದರೆ, ಜೇಡರದಾಸಿಮಯ್ಯನ ಕಾಲವನ್ನು ನಿಖರವಾಗಿ ೧೧ನೇ ಶತಮಾನದ ಕೊನೆಯಿಂದ ೧೨ ಶತಮಾನದ ಆರಂಭದ ಅರ್ಧ ಭಾಗ ಎಂದು ಗುರುತಿಸಿ, ಇಬ್ಬರ ನಡುವೆ ಸುಮಾರು ೫೦ ರಿಂದ ೬೦ ವರ್ಷಗಳ ಕಾಲದ ಅಂತರವಿತ್ತು ಎಂಬ ನಿರ್ಣಯಕ್ಕೆ ಬರಲಾಗಿದೆ.

- ಮಧ್ಯಕಾಲೀನ ಕನ್ನಡನಾಡಿನ ಚರಿತ್ರೆಯಲ್ಲಿ ಧರ್ಮರಾಜಕಾರಣದಿಂದಾಗಿ ಅನೇಕ ಸ್ಥಿತ್ಯಂತರಗಳು ನಡೆದು ಹೋಗಿವೆ. ಪ್ರಕರ್ಷಸ್ಥಿತಿಯಲ್ಲಿದ್ದ ಜೈನಧರ್ಮ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಳ್ಳುತ್ತಿರುವ ಸಂದರ್ಭದಲ್ಲಿ ಶೈವವು ವೀರಶೈವವಾಗಿ ಹೊಸ ರೂಪಧರಿಸುವ ತರಾತುರಿಯಲ್ಲಿತ್ತು, ಶೈವಶಾಖೆಗಳಾದ ಕಾಳಮುಖ ಹಾಗೂ ನಕುಳೀಶ ಪಾಶುಪತ ಪಂಥಗಳು ನಾಡಿನಾದ್ಯಂತ ತಮ್ಮ ಬೇರನ್ನು ಗಟ್ಟಿಗೊಳಿಸುವಲ್ಲಿ ಶ್ರಮಿಸುತ್ತಿದ್ದದ್ದು ಕಂಡುಬರುತ್ತದೆ. ಈ ಧರ್ಮವು ಹಲವಾರು ಮಠ-ಪೀಠಗಳನ್ನು ಮತ್ತು ಅನುಯಾಯಿಗಳನ್ನು ಹೊಂದಿತ್ತು. ಹಾಗೆ ಕರ್ನಾಟಕದಲ್ಲಿಯೂ ಸಹ ಅನೇಕ ಸ್ಥಳಗಳಲ್ಲಿ ಶಕ್ತಿ ಪೀಠಗಳನ್ನು ಸ್ಥಾಪಿಸಲಾಗಿತ್ತು. ಆಂಧ್ರಪ್ರದೇಶವೂ ಇದಕ್ಕೆ ಹೊರತಾಗಿರಲಿಲ್ಲ. ಇಂತಹ ಸಂದರ್ಭದಲ್ಲಿ ಅಭಿನವ ಪಾಶುಪತ ಅಥವಾ ವೀರಶೈವದ ಕೇಂದ್ರವಾದ ಮುದನೂರಿನಲ್ಲಿ ಜೇಡರದಾಸಿಮಯ್ಯನು ಪ್ರಭಾವಿ ಎಂದೆನಿಸಿದರೆ, ಶೈವ ಕೇಂದ್ರವಾದ ಆಂಧ್ರದ ಪೊಟ್ಟಲಕೆರೆಯಲ್ಲಿ ದೇವರದಾಸಿಮಯ್ಯನು ಪ್ರಭಾವಿಯಾದ ವ್ಯಕ್ತಿ ಎನಿಸುತ್ತಾನೆ. ಅವರಿಬ್ಬರ ಪ್ರಸರಣ ಮಾಧ್ಯಮಗಳು ಬೇರೆ ಬೇರೆಯೇ ಆಗಿವೆ. ಒಬ್ಬ ತನ್ನ ವಚನಗಳ ಮೂಲಕ ಸಾಮಾಜಿಕ ಕಾರ್ಯಗಳನ್ನು ಕೈಗೊಂಡಿದ್ದರೆ, ಮತ್ತೊಬ್ಬ ತನ್ನ ಬ್ರಹ್ಮಚರ್ಯತ್ವದಿಂದ ಬಹುಶಃ ಮಠಾಧಿಪತಿಯಾಗಿ ಸಾಮಾಜಿಕ ಸುಧಾರಣೆಯ ಕಾರ್ಯವನ್ನು ಕೈಗೊಂಡಿದ್ದನೆಂದು ನಿರ್ಣಯಕ್ಕೆ ಬರಬಹುದಾಗಿದೆ.

- ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ ಈ ಇಬ್ಬರ ಬಗೆಗಿನ ಆಕರಗಳಲ್ಲಿ ಹೆಚ್ಚು ಪ್ರಸರಣವನ್ನು ಪಡೆದಂತಹವು ಕಾವ್ಯಗಳು, ಪುರಾಣಗಳು. ಈ ಕೃತಿಗಳಲ್ಲಿ ಬರುವ ದಾಸಿಮಯ್ಯರ ಕಥೆ ಒಬ್ಬರ ಕಥೆ ಇನ್ನೊಬ್ಬನದೆಂದು ಹೇಳಿದ್ದರೂ, ಕಥಾ ಬೆಳವಣಿಗೆಯ ದೃಷ್ಟಿಯಿಂದ ವೈವಿಧ್ಯಪೂರ್ಣವೆನಿಸುತ್ತವೆ. ಈಗಾಗಲೇ ಡಿ.ಎಲ್.ನರಸಿಂಹಾಚಾರ್ ಅವರ ಆಶಯದಂತೆ ಹಲವು ಕಾವ್ಯಗಳಲ್ಲಿ ದಾಸಿಮಯ್ಯನ ಕಥೆ ಹಲವು ತೆರನಾಗಿ ರಚನೆಗೊಂಡಿದ್ದು, ಆ ಎಲ್ಲಾ ಕಾವ್ಯಗಳನ್ನು ಇಲ್ಲಿ ವಿವರವಾಗಿ ಚರ್ಚೆಗೆ ತೆಗೆದುಕೊಂಡು ಯಾವ ಯಾವ ಕಾವ್ಯಗಳಲ್ಲಿ, ಯಾವ ಯಾವ ರೀತಿಯ ಕಥೆಯು ಹೆಣೆಯಲ್ಪಟ್ಟಿದೆ ಮತ್ತು ಯಾವ

ಯಾವ ರೀತಿಯಲ್ಲಿ ಕಥೆಯು ಬೆಳವಣಿಗೆ ಹೊಂದಿದೆ ಎನ್ನುವುದನ್ನು ಈ ಅಧ್ಯಯನದಲ್ಲಿ ದಾಖಲಿಸಲಾಗಿದೆ.

- ಹೀಗೆ ಸೇರಿಹೋದ ಕಥೆಗಳ ಪರಂಪರೆಯನ್ನು ಕಾವ್ಯಗಳಲ್ಲಿ ರಚನೆಗೊಂಡ ಪವಾಡ ಅಥವಾ ದಂತಕಥೆಗಳ ಆಧಾರದ ಮೇಲೆ ೧. ಹರಿಹರನಕಾವ್ಯ ಪರಂಪರೆ, ೨. ಬಸವಪುರಾಣ ಕಾವ್ಯ ಪರಂಪರೆ, ೩. ತ್ರಿಭುವನ ತಾತನ ಜೇಡರದಾಸಿಮಯ್ಯನ ರಗಳೆಯ ಪರಂಪರೆ, ೪. ಭೈರವೇಶ್ವರ ಕಾವ್ಯ ಕಥಾಮಣಿ ಸೂತ್ರ ರಥ್ನಾಕರ ಕೃತಿಯ ಪರಂಪರೆ ಎಂದು ವಿಂಗಡಿಸಿ ಕಥಾಬೆಳವಣಿಗೆಯ ಘಟ್ಟಗಳನ್ನು ಕಂಡುಕೊಳ್ಳಲಾಗಿದೆ.
- ಹರಿಹರನಲ್ಲಿ ರಚನೆಗೊಂಡ ಜೇಡರದಾಸಿಮಯ್ಯನ ತವನಿಧಿಯ ಪವಾಡದ ಕತೆಯು, ಬಸವಪುರಾಣದಲ್ಲಿಯೂ ಮುಂದುವರೆದಿದೆ. ಇದರೊಂದಿಗೆ ದೇವರದಾಸಿಮಯ್ಯನ ಉತ್ತರೇಶ್ವರಲಿಂಗದ ಪವಾಡದ ಕತೆಯು ಸೇರಿದೆ. ಹಾಗೆ ಈ ಇಬ್ಬರು ಶರಣರ ಚರಿತ್ರೆಗೆ ನದಿ ದಾರಿಬಿಟ್ಟ ಕತೆ, ವಿಷ ಸೇವಿಸಿದ ಕತೆ, ವಿಷ ಸರೋವರವನ್ನು ಶುದ್ಧಿಗೊಳಿಸಿದ ಕತೆ, ಪಿಪೀಲಿಕವನ್ನು ಮಾತನಾಡಿಸಿದ ಕತೆ, ಬಾಲಕನನ್ನು ಬದುಕಿಸಿದ್ದು ಹೀಗೆ ಹಲವಾರು ಕತೆಗಳು ಸೇರಿ ಕೆಲವೊಮ್ಮೆ ಯಾವ ಕತೆ ಯಾವ ಶರಣನಿಗೆ ಸೇರಿದ್ದು ಎಂದು ಗ್ರಹಿಸಲಾರದಷ್ಟು ಹದವಾಗಿ ಈ ಕಾವ್ಯಗಳಲ್ಲಿ ಸೇರಿಹೋಗಿರುವುದನ್ನು ಕಾಣಬಹುದು.
- ಜೇಡರದಾಸಿಮಯ್ಯನನ್ನು ಕುರಿತು ರಚಿಸಲಾದ ಎಲ್ಲ ಕಾವ್ಯಗಳ ವಸ್ತು ಧರ್ಮ ಪ್ರಸಾರ, ನೀತಿ ಬೋಧನೆ ಹಾಗೂ ತತ್ವಾಚಾರಗಳ ಪ್ರಸರಣೆಯಾಗಿದ್ದು, ಆ ಎಲ್ಲಾ ಕಾವ್ಯಗಳಲ್ಲಿ ದಾಸಿಮಯ್ಯನನ್ನು ಆಂಧೋಲನಕಾರನಾಗಿ ಬಿಂಬಿಸಲಾಗಿದೆ. ಮಧ್ಯಯುಗೀನ ಕಾಲದಲ್ಲಿ ಆಗಿ ಹೋದ ಶರಣರ ಆಂದೋಲನವು ಹಲವು ಮಹೋನ್ನತ ಹಾಗೂ ಕ್ರಾಂತಿಕಾರಿ ವಿಚಾರಗಳಿಂದ ಪ್ರೇರಣೆ ಹೊಂದಿದ್ದು, ಅಂತಹ ವಿಚಾರಗಳು ಹಾಗೂ ತತ್ವಾಚಾರಗಳ ಪ್ರಸರಣದ ರೂವಾರಿಯಾಗಿ ಕಾವ್ಯಗಳಲ್ಲಿ ಜೇಡರದಾಸಿಮಯ್ಯನು ಕಂಡುಬರುತ್ತಾನೆ. ಆತನು ತನ್ನ ವಚನಗಳಲ್ಲಿ ಸಮಾಜ ಸುಧಾರಕನ ಪಾತ್ರ ವಹಿಸಿದರೆ, ಕಾವ್ಯಗಳಲ್ಲಿ ಪವಾಡಗಳನ್ನು ಮೆರೆದು ಪವಾಡ ಪುರುಷನನ್ನಾಗಿ ಬಿಂಬಿಸಲಾಗಿದೆ. ಒಟ್ಟಾರೆ ಈ ಅಧ್ಯಯನದಲ್ಲಿ ದಾಸಿಮಯ್ಯನ ವ್ಯಕ್ತಿತ್ವವನ್ನು ಹಲವು ನೆಲೆಗಳಿಂದ ಪರಿಪೂರ್ಣಗೊಳಿಸುವ ಪ್ರಯತ್ನ ಮಾಡಲಾಗಿದೆ.
- ದಾಸಿಮಯ್ಯನಿಗೆ ಸಂಬಂಧಿಸಿದ ಮುದನೂರು, ಪೊಟ್ಟಲಕೆರೆ ಮೊದಲಾದ ಸ್ಥಳಗಳನ್ನು ಐತಿಹಾಸಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಇಲ್ಲಿ ಚರ್ಚೆಗೊಳಪಡಿಸಲಾಗಿದ್ದು, ಅಲ್ಲಿನ ದೇವಾಲಯಗಳು, ಅಂದಿನ ಜನಜೀವನ, ಇವುಗಳ ಮೇಲೆ ಆಧಾರವಾಗಿದ್ದ ರೀತಿ

ಮೊದಲಾದವುಗಳನ್ನು ಅನಾವರಣಗೊಳಿಸಲಾಗಿದೆ. ಸಾಂಸ್ಕೃತಿಕ ನೆಲೆಯಾಗಿ ಮುದನೂರು ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಅಲ್ಲಿನ ನೀರಿನ ವರತೆಗಳು, ಭೂ ಪ್ರದೇಶ, ದೇವಾಲಯಗಳ ಸಂಕೀರ್ಣತೆ, ದಾನ ದತ್ತಿಗಳ ದಾಖಲೆಗಳಿಂದ ಹಿಡಿದು ಇತ್ತೀಚಿನ ಪ್ರಸಿದ್ಧವಾದ ದೇವರದಾಸಿಮಯ್ಯನ ಜಾತ್ರೆ ಈ ಎಲ್ಲವುಗಳ ಸಾಂಸ್ಕೃತಿಕ ಅಧ್ಯಯನದ ಮಾದರಿಯನ್ನು ಇಲ್ಲಿ ಪೂರೈಸಲಾಗಿದೆ.

- ವಿಶೇಷವೆಂದರೆ ಮುದನೂರು ಜೇಡರದಾಸಿಮಯ್ಯನ ಊರಾಗಿದ್ದು, ಇಲ್ಲಿ ನಡೆಯುವ ಜಾತ್ರೆ ದೇವದಾಸಿಮಯ್ಯನ ಹೆಸರಿನಿಂದ ನಡೆಯುತ್ತದೆ. ಅಷ್ಟೇ ಅಲ್ಲದೆ ಈ ಜಾತ್ರಾ ಮಹೋತ್ಸವವು ಪುರಾತನ ಕಾಲದಿಂದ ನಡೆದುಕೊಂಡು ಬಂದಿರುವುದಾಗಿರದೆ, ಮುದನೂರು ವಚನಕಾರ ಜೇಡರದಾಸಿಮಯ್ಯನ ಊರು ಎಂದು ವಿದ್ವಾಂಸರು ದಾಖಲಿಸಿ, ಪ್ರಚುರಗೊಳಿಸಿದ ಮೇಲೆ ಊರಿನ ಹಿರಿಯರು ಸೇರಿ ಹೀಗೊಂದು ಜಾತ್ರೆಯನ್ನು ಏರ್ಪಡಿಸುವ ನಿರ್ಣಯ ಕೈಗೊಂಡು ಪ್ರಾರಂಭಿಸಿದ್ದಾಗಿದೆ.
- ರಾಮೇಶ್ವರ ದೇವಾಲಯ ಹಾಗೂ ಉತ್ತರೇಶ್ವರ ದೇವಾಲಯಗಳಿರುವ ಸ್ಥಳಗಳನ್ನು ಇಲ್ಲಿ ಗುರುತಿಸಲಾಗಿದ್ದು, ಇವು ನಿರ್ಮಾಣಗೊಂಡ ಕಾಲ, ಅಂದಿನ ರಾಜಮನೆತನ ಮೊದಲಾದವು ಗಳ ಬಗ್ಗೆ ಹೆಚ್ಚಿನ ಅಧ್ಯಯನ ನಡೆಯುವ ಅವಶ್ಯಕತೆ ಇದೆ. ಇದರಿಂದ ಮುದನೂರಿನ ಜೇಡರದಾಸಿಮಯ್ಯ ಹಾಗೂ ಆತನ ಆರಾಧ್ಯ ದೈವ ರಾಮನಾಥನ ಪ್ರಭಾವದ ವ್ಯಾಪ್ತಿಯನ್ನು ತಿಳಿಯಬಹುದಾಗಿದೆ.
- ಒಬ್ಬ ವಚನಕಾರನ ಸಾಹಿತ್ಯಿಕ ಹಾಗೂ ಆಧ್ಯಾತ್ಮಿಕ ಸಾಧನೆ ಪ್ರಮುಖವಾಗಿದ್ದು, ಇದಕ್ಕೆ ಪೂರಕವಾಗಿ ಆತನ ವೈಯಕ್ತಿಕವಾದ ವ್ಯಕ್ತಿಗತ ವಿವರಗಳು ಕಾರ್ಯ ನಿರ್ವಹಿಸುತ್ತವೆ. ಆ ನಿಟ್ಟಿನಲ್ಲಿ ಜೇಡರದಾಸಿಮಯ್ಯನ ವಿವಾಹ, ದಾಂಪತ್ಯ, ಸಾಮಾಜಿಕ ಬದುಕು ಎಲ್ಲವುಗಳನ್ನು ಒಳಗೊಂಡ ಅಧ್ಯಯನ ಇದಾಗಿದೆ.

ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ ಇಬ್ಬರು ಒಂದೇ ಅಥವಾ ಬೇರೆ ಬೇರೆ ಎಂಬ ವಾದ ಸಾಹಿತ್ಯ ಲೋಕದಲ್ಲಿ ಚರ್ಚಿತವಾಗುತ್ತಲೇ ಬಂದಿದೆ. ಆ ಕುರಿತು ಹಲವು ವಿವಾದಗಳೂ ನಡೆದುಹೋಗಿವೆ. ಹಾಗಿದ್ದಾಗಲೂ ಈ ಕುರಿತು ಅಧ್ಯಯನ ಅನಿವಾರ್ಯವಾಗಿದ್ದು, ಈ ಇಬ್ಬರು ಶರಣರಿಗೆ ಸಂಬಂಧಿಸಿದ ಶಾಸನಗಳು, ವಚನಗಳನ್ನು, ಪ್ರಾಚೀನ ಕಾವ್ಯಗಳು ಮೊದಲಾದವುಗಳನ್ನು ಆಧಾರವಾಗಿಸಿಕೊಂಡು, ಜೇಡರದಾಸಿಮಯ್ಯ ಹಾಗೂ ದೇವರದಾಸಿಮಯ್ಯ ಬೇರೆ ಬೇರೆ ಎಂಬ ನಿರ್ಣಯಕ್ಕೆ ಬರಲಾಗಿದೆ. ಅಷ್ಟೇ ಅಲ್ಲದೆ ಜೇಡರದಾಸಿಮಯ್ಯನಿಗೆ ಸಂಬಂಧಿಸಿದ ಸ್ಥಳಗಳು, ಪವಾಡ ಕತೆಗಳು, ಕಾವ್ಯ ಪುರಾಣಗಳನ್ನು ಎಲ್ಲವನ್ನು ಸಾಮಾಜಿಕ ಹಾಗೂ ಸಾಂಸ್ಕೃತಿಕ ನೆಲೆಯಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ.

# ೧. ಛಾಯಾಚಿತ್ರಗಳು



ಜೇಡರದಾಸಿಮಯ್ಯನ ದೇವಾಲಯ



ಉಮಾಮಹೇಶ್ವರ ವಿಗ್ರಹ



ದೇವಾಲಯದಲ್ಲಿನ ಶಾಸನ



ರಾಮೇಶ್ವರ
ದೇವಾಲಯದ
ರಾಮಲಿಂಗ



ರಾಮೇಶ್ವರ
ದೇವಾಲಯದ
ಮುಂದಿನ
ಪುಷ್ಕರಣಿ



ರಾಮೇಶ್ವರ
ದೇವಾಲಯದ
ಮುಂದಿನ
ಮತ್ತೊಂದು
ಪುಷ್ಕರಣಿ

ಪುಷ್ಕರಣಿಯ
ಕೆತ್ತನೆಗಳು





ಲಕ್ಷ್ಮಣ ತೀರ್ಥದ
ಬಳಿ ಇರುವ
ದಾಸಿಮಯ್ಯನ
ವಿಗ್ರಹ

ಲಕ್ಷ್ಮಣ ತೀರ್ಥದ
ಬಳಿ ಇರುವ ದುಗ್ಗಳೆಯ
ವಿಗ್ರಹ





ಲಕ್ಷ್ಮಣ ತೀರ್ಥ



ರಾಮೇಶ್ವರ ದೇವಾಲಯದಲ್ಲಿ
೨೦೦೩ರಲ್ಲಿ ಸ್ಥಾಪಿಸಿದ
ದಾಸಿಮಯ್ಯ ಮೂರ್ತಿ



ರಾಮೇಶ್ವರ
ದೇವಾಲಯದ
ಆವರಣದಲ್ಲಿ
ಭಗ್ನಗೊಂಡ
ಅವಶೇಷ



ರಾಮೇಶ್ವರ
ದೇವಾಲಯದ
ಆವರಣದಲ್ಲಿ
ಭಗ್ನಗೊಂಡ
ಅವಶೇಷ



ರಾಮೇಶ್ವರ
ದೇವಾಲಯದ
ಆವರಣದಲ್ಲಿ
ಭಗ್ನಗೊಂಡ
ಅವಶೇಷ



ರಾಮೇಶ್ವರ ದೇವಾಲಯದ
ಆವರಣದಲ್ಲಿನ ಶಾಸನ

# ೨. ಪರಾಮರ್ಶನ ಸಾಹಿತ್ಯ

## ಅ. ಗ್ರಂಥಗಳು


೧. ಅಂಜನಪ್ಪ ಯಳನಾಡು(ಸಂ), ಧರ್ಮ ಮತ್ತು ಮುಕ್ತ ವಿಚಾರ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ೨೦೦೮

೨. ಅನ್ನಪೂರ್ಣ ಜಾಲವಾದಿ, ಶಂಕರದಾಸಿಮಯ್ಯ ಪುರಾಣ, ವೀರಶೈವ ಅಧ್ಯಯನ ಸಂಸ್ಥೆ, ೧೯೯೯

೩. ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟಗಳು, ಪರಿಷ್ಕೃತ ಮುದ್ರಣ ಬೆಂಗಳೂರು ವಿಶ್ವವಿದ್ಯಾಲಯ ೨೦೧೪

೪. ಕನ್ನಡ ಸಾಹಿತ್ಯ ಚರಿತ್ರೆ ಸಂಪುಟಗಳು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೭೭

೫. ಕನ್ನಡ ಸಾಹಿತ್ಯ ಸಮೀಕ್ಷೆ, ಕನ್ನಡ ಸಾಹಿತ್ಯ ಅಕಾಡೆಮಿ, ೧೯೯೨

೬. ಕಲಬುರ್ಗಿ ಎಂ.ಎಂ., ಹರಿಹರನ ರಗಳೆಗಳು, ಕನ್ನಡ ವಿಶ್ವವಿದ್ಯಾಲಯ, ೧೯೯೯

೭. ಕಲಬುರ್ಗಿ ಎಂ.ಎಂ., ಶಾಸನಗಳಲ್ಲಿ ಶಿವಶರಣರು, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೭೮.

೮. ಕಲಬುರ್ಗಿ ಎಂ.ಎಂ., ಸಮಗ್ರ ವಚನ ಸಂಪುಟ ೧, ೨ ಕನ್ನಡ ಸಂಸ್ಕೃತಿ ಇಲಾಖೆ ಕರ್ನಾಟಕ ಸರ್ಕಾರ ಬೆಂಗಳೂರು.

೯. ಕಲಬುರ್ಗಿ ಎಂ.ಎಂ., ಬಿಜಾಪುರ ಜಿಲ್ಲಾ ಶಾಸನ ಸೂಚಿ, ಕನ್ನಡ ಅಧ್ಯಯನ ಪೀಠ, ಕನ್ನಡ ವಿಶ್ವವಿದ್ಯಾಲಯ ಧಾರವಾಡ, ೧೯೭೭

೧೦. ಕಲಬುರ್ಗಿ ಎಂ.ಎಂ., ಮಾರ್ಗ ಸಂಪುಟಗಳು ೧ ರಿಂದ ೮, ಸ್ವಪ್ನ ಬುಕ್ ಹೌಸ್, ಬೆಂಗಳೂರು. ೨೦೧೦-೨೦೧೬.

೧೧. ಕನ್ನಡ ವಚನ ಶ್ರೀ ದೇವಾಂಗ ಪುರಾಣವು, ದೇವಾಂಗ ಸಂಘ, ದೇವಾಂಗ ಹಾಸ್ಟಲ್ ರಸ್ತೆ, ಬೆಂಗಳೂರು, ೧೯೭೮

೧೨. ಕಪಟರಾಳ ಕೃಷ್ಣರಾಯರು, ಕರ್ನಾಟಕದ ಲಾಕುಳ ಶೈವರ ಇತಿಹಾಸ, ಕನ್ನಡ ಸಂಶೋಧನಾ ಸಂಸ್ಥೆ ಧಾರವಾಡ, ೧೯೫೫

೧೩. ಕಾಡದೇವರಮಠ. ಎಲ್.ಎಸ್, ಕನ್ನಡ ಸಾಹಿತ್ಯ ಚರಿತ್ರೆ: ಒಂದು ಸಮೀಕ್ಷೆ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೫

೧೪. ಕಿಂಕರ ರಮೇಶ ಮಾಳಾ, ತವನಿಧಿ, ಗಾಯಿತ್ರಿ ಪ್ರತಿಷ್ಠಾನ, ಗುಲಬರ್ಗ, ೨೦೦೫

೧೫. ಕೃಷ್ಣರಾಯರು.ಅ.ನ, ಭಾರತೀಯ ಸಂಸ್ಕೃತಿ ದರ್ಶನ, ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ ಮೈಸೂರು ಸರಕಾರ, ಬೆಂಗಳೂರು, ೧೯೬೨

೧೬. ಕುಲಕರ್ಣಿ.ಬಿಎಸ್(ಸಂ). ಸಮಯ ಪರೀಕ್ಷೆ, ಕನ್ನಡ ಅಧ್ಯಯನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೭. ಕೀರ್ತಿನಾಥ ಕುರ್ತುಕೋಟಿ, ಕನ್ನಡ ಸಾಹಿತ್ಯ ಸಂಗಾತಿ, ಕುರ್ತಕೋಟಿ ಮೆಮೋರಿಯಲ್ ಟ್ರಸ್ಟ್, ೨೦೦೯

೧೮. ಕೃಷ್ಣರಾಯರು ಅ.ನ., ಅ.ನ.ಕೃ ಅವರ ಸಮಗ್ರ ವೀರಶೈವ ಸಾಹಿತ್ಯ, ಸಾಗರ ಪ್ರಕಾಶನ ಬೆಂಗಳೂರು, ೨೦೦೮

೧೯. ಗಂಗಮ್ಮ ಎಚ್.ಎಸ್., ಮುದನೂರು ದಾಸಿಮಯ್ಯ ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೮೮

೨೦. ಗೋಗಿ ಹನುಮಾಕ್ಷಿ(ಸಂ), ಸುರಪುರ ತಾಲೂಕಿನ ಶಾಸನಗಳು, ೧೯೯೬

೨೧. ಚಂದ್ರಶೇಖರಯ್ಯ ಬಿ.ಎಂ., ಕರ್ನಾಟಕ ಸಂಸ್ಕೃತಿ ಪರಂಪರೆ, ಸಿ.ವಿ.ಜಿ. ಬುಕ್ಸ್, ಬೆಂಗಳೂರು, ೨೦೧೦

೨೨. ಚಂದ್ರಶೇಖರ್ ಎಸ್., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೯

೨೩. ಚಿತ್ಕಳ ಜೆ. ಮಠಪತಿ, ಜೇಡರದಾಸಿಮಯ್ಯ, ಹೈದ್ರಾಬಾದ್ ಕರ್ನಾಟಕ ಅಭಿವೃದ್ಧಿ ವಿಭಾಗ, ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಮಿತಿ, ಸೇಡಂ, ೨೦೧೧

೨೪. ಚಿದಾನಂದಮೂರ್ತಿ ಎಂ., ಸಂಶೋಧನಾ ತರಂಗಾ, ಸಪ್ನ ಬುಕ್‌ಹೌಸ್, ಬೆಂಗಳೂರು ೨೦೦೬

೨೫. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೯

೨೬. ಚಿದಾನಂದಮೂರ್ತಿ ಎಂ., ಚಿದಾನಂದಮೂರ್ತಿ ಸಂಪುಟಗಳು, ಸ್ವಪ್ನ ಪ್ರಕಾಶನ, ಬೆಂಗಳೂರು

೨೭. ಚಿದಾನಂದಮೂರ್ತಿ ಎಂ., ಹೊಸತು-ಹೊಸತು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೩

೨೮. ಚಿದಾನಂದಮೂರ್ತಿ ಎಂ., ವಚನ ಸಾಹಿತ್ಯ, ಸ್ವಪ್ನಾ ಬುಕ್ ಹೌಸ್, ಬೆಂಗಳೂರು, ೧೯೭೫.

೨೯. ಚಿದಾನಂದಮೂರ್ತಿ ಎಂ., ದೇವರ ದಾಸಿಮಯ್ಯ ಶಂಕರದಾಸಿಮಯ್ಯ ಜೇಡರ ದಾಸಿಮಯ್ಯ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೧೪

೩೦. ಚಿದಾನಂದಮೂರ್ತಿ ಎಂ, ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೫

೩೧. ಚೆನ್ನಪ್ಪ ಉತ್ತಂಗಿ, ಸಿದ್ಧರಾಮ ಸಾಹಿತ್ಯ ಸಂಗ್ರಹ, ಕನ್ನಡ ಕೋಟೆ ಪ್ರಕಾಶನ, ಸೋಲಾಪುರ.

೩೨. ಚೆನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೦

೩೩. ಜಯದೇವ್ ಹು.ಕಾ., ಶಾಸನ ಮತ್ತು ಗದ್ಯ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೯

೩೪. ಜಾಜಿ ದೇವೇಂದ್ರಪ್ಪ(ಅನು), ಶ್ರೀಶೈಲ ಪರಿಸರ ಸಾಂಸ್ಕೃತಿಕ ಅಧ್ಯಯನ, ಪ್ರಭುದೇವರ ಜನಕಲ್ಯಾಣ ಸಂಸ್ಥೆ, ಸಂಡೂರು, ೨೦೦೯

೩೫. ತಿಪ್ಪೇರುದ್ರಸ್ವಾಮಿ ಎಚ್., ಶರಣರ ಅನುಭವ ಸಾಹಿತ್ಯ, ಡಿ.ವಿ.ಕೆ ಮೂರ್ತಿ ಪ್ರಕಾಶಕರು ಮೈಸೂರು, ೧೯೯೮

೩೬. ತಿಪ್ಪೇರುದ್ರಸ್ವಾಮಿ ಎಚ್., ವೀರಶೈವ ದೀಪ್ತಿ, ಶರಣ ಸಾಹಿತ್ಯ ಪರಿಷತ್ತು, ಮೈಸೂರು, ೧೯೯೯

೩೭. ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ೨೦೦೩.

೩೮. ತಿಪ್ಪೇರುದ್ರಸ್ವಾಮಿ ಎಚ್., ಶರಣತತ್ವ ಚಿಂತನೆ, ಶರಣ ಸಾಹಿತ್ಯ ಪರಿಷತ್ತು, ಮೈಸೂರು, ೧೯೯೨.

೩೯. ದೇವರ ದಾಸಿಮಾರ್ಯ ಪ್ರಶಸ್ತಿ, ನಿಡುಮಾಮಿಡಿ ಸಂಸ್ಥಾನ, ೧೯೫೩

೪೦. ದೇವರದಾಸಿಮಾರ್ಯ ಪುರಾಣಮು, ಪ್ರಕಾಶಕರು ದೇವೇಂದ್ರಪ್ಪ ಗಿರಿಮಲ್ಲಪ್ಪ ಭದ್ರಪ್ಪ, ಜವಳಿ ವರ್ತಕರು, ಬನಹಟ್ಟಿ, ೧೯೬೨

೪೧. ದೇವೀರಪ್ಪ ಹೆಚ್., ರಾಚಪ್ಪ.ಆರ್(ಸಂ), ಶಿವತತ್ವ ಚಿಂತಾಮಣಿ, ಪ್ರಾಚ್ಯ ವಿದ್ಯಾ ಸಂಶೋಧನಾಲಯ ಮೈಸೂರು, ೧೯೬೮

೪೨. ದೇವೀರಪ್ಪ ಹೆಚ್., ಮತ್ತು ರಾಚಪ್ಪ ಆರ್(ಸಂ)., ಜೇಡರದಾಸಿಮಯ್ಯನ ವಚನಗಳು, ೧೯೭೪

೪೩. ದೇವೀರಪ್ಪ ಎಚ್., ಸಂಶೋಧನ ಸಂಪುಟ, ಶಿವಕುಮಾರ ಪ್ರಕಾಶನ ವಿಜಯನಗರ, ಬೆಂಗಳೂರು ೧೯೮೪

೪೪. ದೇವರಾಜ ಓ., ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ದಲಿತರು, ಪಲ್ಲವ ಪ್ರಕಾಶನ, ಚನ್ನಪಟ್ಟಣ, ೨೦೧೩

೪೫. ದೇವರದಾಸಿಮಯ್ಯನವರ ವಚನಗಳು ಮತ್ತು ಲೇಖನಗಳು, ದೇವಾಂಗ ಸಮಾಜ ಕರ್ನಾಟಕ, ಬೆಂಗಳೂರು, ೨೦೦೫

೪೬. ನಾವಲಗಿ ಸಿ.ಕೆ., ಜೇಡರ ದಾಸಿಮಯ್ಯ, ಬಸವ ಸಮಿತಿ, ಬೆಂಗಳೂರು, ೨೦೦೫

೪೭. ನರಸಿಂಹಚಾರ್ ಆರ್., ಕರ್ನಾಟಕ ಕವಿ ಚರಿತೆ ಸಂಪುಟಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೪೮. ನಂದೀಮಠ ಎಸ್.ಸಿ., ಎ ಹ್ಯಾಂಡ್ ಬುಕ್ ಆಫ್ ವೀರಶೈವಿಸಂ, ೧೯೪೨

೪೯. ನರಸಿಂಹಾಚಾರ್ಯ.ಡಿ.ಎಲ್(ಸಂ), ಸಿದ್ಧರಾಮ ಚರಿತ್ರ್ಯ, ತ.ವೆಂ.ಸ್ಮಾರಕ ಗ್ರಂಥಮಾಲೆ, ಮೈಸೂರು ೧೯೭೫

೫೦. ನಾರಾಯಣ ಪಿ.ವಿ., ವಚನ ಸಾಹಿತ್ಯ: ಒಂದು ಸಾಂಸ್ಕೃತಿಕ ಅಧ್ಯಯನ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಡಂಬಳ–ಗದಗ, ೧೯೮೩

೫೧. ನಾರಾಯಣ ಪಿ.ವಿ., ವಚನ ವ್ಯಾಸಂಗ, ಭಾಗ್ಯಲಕ್ಷ್ಮಿ ಪ್ರಕಾಶನ, ಬೆಂಗಳೂರು, ೧೯೮೨

೫೨. ಪೂಜಾರ ವ್ಹಿ.ಜಿ., ವೀರಶೈವ ಸಾಹಿತ್ಯದಲ್ಲಿ ಪವಾಡ ಕಥೆಗಳು, ಪುಸ್ತಕ ಅಕಾಡೆಮಿ, ಕಲಬುರ್ಗಿ, ೧೯೯೧

೫೩. ಬಸವರಾಜು ಎಲ್(ಸಂ)., ದೇವರದಾಸಿಮಯ್ಯನ ವಚನಗಳು, ಗೀತಾ ಬುಕ್ ಹೌಸ್, ಮೈಸೂರು, ೧೯೭೦

೫೪. ಬಸವರಾಜು ಎಲ್., ಬಸವಪೂರ್ವಯುಗದ ವಚನಕಾರರು, ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಾಪುರದೊಡ್ಡಿ

೫೫. ಬಸಪ್ಪ ಎಸ್(ಸಂ)., ಸಾನಂದ ಚರಿತೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೫೬. ದೇವೀರಪ್ಪ ಎಚ್., ರಾಜಪ್ಪ ಆರ್(ಸಂ)., ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ, ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು, ೧೯೬೮

೫೭. ಬಸವನಾಳ ಶಿ.ಶಿ(ಸಂ), ಚೆನ್ನಬಸವ ಪುರಾಣ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೬೪

೫೮. ಬಸವಾರಾಧ್ಯ ಎನ್., ಲೇಖನ ಸಂಚಯ, ಪ್ರಾಚ್ಯಕಾವ್ಯ ಪ್ರಕಾಶನ ಮಂದಿರ, ಮೈಸೂರು, ೧೯೮೦

೫೯. ಭೂಸನೂರಮಠ ಸಂ.ಶಿ(ಸಂ), ಅದೃಶ್ಯಕವಿಯ ಪ್ರೌಢದೇವರಾಯನ ಕಾವ್ಯ, ಶ್ರೀ.ಮ.ನಿ.ಪ್ರ ಮೃತ್ಯಂಜಯ ಮಹಾಸ್ವಾಮಿಗಳು, ಮುರುಘಾಮಠ ಧಾರವಾಡ, ೧೯೫೭

೬೦. ಮಲ್ಲಾಪುರ ಬ್ಹಿ.ವಿ., ಶರಣ ಸರೋಜ, ಕುಮಾರ ವೀರೇಶ ಪ್ರಕಾಶನ ಕಲಬುರ್ಗಿ, ೧೯೬೭

೬೧. ಮಲ್ಲೇಪುರಂ.ಜಿ ವೆಂಕಟೇಶ, ಸಾಹಿತ್ಯ ಮತ್ತು ಪುರಾಣ, ಪವಿತ್ರ ಪಬ್ಲಿಕೇಶನ್ಸ್, ೨೦೦೮

೬೨. ಮಹದೇವಪ್ಪ ಸಿ, ವೀರಶೈವ ಸಾಹಿತ್ಯ ಮತ್ತು ಇತರ ಲೇಖನಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೦.

೬೩ ಮಹೇಂದ್ರ ಜಿ. ಹರಿಹರ, ದಲಿತ ವಚನಕಾರರು: ವೈಚಾರಿಕ ಪ್ರಜ್ಞೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೨೦೧೫

೬೪. ಮಂಜಪ್ಪಶೆಟ್ಟಿ ಎಂ.ಪಿ(ಸಂ)., ಕಿತ್ತನಕೆರೆವೀರ ವಿರಚಿತ ಎಲ್ಲಾ ಪುರಾತನರ ಪುರಾಣ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ,೧೯೮೫

೬೫. ಮುಗಳಿ ರಂ.ಶ್ರೀ, ಕನ್ನಡ ಸಾಹಿತ್ಯ ಚರಿತ್ರೆ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೧೯೫೩

೬೬. ಮುಗಳಿ ರಂ.ಶ್ರೀ, ತವನಿಧಿ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೫೭

೬೭. ಮೃತ್ಯುಂಜಯ ರುಮಾಲೆ, ಜೇಡರದಾಸಿಮಯ್ಯ, ಅಖಿಲ ಭಾರತ ಕನ್ನಡ ಸಾಹಿತ್ಯ ಪರಿಷತ್ತು, ಮೈಸೂರು, ೨೦೦೦

೬೮. ಮೋಹನ್‌ಕೃಷ್ಣ ರೈ, ಚರಿತ್ರೆ ಕಥನ, ಪಲ್ಲವ ಪ್ರಕಾಶನ, ಚನ್ನಪಟ್ಟಣ, ೨೦೦೯

೬೯. ರಾಜಗೋಪಾಲ ಎಮ್. ವಿಭೂತಿ ಮತ್ತು ಕೃಷ್ಣಾ ವಿ.ಸುಬೇದಾರ, ಸಗರ ನಾಡ ಸೌರಭ, ಓಕುಳಿ ಪ್ರಕಾಶನ, ಸುರಪುರ ೨೦೧೬

೭೦. ರವೀಂದ್ರನಾಥ ಕೆ, ಬಸವಯುಗದ ಶರಣರ ವಚನೇತರ ಸಾಹಿತ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೭೧. ರವಿಂದ್ರನಾಥ.ಕೆ, ಅಧ್ಯಯನದ ವಿಧಿ–ವಿಧಾನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೭೨. ರಂಗಸ್ವಾಮಿ ಡಿ.ಟಿ., ದೇವರದಾಸಿಮಯ್ಯನವರ ವಚನಗಳು, ಗಾಯಿತ್ರಿ ಪೀಠ, ಹಂಪಿ, ೨೦೦೫

೭೩. ರಂಗಸ್ವಾಮಿ ಡಿ.ಟಿ., ದೇವಾಂಗ ಕುಲದೀಪಕ ದೇವರ ದಾಸಿಮಯ್ಯ, ಚಿನ್ಮೂಲಾದ್ರಿ ಪ್ರಕಾಶನ, ಚಿತ್ರದುರ್ಗ, ೧೯೯೯

೭೪. ವಸಂತಕುಮಾರ ಬಿ.ವಿ., ಜೇಡರದಾಸಿಮಯ್ಯ ದೇವರದಾಸಿಮಯ್ಯ ಬೇರೆ ಬೇರೆಯಲ್ಲ, ೨೦೧೫

೭೫. ವಿದ್ಯಾಶಂಕರ್ ಎಸ್(ಸಂ)., ಭೀಮ ಕವಿಯ ಬಸವ ಪುರಾಣ, ೨೦೦೮

೭೬. ವಿದ್ಯಾಶಂಕರ ಎಸ್(ಸಂ)., ಸಂಕೀರ್ಣ ವಚನ ಸಂಪುಟ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೧

೭೭. ವಿದ್ಯಾಶಂಕರ ಎಸ್., ವೀರಶೈವ ಪುರಾಣಗಳು: ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೩

೭೮. ವಿದ್ಯಾಶಂಕರ ಎಸ್., ಸಮಗ್ರ ವಚನ ಸಂಪುಟ ೪, ೭, ೧೧, ಕನ್ನಡ ಸಂಸ್ಕೃತಿ ಇಲಾಖೆ ಕರ್ನಾಟಕ ಸರ್ಕಾರ, ಬೆಂಗಳೂರು.

೭೯. ವಿದ್ಯಾಶಂಕರ ಎಸ್., ವೀರಶೈವ ಸಾಹಿತ್ಯ ಚರಿತ್ರೆ ಸಂಪುಟಗಳು, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೧೩

೮೦. ವಿದ್ಯಾಶಂಕರ ಎಸ್., ವಚನಾನುಶೀಲನ, ಪ್ರಿಯದರ್ಶಿನಿ ಪ್ರಕಾಶನ ಬೆಂಗಳೂರು, ೧೯೭೫

೮೧. ವೇಣುಗೋಪಾಲ್ ಟಿ.ಎಸ್. ಮತ್ತು ಶೈಲಜ(ಅನು), ಪುರಾಣ ಮತ್ತು ವಾಸ್ತವ, ಚಿಂತನ ಪ್ರಕಾಶನ, ಶಿರಸಿ, ೨೦೦೩

೮೨. ಶಾಂತರಸ, ಬಸವ ಪೂರ್ವಯುಗದ ಶರಣರು, ಸತ್ಯಸ್ನೇಹ ಪ್ರಕಾಶನ, ರಾಯಚೂರು, ೧೯೭೨

೮೩. ಶಾಮರಾಯ ತ.ಸು, ಶಿವಶರಣ ಕಥಾರತ್ನಕೋಶ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೬೭

೮೪. ಶಾಮರಾಯ ತ.ಸು., ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ, ೧೯೭೪

೮೫. ಶಾಂತವೀರಯ್ಯ ಹೀ.ಚಿ., ಕನ್ನಡ ಸಾಹಿತ್ಯ ಪರಿಚಯ ಸಂಪುಟಗಳು, ಚೇತನ್ ಬುಕ್ಸ್, ಮೈಸೂರು

೮೬. ಸಮಗ್ರ ವಚನ ಸಂಪುಟಗಳು ೧–೧೫, ಕನ್ನಡ ಸಂಸ್ಕೃತಿ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು.

೮೭. ಸದಾನಂದ ಕನವಳ್ಳಿ ಮತ್ತು ಚನ್ನಪ್ಪ ಕೆರಿಮನಿ, ವೀರಶೈವ ಸಾಹಿತ್ಯ ಸಮೀಕ್ಷೆ(ಸಂ), ಮಹಾಕವಿ ಪಂಪ ಪ್ರಕಾಶನ, ಲಕ್ಷ್ಮೇಶ್ವರ, ೧೯೭೬

೮೮. ಸಿದ್ದಯ್ಯ ಪುರಾಣಿಕ, ಶರಣ ಚರಿತಾಮೃತ, ಸಂಸ್ಥಾನ ವಯಸ್ಕರ ಶಿಕ್ಷಣ ಸಮಿತಿಯ ಅಚ್ಚುಕೂಟ, ಮೈಸೂರು, ೧೯೬೪

೮೯. ಸೀತರಾಮಯ್ಯ ಎಂ.ವಿ, ಶಾಸ್ತ್ರ ಸಾಹಿತ್ಯ, ಸಪ್ನ ಬುಕ್ ಹೌಸ್, ಬೆಂಗಳೂರು,೨೦೧೯

೯೦. ಸುಂಕಾಪುರ ಎಂ.ಎಸ್(ಸಂ), ಹರಿಹರನ ನೂತನ ಪುರಾತನರ ರಗಳೆಗಳು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬

೯೧. ಸುಮಂಗಲಾ ಎಸ್. ಮೇಟಿ, ಕರ್ನಾಟಕ ಲಿಂಗಾಯತ ರಾಣಿಯರು ಒಂದು ಅಧ್ಯಯನ, ಮಂಗಳಾ ಪ್ರಕಾಶನ, ಹೊಸಪೇಟೆ, ೨೦೧೫

೯೨. ಹಳಕಟ್ಟಿ ಫ.ಗು., ಸಮಗ್ರಸಾಹಿತ್ಯ ಸಂಪುಟಗಳು ೧ ರಿಂದ ೧೩, ವಚನಪಿತಾಮಹ ಡಾ.ಫ.ಗು.ಹಳಕಟ್ಟಿ ಸಂಶೋಧನಾ ಕೇಂದ್ರ, ಬಿ.ಎಲ್.ಡಿ.ಇ.ಸಂಸ್ಥೆ, ಬಿಜಾಪುರ, ೨೦೦೭

೯೩. ಹಾಲಬಾವಿ.ವ್ಹಿ.ಬಿ(ಸಂ), ಶಂಕರ ದಾಸಿಮಯ್ಯ ಪುರಾಣ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ, ೧೯೪೧

೯೪. ಹಿರೇಮಠ ಬಿ.ಆರ್., ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೮೭

೯೫. ಹಿರೇಮಠ ಆರ್.ಸಿ(ಸಂ), ಚೆನ್ನಬಸವಣ್ಣ ವಚನಗಳು, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ

೯೬. ಹಿರೇಮಠ ಆರ್.ಸಿ(ಸಂ), ಬಸವಣ್ಣನವರ ವಚನಗಳು, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ

೯೭. ಹಿರೇಮಠ ಆರ್.ಸಿ., ಮತ್ತು ಸುಂಕಾಪುರ ಎಂ.ಎಸ್.(ಸಂ), ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ ಭಾಗ ೧-೨, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೪

೯೮. ಹಿರೇಮಠ ಆರ್.ಸಿ(ಸಂ)., ವೀರಶೈವಾಮೃತ ಪುರಾಣ ಭಾಗ ೧-೨ ಎನ್.ಎಸ್.ಎಸ್. ಕಲ್ಯಾಣ ಕೇಂದ್ರ, ಬೆಂಗಳೂರು

೯೯. ಹಿರೇಮಠ.ಆರ್.ಸಿ, ಮಹಾಯಾತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

೧೦೦. ಹಿರೇಮಠ ಬಿ.ಆರ್., ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪ್ರಸಾರಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೦

**ಆ.ಪತ್ರಿಕೆ ಹಾಗೂ ನಿಯತಕಾಲಿಕೆಗಳು**

೧. ಶಿವಾನುಭವ ಪತ್ರಿಕೆ ಕೆಲವು ಸಂಪುಟಗಳು

೨. ಸಂಶೋಧನ ವ್ಯಾಸಂಗದ ಕೆಲವು ಸಂಪುಟಗಳು

೩. ಬಸವ ಪಥದ ಮಾಸ ಪತ್ರಿಕೆಯ ಕೆಲವು ಸಂಚಿಕೆಗಳು

೪. ಶರಣ ಸಾಹಿತ್ಯ ಸಂಪುಟಗಳು ೯-೧೦

೫. ಪ್ರಜಾವಾಣಿ ೨೦೧೩, ೨೦೧೪, ೨೦೧೫ ರ ಕೆಲವು ಲೇಖನಗಳು, ವಾಚರವಾಣಿಯ ಹೇಳಿಕೆಗಳು.

೬. ಕನ್ನಡ ಪ್ರಭ, ಕೆಲವು ಲೇಖನಗಳು ೨೦೧೫

**ಇ. ಸ್ಮರಣ ಸಂಚಿಕೆಗಳು**

೧. ತವನಿಧಿ, ಸ್ಮರಣ ಸಂಚಿಕೆ ೨೦೧೩ ಕರ್ನಾಟಕ ರಾಜ್ಯ ದೇವಾಂಗ-ನೇಕಾರರ ಹಾಗೂ ನೌಕರರ ಸಮಾವೇಶ ಹೊಸದುರ್ಗ.

೨. ಸುರಗಿರಿ, ಸ್ಮರಣ ಸಂಚಿಕೆ, ಸುರಪುರ

